# ಮಣಿ ಮೇಖಲಾ

ಮಲ್ಲಿಕಾ

ಕುರ್ವನ್ನೇವೇಹ ಕರ್ಮಾಣಿ
ಜಿಜೀವಿಷೇತ್ ಶತಂ ಸಮಾಃ ।
ಏವಂ ತ್ವಯಿ ನಾನ್ಯಥೇತೋಽಸ್ತಿ
ನ ಕರ್ಮ ಲಿಪ್ಯತೇ ನರೇ ॥

Mani Mekhala in Kannada by 'Mallika'
Published by Lakshmi Prakashana,
170, Langford Road, Bangalore-560 025.

ಪ್ರಥಮ ಮುದ್ರಣ : ೧೯೯೦



ಬೆಲೆ : ಮೂವತ್ತು ರೂಪಾಯಿಗಳು

ಮುದ್ರಕರು :
**ನ್ಯೂ ಐಡಿಯೂಸ್**
ನಂ. 30, 15ನೇ ಮುಖ್ಯ ರಸ್ತೆ
ಮೂರನೆಯ ವಿಭಾಗ, ಜಯನಗರ
ಬೆಂಗಳೂರು–560 011

॥ ಶ್ರೀ ಶಾರದಾ ಪಾದಾರ್ಪಣಮಸ್ತು ॥

# ಮಣಿ ಮೇಖಲಾ

**ಮಲ್ಲಿಕಾ**

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು—560 025

# ಪರಿವಿಡಿ

# ನಿವೇದನೆ

ಕವಿ ಮತಿ ಪರಿಸರದ ಜನ ಜೀವನದ ಎಳೆಎಳೆಯನ್ನೂ ಮುಟ್ಟಿ ಸ್ಪಂದಿಸಿ ಮನದುಂಬಿಕೊಳ್ಳುವ ಸಾರಸರ್ವಸ್ವವನ್ನೂ ಕಥೆ–ಕವನ–ಕಾವ್ಯ–ಕಾದಂಬರಿಗಳ ರೂಪದಲ್ಲಿ ಮಸಿಯೊರತೆಯ ಮೂಲಕ ಹರಿಸುವುದು ಸರ್ವೇ ಸಾಮಾನ್ಯ. ಪ್ರತಿಹಂತ ಹಂತದಲ್ಲಿಯೂ ಹೊಸಹೊಸ ಅನುಭವ ಸಾರವನ್ನು ಸಾರವತ್ತಾಗಿ ಹರಿಸುತಿದ್ದರೆ ಅನುಭವವಿಲ್ಲದವರಿಗೆ ಚಿತ್ರವಿಚಿತ್ರವಾಗಿ ತೋರುವುದು ಸತ್ಯ. ಅಂತಹ ಸಂದರ್ಭದಲ್ಲಿ ಟೀಕೆ ಟಿಪ್ಪಣಿಗಳು, ಮುಮ್ಮಾತಿನ ಕೂರ್ಬಾಣಗಳು ಹುಟ್ಟಿಕೊಳ್ಳುತ್ತವೆ ಕಾಲೋಚಿತವಾಗಿ. ಆಗ ತಿರಸ್ಕಾರಕ್ಕಿಂತಲೂ ಸಹಾನುಭೂತಿಯೇ ಶ್ರೇಯಸ್ಕರ ಕವಿಮನಮತಿಗಳಿಗೆ. ಸಾಮಾನ್ಯ ಚಿಂತನೆಗೆ ದಿವ್ಯ ಭಾವನೆಯು ಅನುಭವಾತೀತವಾಗಿರುವಂತೆಯೇ ಸಾಹಿತ್ಯದಲ್ಲಿರುವ ತಿರುಳು–ಹುರುಳುಗಳು ಗಹನವಾಗಿ ಮನಮಂಥನೆಗೆ ನಿಲುಕದಿರಬಹುದು. ಆ ದುರ್ಮುಹೂರ್ತದಲ್ಲಿ ವಿಮರ್ಶಕನಾಗುವುದಕ್ಕಿಂತಲೂ ಮೌನಭಾರ ವಹಿಸುವುದು ಲೇಸು. ಏಕೆಂದರೆ, ಕವಿಮನೋಗತಿಯ ರಸತಪಸ್ಸಿಗೆ ವೇದ್ಯವಾಗುವ ಜಗತ್ತಿನ ನಾಡಿನಾಡಿಗಳಲ್ಲಿನ ವಿದ್ಯಮಾನಗಳು ಚಿರ ಸತ್ಯ. ಆ ಸತ್ಯದ ಅರಿವು ಮೂಡುವ ಮುನ್ನ ಮಾಡುವ ವಿಮರ್ಶೆಗೆ ಕಾಲಮಾನದ ನೆಲೆ–ಬೆಲೆ ದೊರೆಯದೆ ಹೋಗಬಹುದು. ಅದರಿಂದ ಶ್ರಮ–ಸಾಧನೆ ಎರಡೂ ವ್ಯರ್ಥವೇ.

ಅತೀಂದ್ರಿಯ ಜಗತ್ತಿನ ಸಾರ್ಥಕ ಭಾವವಿಭಾವಗಳ ದಿವ್ಯ ನವನೀತವನ್ನು ಮನಸೇಚ್ಛೆ ಸವಿಯುವ ಭಾಗ್ಯವು ಲಭಿಸಿಯೂ ಅರ್ಥೈಸಲಾರದೆಯೇ ಅಡವಿ ಪಾಲಾದಾಗ ಆಳವಾದ ಚಿಂತನೆ–ಧ್ಯಾನ–ತಪಸ್ಸುಗಳೇ ನಿಜವಾದ ಸಾಹಿತ್ಯ ಮಂಥನಕ್ಕೆ ಕಡೆಗೋಲು. ಅಲ್ಲದೆ, ಪುರಾತನೀಯವಾದ ಅಂಥ ಪುರ

ಸ್ಕಾರವೂ ವಿನೂತನವಾದ ಮಂದ ತಿರಸ್ಕಾರವೂ ಮನೋ ಮಂಡಲದಿಂದ ದೂರವಾದರೆ ಸಾಹಿತ್ಯಕ್ಕೆ ಸಮತೋಲನ ದೊರೆಯುವುದು ಸತ್ಯ. ಕವಿಯ ಹೃದಯದಲ್ಲಿ ವಿಷಯ ಮಂಥನದಿಂದ ಸಾಕಾರವಾಗಿ ರೂಪುಗೊಂಡ ಸಾಹಿತ್ಯ ಆಯಾ ಕಾಲಮಾನದ ಕಥೆ–ವ್ಯಥೆಗಳೇ ಆಗಿರುತ್ತವೆ. ಅವನ್ನು ತಿಳಿದು ಅನುಭವಿಸುವ ಅನುಭವ ವಾಚಕನ ಭಾಗಕ್ಕೆ ಕಲ್ಲು ಸಕ್ಕರೆ. ಅದನ್ನು ಗಟ್ಟಿಯೆಂದು ಸ್ವಾದಿಸಲಾರದೆ ಹೋದರೆ ಪುನರ್ಮಂಥನ–ಚಿಂತನಗಳೇ ಸಾರ್ಥಕತೆಯ ಪಥ ಹಿಡಿಸಬೇಕಾದರೆ, ದುರ್ಮಾನದಿಂದ ದಿಕ್ಕೆಟ್ಟರೆ ಬಾನೆತ್ತರದ ಕವಿ ಹೃದಯದ ರಸಸ್ವಾದನೆ ಅಲಭ್ಯ.

ಮುಖ್ಯವಾಗಿ ಕಥಾವಸ್ತುವನ್ನೂ ಸಾವಧಾನದಿಂದ ತೂಗಿ ನೋಡುವ ತುಲನಾತ್ಮಕವಾದ ವಿಮರ್ಶೆಯೇ ಸಾಹಿತ್ಯಕ್ಕೆ ಸರಿಸಮನಾಗಿ ನಿಲ್ಲಬಲ್ಲ ಸತ್ಯ ವಸ್ತು.

ಪ್ರಮೋದನಾಮ ಸಂವತ್ಸರ ಆಶ್ವಯುಜ ಶುಕ್ಲ ವಿಜಯದಶಮಿ ಶನಿವಾರ

ಮಲ್ಲಿಕಾ
೨೯–೯–೧೯೯೦

# 'ತ್ಸುನಾಮಿ'

೧

He that can have patience
can have what he wills.

....ಆವ ದುರ್ನಿಮಿತ್ತವೋ ಮುಸ್ಸಂಜೆ ಕವಿಯುವ ಮುನ್ನವೇ ತಾರೆಗಳ ಅವತರಣ ಅಂಬರದಲ್ಲಿ.

....ಭೋರ್ ಭೋರ್ ಭೊರೆಂದು ಭೋರ್ಗರೆವ ಮಹಾಸಾಗರದ ತೀರ.

ನೂರಿನ್ನೂರು ಮೈಲಿಗಳ ಉದ್ದಗಲದ ಅದ್ಭುತ ಅಲೆಗಳು ಮೇಲಿಂದ ಮೇಲೆ ಬಂದು ತೀರವನ್ನು ರಪ್ ರಪ್ಪನೆ ಅಪ್ಪಳಿಸುತ್ತವೆ. ನೊರೆ ನೊರೆಯಾಗಿ ಬರುವ ಅಲೆಗಳ ಅದ್ಭುತ ವಾಹಿಯನ್ನು ನೋಡುತಿದ್ದರೆ ತೀರದ ಬಂಡೆಗಲ್ಲುಗಳನ್ನು ಬಡಿದು ಛಿದ್ರ ಛಿದ್ರಗೊಳಿಸುವುವೋ ಎಂಬಷ್ಟು ಭಯಾನಕ.

ತೀರದಿಂದ ಸ್ವಲ್ಪದೂರದಲ್ಲಿ ಒಂದು ಸುಂದರ ಹಳ್ಳಿ. ಅದರ ಹಿನ್ನೆಲೆಯಲ್ಲಿ ಬೆಟ್ಟಗಳ ಸುಂದರ ಸಾಲು. ಜಪಾನ್ ದೇಶದ ಆ ಹಳ್ಳಿ ಆ ಬೆಟ್ಟಗಳ ಸಾಲು ಮತ್ತು ಆ ಸಮುದ್ರ ತೀರ ಇತಿಹಾಸ ಪ್ರಸಿದ್ಧವಾದುದು. ಸಣ್ಣ ಸಣ್ಣ ಮನೆಗಳಿರುವ ಆ ಹಳ್ಳಿಯಲ್ಲಿ ಕೆಲವೇ ಕೆಲವು ದೊಡ್ಡ ಮನೆಗಳು ಮತ್ತೆಲ್ಲಾ ಸಾಧಾರಣ ದರ್ಜೆಯವು. ಒಂದು ಮಾತ್ರ ಮಹಡಿಹೊಂದಿದ ಎತ್ತರದ ಅತೀ ಪುರಾತನ ಮನೆ. ಪುರಾತನ ರೂಪುರೇಷೆ. ಪುರಾತನವೇ ಎಲ್ಲಾ. ಅಂತಲೇ ಹಾಮಾಗುಚಿಯು ಹಿರಿಯರ ಕಾಲದ ಮನೆಗೆ ಹೊಸರೂಪು ಲವಲೇಶವೂ ಬಂದಿರಲಿಲ್ಲ.

ಸಂಧ್ಯಾ ಸೂರ್ಯ ಪಶ್ಚಿಮ ವಾರ್ಧಿಗೆ ಕನಕರಂಗಿನಿಂದ ಇಳಿಯ ತೊಡಗಿದ್ದ. ದಿಗ್ದೇಶದಲ್ಲಿ ಕೆಮ್ಮುಗಿಲುಗಳು ತುಂಬಿ ಹೋಗಿದ್ದುವು. ಅರುಣಾರುಣನ ರಂಗು ಸಾಗರದ ಜಲರಾಶಿಯ ಮೇಲೆ ಹರಡಿ ಕೆನ್ನೀರಿನಂತೆ ಕಾಣುತಿತ್ತು. ಆ ಭಯಂಕರ ಮಹಾ ಸಾಗರದ ದೃಶ್ಯದ ಮೇಲೆ ಅತ್ಯಂತ ಕಾತರಯುಕ್ತ ನೋಟ ಹರಿಸಿದ್ದ ಹಾಮೂಗುಚಿ. ಸಾಗರದ ಜಲರಾಶಿ ಧುಮು ಧುಮಿಸುತ್ತ ಕೆನ್ನೀಲಿಗಟ್ಟುತಿತ್ತು. ತಂಗಾಳಿಯ ವೇಗ ಕ್ಷಣಕ್ಷಣಕ್ಕೂ ಬಿರುಸಾಗುತ್ತಿದೆ. ಅಲೆಗಳೂ ಬಿರುಗಾಳಿಯ ವೇಗಕ್ಕೆ ತುಯ್ದು ಹುಚ್ಚೆದ್ದು ಭೋರನೆ ಭೋರ್ಗರೆಯುತ್ತಿವೆ. ಒಂದು ಶತಮಾನದ ಹಿಂದೆ ಈಶಾನ್ಯದ ಪ್ರಾಂತ್ಯಗಳಾದ ಮಿಯಾಮಿ, ಇವಟೆ ಮತ್ತು ಆಮ್ಮೋರಿಗಳ ಮೇಲೆ 'ತ್ಸುನಾಮಿ' ಭಯಂಕರ ಅಲೆಗಳಿಂದ ರೊಚ್ಚಿಗೆದ್ದು ಅಪ್ಪಳಿಸಿತ್ತು. ಕೊನೆಯ ಪಕ್ಷ ಮೂವತ್ತು ಸಾವಿರ ಮನೆ ಮಠಗಳನ್ನು ಪ್ರಾಣಿಗಳನ್ನು ತೊಳೆದು ಕೊಚ್ಚಿ ಒಂದೇ ರಭಸದಲ್ಲಿ ಬಲಿತೆಗೆದುಕೊಂಡ ವಿಷಯ ಮನದಲ್ಲಿ ಸುಳಿಸುಳಿದಳಿಯಿತು! ಹಾಮೂಗುಚಿ ದೇಹದಾದ್ಯಂತ ಗಡಗಡ ನಡುಗಿದ. ಮೈರೋಮ ರೋಮಗಳು ಉದ್ಭಿನ್ನವಾದುವು. ಭಯಾಶ್ಚರ್ಯವಿಸ್ತೃತ ನಯನಗಳಿಂದ ನೋಡಿಯೇ ನೋಡಿದ. ಮಹಡಿಯ ಕಟಕಟೆಯನ್ನು ಹಿಡಿದುಕೊಂಡಿದ್ದರೂ ಗಾಳಿ ತನ್ನನ್ನು ಹಾರಿಸುವುದೋ ಎಂಬಷ್ಟು ಬಿರುಸು. ಇಡೀ ಸಮುದ್ರವೇ ನೀಲಗಟ್ಟುತ್ತಿರುವಂತೆ ತೋರುತ್ತಿದೆ. ಅಲೆಗಳ ಭೋರಾಟ ಕ್ಷಣಕ್ಷಣಕ್ಕೂ ಹೆಚ್ಚುತ್ತಿದೆ. ಆ ಅಲೆಗಳಲ್ಲಿ ಒಂದೇ ಒಂದು ಅಪ್ಪಳಿಸಿದರೆ ಇಡೀ ಹಳ್ಳಿ ಗಳಿಗೆಯಲ್ಲಿ ತೊಳೆದು ಹೋಗುವುದು ಖಂಡಿತ .... ವಿಷಯ ಮನವರಿಕೆಯಾದೊಡನೆಯೇ ಹೃದಯವ್ಯಾಪ್ತಿಗೆ ಮಾರಿ ಮಿಡಿಯಿತು. ತನ್ನನ್ನು ತಾನು ಪ್ರಯತ್ನಪೂರ್ವಕವಾಗಿ ಸಾವರಿಸಿಕೊಳ್ಳ ತೊಡಗಿದ.

ಕೆನ್ನೀಲಿಗಟ್ಟುತಿದ್ದ ಬೃಹದ್ ಅಲೆಗಳು ಕಪ್ಪು ತಳೆಯುವಂತೆ ತೋರುತ್ತಿವೆ.

ಸೂರ್ಯ ಮುಳುಗಿದ. ಕೆಮ್ಮುಗಿಲುಗಳು ಇನ್ನೂ ಕೆಂಗಲಿಸುತ್ತಲೇ ಇವೆ. ಚಂದ್ರ ಆಗಲೇ ಬಾನೇರಿದ್ದುದರಿಂದ ಬೆಳುದಿಂಗಳ ಹಾಲ್ಬೆಳಕು ಚೆಲ್ಲಿತ್ತು. ಆದ್ದರಿಂದ ಕತ್ತಲೆಯ ಭಯವಿರಲಿಲ್ಲ. ಹಾಮೂಗುಚಿ ಬಿಸಿಲುಮಚ್ಚಿನಿಂದ

ಇಳಿಯುದೆ ಭಯಂಕರ ಜಲಪ್ರಳಯದ ಸೂಚನೆ ನೀಡುತಿದ್ದ ಸಮುದ್ರದ ಗಂಭೀರ ಸ್ಥಿತಿಯನ್ನು ದಿಟ್ಟಿಸುತ್ತ ಚಿಂತಾಮಗ್ನನಾದ.

"ಓಜಿಸಾನ್ !"

ಎಲ್ಲಿಯದೋ ಕರೆ ಕಿವಿಗಳನ್ನು ತಟ್ಟನೆ ಮುಟ್ಟಿತು. ಯಾರಿರಬಹುದೆಂದು ಹಾಮಾಗುಚಿ ಅಂಗಳದ ಕಡೆ ಕತ್ತು ಆನಿಸಿ ನೋಡಿದ. ನೋಡಿಯೇ ನೋಡಿದ.

"ಓಜಿಸಾನ್ !" ಅದೇ ಕಂಠ ಮತ್ತೆ ಮೊಳಗಿತು, ಗಟ್ಟಿಯಾಗಿ.

ಹಾಮಾಗುಚಿ ತನ್ನ ಮೊಮ್ಮಕ್ಕಳಿಗೆ ಮಾತ್ರ 'ಓಜಿಸಾನ್' (ತಾತ) ಆಗಿರಲಿಲ್ಲ. ಇಡೀ ಹಳ್ಳಿಗೇ ಅವನು ಓಜಿಸಾನ್ ಆಗಿದ್ದ. ಬಹುಶಃ ಅವನೇ ಎಲ್ಲರಿಗಿಂತಲೂ ಹಿರಿಯನಿದ್ದರೂ ಇರಬಹುದು. ಅಂತಲೇ ಅವನಿಗೆ ಆ ಬಿರುದು. ಯಾರೊಬ್ಬರೂ ಹೆಸರು ಹಿಡಿದು ಕರೆಯುತ್ತಿರಲಿಲ್ಲವಾದ್ದರಿಂದ ಕರೆದವರು ಯಾರೆಂದು ಮಹಡಿಯಿಂದ ಗುರುತಿಸಲಾಗಲಿಲ್ಲ. ಹಾಮಾಗುಚಿ ಮತ್ತೊಮ್ಮೆ ಮೈಬಾಗಿ ಕೆಳಗಡೆ ನೋಡಿದ. ವ್ಯಕ್ತಿ ದೃಷ್ಟಿಗೆ ಬಿದ್ದ.

"ಯಾರಪ್ಪಾ ನೀನು ? ಒಂದು ಗಳಿಗೆ ಮೇಲೆ ಬಂದರೆ ಒಳ್ಳಿತು."

"ಆಗಲಿ, ಓಜಿಸಾನ್ !" ಆ ಕ್ಷಣನೇ ಮಾರುತ್ತರ ಹೊರಬಿತ್ತು, ಉತ್ಸುಕ ದನಿಯಲ್ಲಿ.

"ಸರಿ ...."

ಹಾಮಾಗುಚಿ ಅವನ ನಿರೀಕ್ಷಣೆಯಲ್ಲಿ ಕ್ಷಣಕ್ಷಣಗಳನ್ನು ಕಳೆಯುತಿದ್ದರೂ ಕಣ್ಮನಗಳು ಕೇಂದ್ರೀಕರಿಸಿದ್ದುದು ಭೋರ್ಗರೆವ ಭಯಂಕರ ಸಮುದ್ರದ ಮೇಲೆ. ಟೊಸಾಕು ದಡದಡನೆ ಮೆಟ್ಟಿಲುಗಳನ್ನೇರಿ ಮೇಲೆ ಬಂದ. ನೋಡಿದರೆ ಅತೀ ಉತ್ಸಾಹದಿಂದ ನಿಗಿನಿಗಿ ನಲಿಯುತಿದ್ದಾನೆ !

"ಏನಪ್ಪಾ, ಟೊಸಾಕು ?"

"ಓಜಿಸಾನ್," ನೀನೊಬ್ಬನೇ ಇಲ್ಲಿ ಏನು ಮಾಡುತಿದ್ದಿ ? ಶಿಂಟೋ ಹಬ್ಬದ ಸಲುವಾಗಿ ಏನೆಲ್ಲ ನಡೆಯುತ್ತಿದೆ? ವಾರ್ಷಿಕೋತ್ಸವದ ಏರ್ಪಾಡೇನು? ಹಬ್ಬ ಹೇಗಿರಬೇಕು? ಹಬ್ಬದೂಟಕ್ಕೆ ಏನೇನು ಇರಬೇಕು? ಎಂಬುದ

ನ್ನಾದರೂ ಯೋಚಿಸಿದ್ದೀಯಾ? ನೃತ್ಯರಂಗ ಹೇಗಿರಬೇಕು? ಬೀದಿ ನಾಟಕಕ್ಕೆ ಯಾರ್ಯಾರು ಸರಿಯಾದ ಪಾತ್ರ ಇವೊಂದೂ ನಿನ್ನ ಗಮನಕ್ಕೆ ಬಂದಿಲ್ಲವಲ್ಲಾ. ನಿನ್ನ ಎಲ್ಲರೂ ಓಜಿಸಾನ್ ಎಂದು ಕರೆಯುವುದು ವ್ಯರ್ಥ ಎನಿಸುತ್ತೆ ನನಗೆ!"

ಟೊಸಾಕು ಉಬ್ಬು ಹಲ್ಲುಗಳನ್ನು ಪ್ರದರ್ಶಿಸುತ್ತ ಅಜ್ಜನನ್ನೇ ನಿಟ್ಟಿಸಿದ. ಆಗಲೂ ಆ ಮಾತಿನಿಂದ ಅಂತಹ ಹುರುಪೇನೂ ಮೂಡಲಿಲ್ಲ ಹಾಮಾಗುಚಿ–ಗೆ. ತಲೆಯ ಮೇಲಿನ ಅಗಲವಾದ ಚಾಪೆಯ ಟೊಪ್ಪಿಯನ್ನೆತ್ತಿ ತಲೆಯನ್ನು ತುರಿಸಿ ಉಜ್ಜಿದ ಬಳಿಕ ಟೊಪ್ಪಿಗೆಯನ್ನು ಧರಿಸಿ ಅಂದ,

"ಅದೆಲ್ಲಾ ನಿಮ್ಮಂತಹ ಹುಡುಗರಿಗೆ. ನನಗೇಕೆ ಹೇಳು?"

"ಛೀ! ಅಷ್ಟು ಉದಾಸೀನನಾದರೆ ಹೇಗೆ ಓಜಿಸಾನ್?" ಎಂದು ಟೊಸಾಕು ಪುನಃ ಮುಂದುವರಿಧ "ಈ ಸಲ ಜಾನಪದ ಕುಣಿತಕ್ಕೆ ಆರಿಸಿದ ಹೊಸಹೊಸ ಜೋಡಿಗಳನ್ನು ನೋಡಿದರೆ ಯಾರಾದರೂ ಭ್ರಮಾಲೋಕದಲ್ಲಿ ಮುಳುಗಿ ಹೋದಾರು! ಜೋಡಿ ಅಂದರೆ ಜೋಡಿಗಳು! ಎಂಥ ರಂಗು ರಂಗಿನ ವೇದಿಕೆ, ವರ್ಣವರ್ಣದ ಚಪ್ಪರ. ಇಂಥ ಏರ್ಪಾಡು ಹಿಂದೆಂದೂ ನಡೆದಿರಲಿಲ್ಲ ಬಿಡು, ಕಣ್ತುಂಬ ನೋಡಬೇಕಾದುದು ಈ ಸಲಿಯ ವಿಜೃಂಭಣೆ. ಮಕ್ಕಳ ವಿಶೇಷ ಮೇಳ. ಸ್ತ್ರೀಯರ ಉಡುಗೆ ತೊಡಿಗೆ ಎಲ್ಲಾ ಈ ಹಿಂದೆಂದೂ ಕಾಣದಿದ್ದ ವಿಶೇಷನೆ. ಬಾ ಊರೊಳಗೆ ಒಂದು ಸುತ್ತು ಹೋಗೋಣ. ಊರಿನ ಮುದುಕಿಯರ ಶೃಂಗಾರವನ್ನು ನೀನು ನೋಡಿದರೂ ಸಾಕು. ಖಂಡಿತ ಡಂಗು ಬಡಿದು ಹೋಗುತ್ತಿ." ಹುಡುಗ ತಮಾಷೆಯ ದನಿಯಲ್ಲಿ ನುಡಿದು ಗಹಗಹಸಿ ನಕ್ಕುಬಿಟ್ಟ. ಹುಮ್ಮಸ್ಸೇ ಮೂರ್ತಿಯೆತ್ತಿ ಬಂದಷ್ಟು ಹುಮ್ಮಸ್ಸು.

"ನಿನ್ನದೆಲ್ಲಾ ಹುಡುಗು ಬುದ್ಧಿ." ಅಷ್ಟೇ ಉದಾಸೀನದಿಂದ ನುಡಿದ ಓಜಿಸಾನ್.

"ವ್ಹಾರೆವಾ! ನೀನು ಹೀಗೆಂದ ಮೇಲೆ ನಾನು ಏನು ಹೇಳಬಲ್ಲೆ?" ಉದ್ಗಾರ ತೆಗೆದ ಹುಡುಗ.

ಕೆನ್ನೀಲಿಯ ಮುಗಿಲ್ ಮೋಡಗಳ ನೆರಳು ಮೈಚಾಚಿದಂತೆ ಸಮುದ್ರ ದಟ್ಟ ನೀಲಿಗಟ್ಟುತಿತ್ತು. ಯಾವುದೋ ವಿಶಿಷ್ಟ ಸನ್ನಿವೇಶಕ್ಕೆ ತಯಾರಾಗುವಂತಹ ವಿಶೇಷವೇ ಕಾಣಿಸುತ್ತಿದೆ. ಹಾಮಾಗುಚಿ ಸಮುದ್ರದತ್ತ ಪುನಃ ದೃಷ್ಟಿ ಹಾಯಿಸಿದ. ತನುಮನಗಳ ತರತಮವೆಲ್ಲಾ ಚಿಲ್ಲನೆ ನಡುಗಿತು. ಎದೆಯಾಳದಿಂದ ಬಿಸಿಯುಸಿರು ದೀರ್ಘವಾಗಿ ಹೊರಬಿತ್ತು.

“ನೀನು ಸಂತೋಷ ಕೂಟದಲಿದ್ದು ಸಂತೋಷ ಪಡೆಯುವುದು ಬಿಟ್ಟು ಈ ಹಾಳು ಸಮುದ್ರವನ್ನು ನೋಡಿಕೊಂಡು ನಿಂತಿದ್ದೀಯೇ? ಸಮುದ್ರದುಬ್ಬರ ದಿನವೂ ನೋಡುವಂತಾದ್ದೆ! ಶಿಂಟೋಹಬ್ಬ ಬರುವುದು ಮುಂದಿನ ವರ್ಷ ಮಾತ್ರ. ಏಳು, ಹೋಗೋಣ. ಹಾಗೇ ಊರೊಳಗೆ ಒಮ್ಮೆ ಅಡ್ಡಾಡಿ ಬಂದರಾಯಿತು. ಕಣ್ಣು ಕುಕ್ಕುವಂತಹ ದೃಶ್ಯ ಈ ಸಲ ಊರಲ್ಲಿ. ‘ಮುರಓಸ’ (ಮುಖ್ಯಸ್ಥ) ನಿಗೆ ಬಿಡವೇ ಇಲ್ಲ. ಕ್ಷಣವೂ ನಿಂತಲ್ಲಿ ನಿಲ್ಲಲಾರ. ಕುಳಿತಲ್ಲಿ ಕೂರಲಾರ. ಓ, ನೋಡಬೇಕು ನೀನವನ ಕುಣಿದಾಟ. ಅವನ ಕೈ ಬಾಯ್‌ಗಳ ಚಟುವಟಿಕೆ ಯಂತ್ರವನ್ನೂ ಮೀರಿದ್ದು!” ನಿಗಿನಿಗಿ ನಲಿಯುತ್ತ ನುಡಿದ ಟೊಸಾಕು. ಕಣ್ಣುಗಳಲ್ಲಿ ಆಸೆಯ ಬೆಳಕು ಚೆಲ್ಲಿತು.

“ಓ, ದೇವರೇ! ಭಂಗ ಬನ್ನಗಳನ್ನು ಅರಿಯದ ಮುಗ್ಧ ಬುದ್ಧಿ ಏನೆಂದು ಹೇಳಲಿ?”

ಮನದಲ್ಲೇ ನರಳಿದ ಹಾಮಾಗುಚಿ. ಏನೂ ಹೇಳಲೂ ಬಾಯಿ ಬರಲಿಲ್ಲ. ಸಮುದ್ರ ನೀಲಿಯಷ್ಟೇ ನೀಲವಾಯ್ತು ಕೆಮ್ಮನೆಯ ಕೆಂಪು ಮುಖ ಬಿಂಬ.

“ಈಸಲಿ ಮನೆಮನೆಯಿಂದಲೂ ಸಾವಿರಾರು ಬೆಲೂನ್‌ಗಳನ್ನು ಹಾರಿ ಬಿಡುತ್ತಾರೆ! ಎಂತೆಂತಹ ಪಟಾಕಿಗಳೋ ಅವುಗಳಿಗೆ ಲೆಖ್ಖವೇ ಇಲ್ಲ. ಬಣ್ಣದ ಬೊಂಬೆಗಳ ಕುಣಿತ ಎಲ್ಲವೂ ಈಗಾಗಲೇ ಬೀದಿಗಿಳಿದಿವೆ. ಬಣ್ಣಬಣ್ಣದ ಮಣಿ ಸರಗಳ ಮೋಜು ನೋಡಬೇಕು ನೀನು. ಆ “ಚೋಜಾ’ (ಧನಿಕ) ಧರಿಸುವ ಉಡುಪು ಎಂತಾದ್ದು ಗೊತ್ತೇ? ನಿನಗೆ ಪ್ರಪಂಚದ ಪರಿವೇ ಇಲ್ಲ. ಇಲ್ಲಿ ಏಕಾಂಗಿಯಾಗಿ ಸಮುದ್ರ ನೋಡುತ್ತ ನಿಂತಿದ್ದಿ! ಇದೇನು ವಿಚಿತ್ರ ಹೇಳು? ನಡೆ

ಹೋಗೋಣ ಬೇಗ; ನಿನಗಾಗಿ ನನ್ನ ಸಮಯವೂ ವ್ಯರ್ಥವಾಗುತ್ತಿದೆ ಇಲ್ಲಿ." ಎನ್ನುತ್ತ ಕೈ ಹಿಡಿದುಕೊಂಡು ನುಡಿದ "ಬಾ, ಓಜಿಸಾನ್ ಹೋಗೋಣ."

"ನಿನ್ನದಿನ್ನೂ ಹುಡುಗು ಬುದ್ಧಿ ಬಿಡಯ್ಯಾ, ನಾನು ಈ ವಾರ್ಷಿಕೋತ್ಸವಗಳನ್ನು ತೊಂಭತ್ತೈದು ವರ್ಷಗಳಿಂದಲೂ ಕಾಡಿರುವೆನಲ್ಲ, ಮತ್ತೇನು ವಿಶೇಷ ಇದರಲ್ಲಿ ?"

"ನಿನ್ನ ನಿರ್ಲಕ್ಷ್ಯ ನನಗೆ ಅರ್ಥವೇ ಆಗುವುದಿಲ್ಲ. ಈ ಸಲ ಬೆಳೆ ಚೆನ್ನಾಗಿ ಬೆಳೆದಿದೆ. ಭತ್ತ ರಾಶಿ ರಾಶಿ ಬಿದ್ದಿದೆ. ಜನ ತುಂಬ ಸಂತೋಷದಿಂದಿದ್ದಾರೆ. ಅದಕ್ಕೇ ಈಸಲಿ ಎಂದಿಗಿಂತಲೂ ತುಂಬ ವಿಶೇಷ ! ಹೆಣ್ಣುಮಕ್ಕಳ ಖುಷಿ ನೋಡು, ಇಂತಹ ಸಂಭ್ರಮ ಯಾವಾಗಲೂ ಇರಲಿಲ್ಲ. ಇದನ್ನೆಲ್ಲಾ ನೋಡುತಿದ್ದರೆ ಮನಸ್ಸಿಗೆ ನೆಮ್ಮದಿ ಬರುವುದಿಲ್ಲವೇ ? ಅಯ್ಯಾ, ಓಜಿಸಾನ್! ತಡ ಮಾಡಿ ವೃಥಾ ಸತ್ ಸಮಯ ಹಾಳು ಮಾಡಿಕೊಳ್ಳಬೇಡ. ನಿನ್ನ ಈ ಸ್ವಭಾವದಿಂದಲೇ ನೀನು ಊರಿನ ಗಡಿ ದಾಟಲಿಲ್ಲ. ಫ್ಯೂಜಿಯಾಮ ನೋಡಲಿಲ್ಲ ಕೂಡ. ನಿನ್ನದು ಕೂಪಕೂರ್ಮ ನ್ಯಾಯ...." ಅವನು ಹೇಳುತ್ತಲೇ ಇದ್ದಾನೆ. ಇವನು ಕೇಳಿದನೋ ಬಿಟ್ಟನೋ ಎನ್ನುವಷ್ಟು ಅನ್ಯಮನಸ್ಕತೆ. ಮನಃಬುದ್ಧಿಗಳು ಎಲ್ಲೋ ಕೆಲಸ ಮಾಡುತ್ತಿವೆ. ಜೀವ ಒಳಗಿಂದೊಳಗೇ ತಳಮಳಿಸುತ್ತಿದೆ ಎದೆಯ ಹಕ್ಕಿ ವೀತರಾಗದಿಂದ ಹುಯ್ಯಲಿಡುತ್ತಿದೆ. ಏಕೆ, ಏನು ಎಂಬುದು ಸಂಪೂರ್ಣ ಅರ್ಥವಾಗದಿದ್ದರೂ ಅತೀಂದ್ರಿಯ ತಳಮಳ, ಸಂಕಟದ ಗಳಿಗೆ ಹತ್ತಿರ ಬರುತ್ತಿದೆ ಎಂಬುದನ್ನು ಸೂಚಿಸುತ್ತಲೇ ಇತ್ತು, ಮೈನಡುಗಿಸುವಂತೆ.

ಹಾಮಾಗುಚಿ ಪಶ್ಚಿಮ ದಿಗ್ದೇಶದ ಕಡೆ ನೋಡಿದ. ಕೆನ್ನೀಲಿಯ ಮೋಡಗಳು ದಟ್ಟೈಸುತ್ತಲೇ ಇವೆ. ಕೆಮ್ಮೋಡಗಳ ಕೆಂಗಾಂತಿ ಇನ್ನೂ ಮಾಸಿಲ್ಲ. ಕೆನ್ನೀಲಿ ಇನ್ನಷ್ಟು ಘನಿಸುತ್ತಿದೆ.

ಅಬ್ಬಾ, ಈ ಜಗತ್ತು ಏನದ್ಭುತ, ಎಂಥ ಭಯಾನಕ ! ಎಷ್ಟು ಸುರ ಸುಂದರ ಕೂಡಾ !

"ನಡೀ ಓಜಿಸಾನ್, ಸ್ವಲ್ಪ ಹೊತ್ತಿನೊಳಗಾಗಿಯೇ ಹಿಂದಿರುಗೋಣ. ಇಡೀ ಊರಿಗೆ ಊರೇ ಸಂಭ್ರಮದಿಂದಿರುವಾಗ ನೀನೊಬ್ಬನೇ ಇಲ್ಲಿರುವು ದೇನು ಚೆಂದ ?" ಹುಡುಗ ಒತ್ತಾಯಿಸಿದ.

ವೃದ್ಧ ಈ ಸಲಿ ನಿರ್ಲಕ್ಷ್ಯ ತೋರದೆ ಅವನೊಂದಿಗೆ ಮಹಡಿ ಇಳಿದ. ಬಿರುಗಾಳಿ ಒಂದೇಸಮನೆ ಬೀಸುತ್ತದೆ. ಮೆಟ್ಟಲಿಳಿಯುವಾಗ ತತ್ತರಿಸುತಿದ್ದ ಅಜ್ಜನನ್ನು ಹುಡುಗ ಹಿಡಿದುಕೊಂಡು ಅಪಾಯವಾಗದಂತೆ ಇಳಿಸಿಕೊಂಡ. ಆ ಸಣ್ಣ ಹಳ್ಳಿಯಲ್ಲಿ ಸಂಭ್ರಮವೋ ಸಂಭ್ರಮ. ಬೀದಿಗಳಲ್ಲಿ, ಆಟದ ಮೈದಾನಗಳಲ್ಲಿ ನಾಟಕ ಸಂಗೀತ ನೃತ್ಯಾಭ್ಯಾಸಗಳು ನಡೆಯುತ್ತಿವೆ. ಮಾತಿನ ಮರ್ಮರ, ನಗೆ ಚಟಾಕಿಗಳಿಗೆ ಕೊನೆಮೊದಲೇ ಇಲ್ಲ. ರಂಗುರಂಗಿನ ಬಟ್ಟೆಗಳಲ್ಲಿ ಜನ ಶೋಭಿಸುತ್ತಿದ್ದಾರೆ. ಮಕ್ಕಳು ಕುಣಿಯುತ್ತ ಕೇಕೆ ಹಾಕಿ ನಲಿಯುತಿದ್ದಾರೆ. ಈ ಸಂಭ್ರಮ ಯಾವತ್ತೂ ಹೀಗೆಯೇ ಇರಲಿ ಎಂದು ಆಶಿಸುವಂತಹ ಸಂಭ್ರಮವೇ ಸಂಭ್ರಮ !

ಇಬ್ಬರೂ ಬೀದಿಬೀದಿಗಳಲ್ಲಿ ಸುತ್ತಿ ಬಂದರು. "ಆಟದ ಬಯಲಿನ ಕಡೆ ಹೋಗೋಣ" ಎಂದು ಅಲ್ಲಿ ಎದುರಾದ ನಾಮಿಗೋಹಿ ಅಜ್ಜನಿಗೆ ಹೇಳಿದ,

"ನೀನು ಬಾರದಿದ್ದುದನ್ನು ನೋಡಿ ನಾನೇ ನಿನಗಾಗಿ ಟೊಸಾಕುವನ್ನು ಕಳಿಸಿದ್ದೆ. ಇಲ್ಲೆಲ್ಲ ನಡೆದ ಸಂಭ್ರಮ ನೋಡಿದ್ದಾಯ್ತಲ್ಲ. ಆ ಕಡೆ ಹೋಗೋಣ. ಅಲ್ಲಿ ನೋಡುವುದು ತುಂಬಾ ಇದೆ." ದನಿಯಲ್ಲಿ ಉತ್ಸಾಹ ತುಂಬಿ ತುಳುಕುತಿತ್ತು. ನಿಗಿನಿಗಿ ನಲಿಯುತ್ತ ನುಡಿದ ಅವನು.

"ನೋಡಪ್ಪಾ, ನಾಮಿಗೋಹೀ. ಈಗ ನಾನೊಂದು ಮಾತು ಹೇಳಿದರೆ ಈ ಮುದುಕನಿಗೆ ಅರಳೋ ಮರುಳೋ ಎಂದುಕೊಳ್ಳಬಹುದು ನೀವೆಲ್ಲಾ. ಅದೂ ಅಲ್ಲದೆ, ನಿಮ್ಮ ಸಂಭ್ರಮಕ್ಕೆ ಅಡ್ಡಿಯುಂಟುಮಾಡುವುದೂ ನನಗೆ ಇಷ್ಟವಿಲ್ಲ." ದನಿ ಎದೆಯಾಳದಿಂದ ಅನುಭವದ ಮೂಸೆಯಲ್ಲಿ ಕರಗಿ ಹೊರ ಬಿತ್ತು.

"ಏನು ಹೇಳು, ಓಜಿಸಾನ್."

"ನೀವು ವರ್ಷವೂ ಬೀದಿಯಲ್ಲಿ ಬಯಲಲ್ಲಿ ಹಬ್ಬದ ಉತ್ಸವ ಮಾಡು ವುದು ದಿಟ. ಈಸಲಿ ಒಂದು ವಿಶೇಷ ಯೋಜನೆಯನ್ನು ರೂಪಿಸಿಕೊಳ್ಳಬಾರ ದೇಕೆ?" ಗಾಭೀರ್ಯದಿಂದ ಹೊರಬಿತ್ತು ದನಿ.

"ಅಂದರೆ....?"

ಮೂವರೂ ಬಯಲಕಡೆ ನಡೆಯುತ್ತಲೇ ಮಾತುಕತೆಯನ್ನು ಮುಂದು ವರಿಸಿದರು.

"ಹಾಗೆಂದು ಹೇಳುವುದರಲ್ಲಿ ನನಗೊಂದು ಉದ್ದೇಶವಿದೆ ಎಂಬುದೂ ದಿಟ. ಅಲ್ಲದೆ ಬೆಟ್ಟದ ಮೇಲೆ ಈ ದೀಪಮಾಲೆಗಳೂ ಪತಾಕೆಗಳೂ ವಿಜೃಂಭಿಸಿ ದರೆ ಎಷ್ಟು ಚೆನ್ನ? ಶಿಂಟೋ ದೇವತೆಯು ಖಂಡಿತ ಸಂತುಷ್ಟಳಾಗುತ್ತಾಳೆ. ಯೋಚನೆ ಮಾಡು. ಅಲ್ಲದೆ ನಾನು ಇನ್ನೊಂದು ಮಾತು ಹೇಳಬೇಕಾಗಿದೆ.... ನೀನೇನನ್ನುತ್ತಿ? ಬೇಸರವಿಲ್ಲವಷ್ಟೆ?" ಕೇಳಿದ ಓಜಿಸಾನ್.

"ಏನು ಹೇಳಪ್ಪಾ ಓಜಿಸಾನ್" ಆಸಕ್ತಿಯಿಂದ ಹೇಳಿದ ಹಿಮಗೋಹೀ.

"ಕೇಳು, ಹಿಮಗೋಹೀ, ಹಿಂದೆ—ಬಹಳ ಹಿಂದೆ. 'ಮಿಾಜಿ' ಶಕೆಗಿಂತ ಹಿಂದೆ ಎನ್ನಬಹುದು. ಕೇಳು, ಆಗ ನನ್ನ 'ಓಜಿಸ್ಸಾನ್' ಸಣ್ಣವನಿದ್ದ. ಅವನು ಸ್ವಂತ ಕಣ್ಣುಗಳಿಂದ ನೋಡಿ ಅನುಭವಿಸಿದ ಮಹಾದಾರುಣ ಸಂಕಟವನ್ನು ನನಗೆ ಹೇಳಿದ್ದ. ಸಮುದ್ರದಲ್ಲಿ ನೂರಿನ್ನೂರು ಮೈಲಿಗಳುದ್ದದ ಭಾರೀ ಅಲೆ ಗಳು ಕಪ್ಪಗೆ ಕಪ್ಪು ತಳೆದು ಭೋರ್ಗರೆಯುತ್ತ ನುಗ್ಗಿ ಬಂದು ಮಿಯಾಮಿ, ಇವಟೆ ಮತ್ತು ಆವ್ಮೋರಿ ನಗರಗಳ ಮೇಲೆ ಅಪ್ಪಳಿಸಿ ಪೂರ್ತಿ ಪ್ರದೇಶವನ್ನು ತೊಳೆದು ನೊಣೆದು ನುಂಗಿದ ವಿಚಾರ ಹೇಳಿ ಹೇಳಿ ಬಣ್ಣಿಸುತಿದ್ದ. ಆಗ ಮನೆ ಮಠಗಳ ಸಹಿತ ತೊಳೆದು ಹೋದ ಜನರು ಐವತ್ತು ಸಾವಿರವೆಂದು ಅಂದಾಜು. ಈಗಿನ ಸಾಗರ ಲಕ್ಷಣಗಳನ್ನು ವೀಕ್ಷಿಸಿದರೆ ಅವನು ಹೇಳಿದ್ದ ಲಕ್ಷಣಗಳೇ ಕಂಡುಬರುತ್ತಿದೆ. ಈ ಸಲಿಯೂ ಭಯಂಕರವಾಗಿ ಭುಗಿಲೇಳ ಬಹುದು ಎನಿಸುತ್ತೆ ನನಗೆ. ಆದ್ದರಿಂದ ನಾವು ಈಗಿಂದೀಗಲೇ ಎಚ್ಚರ ವಹಿ ಸುವುದು ಒಳ್ಳೆಯದು. ಒಂದುವೇಳೆ ಭುಗಿಲೇಳದಿದ್ದರೂ ಎಚ್ಚರ ವಹಿಸುವುದ ರಿಂದ ನಷ್ಟವೇನಿಲ್ಲ. ಈ ಮುಂದಿನ ದಿನಗಳಲ್ಲಿ ಏನಾಗುತ್ತದೋ ಊಹಿಸು

ವುದು ಕಷ್ಟ. ಆದ್ದರಿಂದ ಈ ಸಲಿ ಶಿಂಟೋ ಹಬ್ಬವನ್ನು ಬೆಟ್ಟದ ಮೇಲೆ ಆಚರಿಸಿದರೆ ಅಪಾಯ ತಪ್ಪಿಸಬಹುದು."

ನಾಮಿಗೋಹೀ ಸ್ವಲ್ಪ ಹೊತ್ತು ಸುಮ್ಮನಾಗಿ ಸಮುದ್ರದ ಕಡೆ ನೋಡಿದ. ಕೆನ್ನೀಲಿ ಅಲೆಗಳು ನುಗ್ಗುತ್ತಿರುವುದು ನಿಜವೇ....ಹಾಗೆ ಯೋಚಿಸಿ ನೋಡಿದರೆ ಅವು ದಿನವೂ ಇದ್ದದ್ದೇ ಎನಿಸದಿರಲಿಲ್ಲ ಅವನ ಮನಸ್ಸಿಗೆ. ಹಾಗೂ ಹೀಗೂ ತೂಗುಯ್ಯಾಲೆಯಾಡಿತು ಅವನ ಮನಸ್ಸು. ಸ್ವಲ್ಪ ಹೊತ್ತು ತನ್ನಲ್ಲೇ ಯೋಚಿಸಿ "ಆಗಲಿ ಓಜಿಸಾನ್, ಈ ಬಗ್ಗೆ ಎಲ್ಲ ಮುರ ಓಸರೊಡನೆ ಮಾತಾಡಿ ನಿರ್ಧರಿಸುವೆ."

ಟೊಸಾಕು ಆಗಲೇ ಆಟದ ಬಯಲಿಗೆ ಓಡಿದ್ದಾನೆ. ಎಲ್ಲರ ಕುಣಿತದೊಂದಿಗೆ ಅವನೂ ಧಿಮಿಧಿಮಿ ಕುಣಿಯುತ್ತಿದ್ದಾನೆ. ಹಾಮಾಗುಚಿ ಹಬ್ಬದ ಸಂಭ್ರಮವನ್ನು ಕಣ್ತುಂಬ ನೋಡಿ ಮುಗುಳುನಕ್ಕು ನಾಮಿಗೋಹೀ–ಗೆಂದ "ಮಾಡಪ್ಪಾ ಮಾಡು ಬೆಟ್ಟದ ಮೇಲಾದರೆ ಎಲ್ಲರಿಗೂ ಹಿತ, ದೇವರಿಗೂ ಹಿತ....ಅಷ್ಟೇ ಅಲ್ಲ, ನೋಡಲಿಕ್ಕೂ ತುಂಬಾ ಚೆಂದ ಸೊಗಸು."

ಊರು ಇರುವುದು ಸಾನು ಪ್ರದೇಶದಲ್ಲಿ ಶಿಂಟೋ ದೇವಾಲಯ ಇರುವುದು ಬೆಟ್ಟದ ಮೇಲೆಯೇ. ಕತ್ತಲಾದ ಮೇಲೆ ಬೆಟ್ಟದಿಂದ ಇಳಿದು ಬರುವುದು ಕಷ್ಟವಾದ್ದರಿಂದ ಉತ್ಸವದ ಏರ್ಪಾಡು ಕೆಳಗಡೆಯ ಊರಿನಲ್ಲಿ. ನಾನೂರು–ಐನೂರು ಮನೆಗಳಿಗಿಂತ ಅಧಿಕವಾಗಿದ್ದ ಊರಿನಲ್ಲಿ ಹೆಚ್ಚುಕಡಿಮೆ ಇಪ್ಪತ್ತು ಸಾವಿರ ಜನರೂ ಅಧಿಕ ಸಂಖ್ಯೆಯ ಗೋಸಂಪತ್ತೂ ಕ್ರೋಢೀಕರಿಸಿದ ಹಳ್ಳಿ. ಇಂದಿನ ಪರಿಸ್ಥಿತಿಯಲ್ಲಿ ಜನರನ್ನು ಸ್ಥಳಾಂತರಿಸುವುದು ಕಷ್ಟವೇ. ಹಿಂದೊಮ್ಮೆ ಜ್ಯೋತಿಷ್ಕನೊಬ್ಬ ಈ ದೇಶಕ್ಕೊಂದು ಭಾರಿ ಕಂಟಕವಿದೆ ಎಂದು ಹೇಳಿದ್ದುಂಟು. ಆದರೆ, ಈ ಕಾಲದಲ್ಲಿ ಭವಿಷ್ಯವನ್ನು ನಂಬುವವರಾರು?....ತನ್ನಲ್ಲೇ ಯೋಚಿಸಿದ ಹಾಮಾಗುಚಿ, ಮೈಯಲ್ಲಿ ಚಿಲ್ಲನೆ ಹರಿದಾಡಿತು ತಣ್ಣೆತ್ತರು.

ಟೊಸಾಕು ಆಟದ ಬಯಲಿಂದ ಹಿಂದಿರುಗಲೇ ಇಲ್ಲ. ಅವನಿಗೆ ಆಟದ ಮೋಜೇ ಮೋಜು. ಹಾಮಾಗುಚಿ ಎಲ್ಲಿಡೆಯು ಸುತ್ತಾಡುವಷ್ಟು ಸುತ್ತಾ

ಡಿದ. ಎಲ್ಲರೂ ಕಂಡಕಂಡಲ್ಲಿ "ಓ ಓಜಿಸಾನ್, ಅಂತೂ ಬಂದೆಯಲ್ಲಾ ತುಂಬಾ ವಂದನೆಗಳು!" ಎಂದು ಅಭಿನಂದಿಸುವವರೇ. ಎಲ್ಲರಿಗೂ ಹಸ್ತಲಾಘವ ನಿತ್ತು ಹಿಂದಿರುಗುವಾಗ ಹೊತ್ತು ರಾತ್ರಿಯ ಹನ್ನೆರಡರ ಮುಹೂರ್ತವನ್ನು ದಾಟಿತ್ತು. ಅವನು ಅಭಿಭೂತನಂತೆ ಅನಿಷ್ಟನಂತೆ ಹಿಂದಿರುಗಿದ, ಎತ್ತರದ ಮಹಡಿಯ ಮನೆಗೆ.

ನಾವಿಗೋಹೀ ಅನೇಕ ಮುರಓಸರನ್ನು ಕಂಡು ಮಾತಾಡಿದ; ಎಲ್ಲರಿಗೂ ಮಕ್ಕಳನ್ನು ಹೊತ್ತುಕೊಂಡು ಬೆಟ್ಟ ಏರುವುದು ಕಷ್ಟ. ವೃದ್ಧರಿಗೂ ಹತ್ತಿ ಇಳಿಯುವುದು ಕಷ್ಟ ಎಂಬ ಧೋರಣೆ. ಯಾರಿಗೂ ಅಷ್ಟಾಗಿ ಮನಸ್ಸಿಲ್ಲ; ಮರುಳು ಅಜ್ಜ ಎಂಬ ಉದಾಸೀನ ಮನೋಭಾವ.

ರಾತ್ರಿಯಲ್ಲಿ ತಿಂಗಳ ಬೆಳಕು ಹಿಂದೆ ಸರಿದು ಕತ್ತಲೆಯ ತೆರೆ ತುಂಬಿ ಹರಡಿತು.

ಬೃಹದ್ ಸಮುದ್ರದ ಅಲೆಗಳು ಭೋರಿಡುತ್ತಿವೆ. ಕೆನ್ನೀಲಿಯ ಬೆಂಕಿಯಂತೆ ಉಬ್ಬಿ ಎದ್ದು ಕಾಣಿಸುವ ಚಿತ್ರ ಭಯಾನಕ. ಮಣಿಮಣಿಯಾಗಿ ಕಿಡಿಕಿಡಿಯಾಗಿ ಭುಗಿಲೇಳುವ ಅಲೆಗಳ ಉಗ್ರ ರೂಪ ಕಾಣಿಸುತಿದ್ದುದು ಭಯಾನಕ ಕಿಡಿಗಳಿಂದಲೇ. ಹಾಮಾಗುಚಿ ಭಯಭೀತಿ ತುಂಬಿದ ದೃಷ್ಟಿಯಿಂದ ಭಯಂಕರ ದೃಶ್ಯವನ್ನು ನೋಡುತಿದ್ದ. ಕಣ್ಣಿಗೆ ನಿದ್ದೆ ದೂರವಾಯಿತು. ಶಿಂಟೋಹಬ್ಬದ ಪ್ರಯುಕ್ತ ನೃತ್ಯ ಸಂಗೀತ ನಡೆಯುತ್ತಲೇ ಇದೆ. ಡೋಲು ತಮಟೆ ಸಂಗೀತ ಜನಗಳ ಹುಯ್ಲು ಮಕ್ಕಳ ಕೇಕೆ ಎಡೆಬಿಡದೆ ಕೇಳಿಸುತ್ತಲೇ ಇವೆ. ಬಲು ಸಡಗರ–ಸಂಭ್ರಮಗಳ ಒಕ್ಕೂಟದಲ್ಲಿ.

ಮರುದಿನ ಸೂರ್ಯ ಮೇಲೇರಿದರೂ ಯಾರೊಬ್ಬರೂ ಎದ್ದೇ ಇರಲಿಲ್ಲ. ಎಲ್ಲರೂ ಮನೆಮನೆಗೆ ಹಿಂದಿರುಗಿದ್ದು ಬೆಳಗಿನ ಝಾಮದಲ್ಲಿ, ಎಲ್ಲಾ ಮನೆಗಳೂ ಶಾಂತ ಸುಖ ನಿದ್ದೆಯಲ್ಲಿ ಮೈಮರೆತಿವೆ. ಹಾಮಾಗುಚಿ ಮಹಡಿಯೇರಿ ಬಿಸಿಲು ಮಚ್ಚಿನ ಮೇಲಿನಿಂದ ಸಮುದ್ರದ ಆಟಾಟೋಪವನ್ನು ಗಮನಿಸುತ್ತಿದ್ದ. ರಾತ್ರಿ ಕಾಣಿಸುತ್ತಿದ್ದ ಬೆಂಕಿಕಿಡಿಗಳು ಕಾಣಿಸದಿದ್ದರೂ ಉಗ್ರ

ಭಯಂಕರತೆ ಇಳಿದಿರಲಿಲ್ಲ. ಬೆಳಗಿನ ಚೆಂಬಿಸಿಲನ್ನೂ ತಡೆಯಲಾಗದಂತಹ ಪ್ರಖರತೆ ಪ್ರಕೃತಿಯ ವಾತಾವರಣದಲ್ಲಿ. ಇದೇನೋ ಅತೀ ವಿಶೇಷ, ಎಂದಿಲ್ಲದ ಅದ್ಭುತ ಬದಲಾವಣೆ ಎಂಬುದು ಮನೋಗತ ಮಾತ್ರವಲ್ಲ; ಆತ್ಮಗತವೂ ಹೌದು.

ಆದರೆ .... !

ಈ ಜನರಾಶಿ ಏನೇನೂ ಅರಿಯದಲ್ಲಾ ಎಂಬ ಸಂಕಟ ಮನದಲ್ಲಿ.

ತಡವಾಗಿ ಮಲಗಿದ ಜನಕೋಟಿ ತಡವಾಗಿಯೇ ಎದ್ದರು.

ಹಾಮಾಗುಚಿ ಭಾವಾವಿಷ್ಟನಾಗಿ ಸ್ವಲ್ಪ ಹೊತ್ತು ಯೋಚಿಸಿದ ನಂತರ ಒಂದು ತುತ್ತೂರಿ ಕೈಕೊಂಡು ಊದುತ್ತಾ "ಕೇಳಿ ಬಂಧುಗಳೇ ರಾತ್ರಿ ಶಿಂಟೋ ದೇವತೆ ನನ್ನ ಕನಸಿನಲ್ಲಿ ಬಂದು ಹಬ್ಬವನ್ನು ನನ್ನ ದೇಗುಲದ ಅಂಗಣದಲ್ಲಿಯೇ ಆಚರಿಸಿ ಎಂದು ಅಪ್ಪಣೆ ಮಾಡಿದ್ದಾಳೆ, ಎಂದು ಬೀದಿ ಬೀದಿಯಲ್ಲೂ ಹೇಳಿ ಪ್ರಚಾರ ಮಾಡಿದ. ಅವನ ಜೊತೆಗೆ ಮೊಮ್ಮಗನಾದ ಟಾಡ್ ಪೋನಿ ಮತ್ತು ಟೊಸಾಕು ಇದ್ದರು. ಅವರಿಬ್ಬರೂ ಕುಣಿಕುಣಿಯುತ್ತ ಚಪ್ಪಾಳೆ ತಟ್ಟುತ್ತಿದ್ದರು. ಕೇಕೆಹಾಕುತ್ತ ಮಧ್ಯೆಮಧ್ಯೆ ತಮ್ಮ ದನಿಯನ್ನೂ ಸೇರಿಸುತಿದ್ದರು. ಊರಿನ ಮುರಿಸ-ರೆಲ್ಲ ಹಾಮಾಗುಚಿಯ ಬಳಿಗೆ ಬಂದು ಕನಸಿನ ವೃತ್ತಾಂತವನ್ನು ಕೂಲಂಕಶವಾಗಿ ಅರಿತುಕೊಂಡರು. ಹಾಮಾಗುಚಿ ಬಣ್ಣಿಸಿಯೇ ಬಣ್ಣಿಸಿದ, ವಿಷಯ ಒಂದಕ್ಕೆ ಹತ್ತಾಗಿ ನೂರಾಗಿ ಹೊರಬಿತ್ತು, ಮುಗ್ಧ ಜನ ನಂಬುವಂತೆ.

ತದನಂತರ ಶಿಂಟೋ ಹಬ್ಬದ ಉತ್ತರಾರ್ಧವನ್ನು ಬೆಟ್ಟದಮೇಲೆಯೇ ಮಾಡುವುದೆಂಬ. ತೀರ್ಮಾನಕ್ಕೆ ಬಂದರು ಜನ. ಶಿಂಟೋ ಹಬ್ಬದ ಪ್ರಯುಕ್ತ ಹಾಕಲಾಗಿದ್ದ ಟೆಂಟ್‌ಗಳು, ಬೆಲೂನ್‌ಗಳು, ಪತಾಕೆಗಳು, ಬಣ್ಣದ ಕಾಗದಗಳ ಶೃಂಗಾರ ಎಲ್ಲವೂ ಊರಿನಲ್ಲಿಯೇ ಉಳಿದಿದ್ದುವು. ಬೆಟ್ಟದಮೇಲೆ ಎಂದರೆ ಎಲ್ಲವನ್ನೂ ಹೊತ್ತೊಯ್ಯಬೇಕು .... ಇದಕ್ಕೇನು ಮಾಡೋಣ ? ಎಂಬ ಪ್ರಶ್ನೆ ಎಲ್ಲರ ಮನದಲ್ಲಿ. ಏನೇ ಇರಲಿ, ಶಿಂಟೋ ದೇವತೆಯ ಅಪ್ಪಣೆಯೆಂದರೆ ನಿರ್ಲಕ್ಷಿಸುವಂತಿಲ್ಲ ಎಂದು ಎಲ್ಲ ಮುರಿಸ–ರು ಒಟ್ಟಭಿಪ್ರಾಯಕ್ಕೆ ಬಂದುದರಿಂದ

ತರುಣರು ಎಲ್ಲವನ್ನೂ ಹೊರಲು ಸಿದ್ಧರಾದರು. ಅಂದೇ ಹಬ್ಬವಾದ್ದರಿಂದ ವಿಜೃಂಭಣೆಯನ್ನು ತಪ್ಪಿಸುವಂತಿಲ್ಲ. ರಂಗುರಂಗಿನ ಉಡುಪು ತೊಟ್ಟ ಜನರಾಶಿ ಬೆಟ್ಟವನ್ನು ಮಧ್ಯಾಹ್ನದಿಂದಲೇ ಹತ್ತತೊಡಗಿದರು. ಎಲ್ಲಾ ಸಾಮಗ್ರಿಗಳನ್ನೂ ಸಾಗಿಸುತ್ತಲೇ ಇದ್ದಾರೆ. ವೃದ್ಧ ಸ್ತ್ರೀ ಪುರುಷರು ಸಹ ಬಿಸಿಲಿನ ಪ್ರಖರತೆ ಇಳಿದನಂತರ ಹತ್ತಿದರು ಬೆಟ್ಟವನ್ನು. ಊರು ಖಾಲಿಯಾಯಿತು. ಬೆಟ್ಟದಮೇಲೆ ಇಪ್ಪತ್ತು ಸಾವಿರ ಜನರ ಮಹಾಮೇಳ. ಬೆಲೂನುಗಳು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಒಟ್ಟಿಗೇ ಆಕಾಶಕ್ಕೆ ಅಡರಿ ವಾಯುಲೀಲಾ ಖೇಲನದ ಬಿರುಸಿಗೆ ಸಿಲುಕಿ ದಿಸೆಗೆಟ್ಟು ಹಾರಿ ಹೋದುವು. ಬೆಟ್ಟವೇ ಉರಿಯುತ್ತಿದೆಯೋ ಎಂಬಷ್ಟು ವರ್ಣವರ್ಣಾಂತ ವಿದ್ಯುದ್ದೀಪಗಳ ಸರಮಾಲೆಗಳು ಉರಿಯುತ್ತಿವೆ ಧಗಧಗಿಸಿ. ಜನ ಕುಣಿಯುತಿದ್ದಾರೆ, ಧಿಮಿಧಿಮಿ. ಸಂಗೀತ, ನೃತ್ಯದ ಹುಯ್ಲು ಎಲ್ಲಾ ಹಿಂದಿನ ದಿನದಂತೆಯೇ ನಡೆಯುತ್ತಿವೆ ಸಂಭ್ರಮದಿಂದ. ಹಾಮಾಗುಚಿ ಮಂಟಪದ ಮೆಟ್ಟಲಿನ ಮೇಲೆ ಕುಳಿತು ಸಮುದ್ರವನ್ನೇ ಗಮನಿಸುತಿದ್ದ. ಸಮುದ್ರ ಕ್ಷಣ ಕ್ಷಣಕ್ಕೂ ಉಗ್ರವಾಗುತ್ತಲೇ ಇತ್ತು. ಕೆನ್ನೀಲಿಯ ಅಲೆಗಳೊಂದಿಗೆ ಬೆಂಕಿಯ ಕಿಡಿಗಳೂ ಸಿಡಿಯುತ್ತಿವೆ. ಹಬ್ಬದ ಸಂಭ್ರಮ ಮತ್ತ ಜನ ಅತ್ತ ಗಮನಿಸುತ್ತಲೇ ಇಲ್ಲ. "ಸಮುದ್ರದ ಉಬ್ಬರ ಖಂಡಿತವಾಗಿಯೂ 'ತ್ಸುನಾಮಿಗೆ' ದಾರಿ ಮಾಡುತ್ತದೆ ಎನಿಸುತ್ತಿದೆ ನನಗೆ, ಅಂತೂ, ಎಲ್ಲರೂ ಊರು ಬಿಟ್ಟಿದ್ದು ಕ್ಷೇಮ. ಪ್ರಾಣ ಹಾನಿಯಾಗದಿದ್ದರೆ ಸಾಕು. ಶಿಂಟೋ ದೇವತೆ ದಯೆದೋರಿದ್ದಾಳೆಂದು ನನ್ನ ಭಾವನೆ. ಸಧ್ಯ, ಇಷ್ಟಾದರೂ ಸಾಧ್ಯವಾಯಿತಲ್ಲ ಎಂಬುದೇ ನನಗೆ ಸಮಾಧಾನ ಎಂದುಕೊಂಡ ಹಾಮಾಗುಚಿ. ಮನದಾಳದಲ್ಲಿ ಏನೋ ಒಂದು ಬಗೆಯ ಅನಿರ್ವಚನೀಯ ಸಮಾಧಾನ. ಎದೆಯ ಭಾರವೂ ಇಳಿದುಹೋಗಿದೆ. ಮುಂದಿನದು ಸೃಷ್ಟಿಕರ್ತನಿಗೆ ಸೇರಿದ್ದು .... ಇದಕ್ಕಿಂತ ಹೆಚ್ಚಾಗಿ ನಾನೇನೂ ಮಾಡಲಾರೆ, ಎಂದು ನೀಳವಾದ ಬಿಸಿಯುಸಿರನ್ನು ಹೊರ ಹಾಕಿದ. ನಯನದ್ವಯಗಳು ಸಾಗರದ ಉಗ್ರತೆಯನ್ನು ಗಮನಿಸುತ್ತಲೇ ಇವೆ. ಭೋರೆಂದು ಘೋರ್ಗರೆಯುತ್ತ ನುಗ್ಗಿ ಬರುವ ಅಲೆಗಳ ರೋಷಕ್ಕೆ ಇತಿಮಿತಿಯೇ ಇಲ್ಲ. ಗಗನ ನೀಲಿಯನ್ನೆಲ್ಲಾ ಸೂರೆಗೊಂಡು ನುಂಗಿ ನೊಣೆದಷ್ಟು ದಟ್ಟವಾದ ನೀಲಿಯಲ್ಲಿ ಕೆಮ್ಮನೆ ಮಿಂಚುವ ಕೆನ್ನೀಲಿಯ ಕಿಡಿಗಳ ರಾಶಿ ರಾಶಿ. ಕ್ಷಣ

ಕ್ಷಣಕ್ಕೂ ಉಗ್ರರೂಪ ತಾಳುತ್ತಲೇ ಇದೆ. ಮಿಂಚಿನಂತೆ ಮಿಂಚುವ ಬೆಂಕಿ ಕಿಡಿಕಿಡಿಗಳ ರಾಶಿ.

ಹಾಮೂಗುಚಿ ಶಿಂಟೋ ದೇವತೆಯನ್ನು ಮನದಲ್ಲೇ ಬೇಡಿಕೊಂಡ.... ಸಾಗರದುಗ್ರತೆ ಇಳಿದು ದೇಶ ಕ್ಷೇಮವಾಗಲಿ ಎಂದು ಮತ್ತೆಮತ್ತೆ ಭಯ ಭೀತಿಯ ಗಾವರದಿಂದ ಬೇಡುತ್ತಲೇ ಇದ್ದ.

ಕಂಡ ಕಂಡವರಿಗೆಲ್ಲಾ ಹೇಳಿದ್ದಾನೆ ಸಮುದ್ರದ ಉಗ್ರತೆ 'ತ್ಸುನಾಮಿ'ಗೆ ಕಾರಣವೆಂದು. ಅದನ್ನು ಅರ್ಥ ಮಾಡಿಕೊಂಡವರಿಗಿಂತ ಅರ್ಥ ಮಾಡಿಕೊಳ್ಳ ದವರೇ ಹೆಚ್ಚು. ಸಮುದ್ರದುಗ್ರತೆ ಆಗಾಗ ಇದ್ದದ್ದೇ ಎಂಬ ಉದಾಸೀನ ಅಥವಾ ತಾತ್ಸಾರ ಅಥವಾ ಮಂದ ಬುದ್ಧಿ ಅಥವಾ ಗ್ರಹಚಾರ....

ಊರಿನ ಸಂಭ್ರಮ ಬೆಟ್ಟವೇರಿ ವಿಜೃಂಭಿಸಿತು. ವಾರ್ಷಿಕೋತ್ಸವದ ವಾರ್ಷಿಕ ಸಡಗರ.

ಕನಸಿನ ವೃತ್ತಾಂತಕ್ಕೆ ಎಂತಹ ಬೆಲೆ? ಬುದ್ಧಿ ಮಾಂದ್ಯಕ್ಕೆ ಸಧ್ಯ, ಇದೇ ಮದ್ದು. ಮುಂದೆ ಪಾಠ ಕಲಿಯುತ್ತಾರೆ.... ಪಾಠ ಕಲಿಯಲು ಇದೊಂದು ಅವಕಾಶ. ಆಲೋಚನೆ ಘನಿಸುತಿದ್ದಂತೆ ಹಾಮೂಗುಚಿ ಭಾವಾ ವಿಷ್ಟನಾದ. ಮಂಟಪದ ಮೆಟ್ಟಿಲ ಮೇಲೆ ಕುಳಿತು ಸಾಗರದಮೇಲೆ ದೃಷ್ಟಿ ಹಾಯಿಸಿದ ಹಾಮೂಗುಚಿ. ಸಮುದ್ರದಾಳದಲ್ಲಿ ಯಾವ ಬಗೆಯ ದೈತ್ಯಶಕ್ತಿ ಅಡಗಿದೆಯೋ, ಇನ್ನಾವ ಬಗೆಯ ಉಗ್ರರೋಷ ಹೊಂಚು ಹಾಕಿದೆಯೋ, ಅದರ ಉದ್ದೇಶ ಅರ್ಥವಾಗದಲ್ಲಾ ಎಂದು ಕೊರಗಿತು ಎದೆಯಹಕ್ಕಿ. ಮೊಮ್ಮಗ ಟಾಡ್‌ಮೂನಿ ಬಂದು ತಾತನ ಪಕ್ಕದಲ್ಲಿ ಮೈಗೆ ಮೈಹಚ್ಚಿ ಕುಳಿತುಕೊಂಡ. ಅವನನ್ನು ನೋಡುತ್ತಲೂ ಟೊಸಾಕು ಓಡಿ ಬಂದು ಕುಳಿತುಇನ್ನೊಂದು ಮಗ್ಗುಲಿಗೆ ಮೈ ಹಚ್ಚಿದ.

ರಾತ್ರಿ ಹತ್ತು-ಹನ್ನೊಂದರ ಸಮಯ. ಮೂರುದಿನಗಳ ಸಂಭ್ರಮ-ಸಡ ಗರಕ್ಕೆ ಮಂಗಳ ಹಾಡುವ ರಾತ್ರಿ.

"ಕುಣಿದು ಕುಣಿದು ಕಾಲುಗಳು ನೋಯುತ್ತಿವೆ."

ಉಸ್ಸೆನ್ನುತ್ತ ಟೊಸಾಕು ಕಿಲಕಿಲ ನಕ್ಕು ಬಿಟ್ಟ.

"ನನಗೂ ಅಷ್ಟೆ. ಹಬ್ಬದೂಟ ಕರಗಿ ಎಂದೋ .... ನನಗೀಗ ಬಲು ಹಸಿವು."

ಇಬ್ಬರ ಮುಖವನ್ನೂ ನೋಡಿ ಮುಗುಳು ನಕ್ಕ ಹಾವೂಗುಚಿ. ಏನೊಂದು ಹೇಳಲಿಲ್ಲ.

ಹೊತ್ತು ಯಥೋಚಿತವಾಗಿ ಉರುಳಿತು. ಬ್ರಾಹ್ಮೀ ಮುಹೂರ್ತ ಅಡ ರುತ್ತಿದೆ.

ಬಿರುಗಾಳಿಯ ಅಬ್ಬರ ಒಂದೇ ಸಮನೆ ನಡೆಯುತ್ತಿದೆ. ಹೊತ್ತು ಉರುಳಿದಂತೆ ಸುಯ್ ಸುಯ್ಯನೆ ಸುಯ್ಯೆಂದು ಸುಯ್ಯುತ್ತ ಸುಯ್ಯುತ್ತ ನೂರಾರು ಮೈಲಿಗಳ ವೇಗಕ್ಕೆ ಮುಟ್ಟಿತು ಬಿರುಗಾಳಿಯ ಸ್ಫೂರ್ತಿ! ಸಾಗರ ದಲೆಗಳು ಅಲ್ಲೋಲಕಲ್ಲೋಲವಾದುವು. ಸಾಗರದುಗ್ರತೆ ಮೇರೆವಿಾರಿತು. ಕೆನ್ನಾಲಿಯ ಕಿಡಿಗಳು ಸಿಡಿದು ಹಾರತೊಡಗಿದುವು ಸಾಗರದ ಉದ್ದಗಲಕ್ಕೂ!

ಹಾ! .... ಭಯಂಕರ – ಭಯಾನಕ! ಭೀಕರ – ಭೀಭತ್ಸ!

ಒಮ್ಮೆಗೇ ಬೃಹದಾಕಾರದಲ್ಲಿ ಭುಗಿಲೆದ್ದು ನಿಂತ ಸಾಗರದ ಅಲೆಗಳಲ್ಲಿ ರೋಷ ಭೀಷಣತೆ ಕ್ಷಣಕ್ಷಣಕ್ಕೂ ಏರತೊಡಗಿತು. ಭೋರ್ಗರೆಯುತ್ತಾ ಬಂದು ಊರಿಗೆ ಅಪ್ಪಳಿದುವು ಬೆಂಕಿಯ ಅಲೆಗಳು. ಇಡೀ ಊರನ್ನು ನುಂಗಿ ನೊಣೆದು ನಿರ್ನಾಮ ಮಾಡಿತು ಕೇವಲ ಕೆಲವು ಗಳಿಗೆಯಲ್ಲಿ. ಒಂದೇ? ಎರಡೇ? ಹಲ ವಾರು ಅಲೆಗಳು ನುಗ್ಗಿ ನುಗ್ಗಿ ಬರುತ್ತಲೇ ಇವೆ. ಇಡೀ ಹಳ್ಳಿಯಲ್ಲಿ ಇದ್ದ ಒಂದೇ ಒಂದು ಮನೆಯೂ ಉಳಿಯಲಿಲ್ಲ. ಬೃಹದ್ ಅಲೆಗಳು ಬೆಟ್ಟದ ಅರ್ಧ ಭಾಗದವರೆಗೂ ಏರಿ ಕಲ್ಲು ಮಣ್ಣು ಮರುಳನ್ನು ರಾಚಿ ರಾಚಿ ಹಿಂದಿ ರುಗುತಿದ್ದುವು. ಮತ್ತೆ ಮತ್ತೆ ಮೇಲಿಂದಮೇಲೆ ಅಲೆಗಳ ಧಾಳಿ! ಕದ್ದಿಂಗಳ ರಾತ್ರಿಯಲ್ಲಿ ಭಯಂಕರ ಸಮುದ್ರರಾಜನ ಉಗ್ರ – ಅತ್ಯುಗ್ರ ರೂಪದ ಭಯಂಕರ ಧಾಳಿ! ಬೃಹದ್ ಅಲೆಗಳು ಬೆಟ್ಟದ ಅರ್ಧ ಭಾಗದವರೆಗೂ ಏರಿ ರಪ್ ರಪ್ಪನೆ ಅಪ್ಪಳಿಸುತಿದ್ದರೆ ಬೆಟ್ಟವೇ ಕಳಚಿ ಬೀಳುವುದೋ ಎನಿಸುವಷ್ಟು ಭಯಾನಕ!

ಜನರೆಲ್ಲ ನೆಲಗಚ್ಚಿದರು. ಬಿರುಗಾಳಿಯು ಮಣ್ಣು ಮರಳು ಕಸ ಕಡ್ಡಿಗಳನ್ನು ರಾಚುತಿತ್ತು. ಮುಖ ಮೈಯೆಲ್ಲಾ ಧೂಳು ತುಂಬಿ ಮಣ್ಣು ಮರಳು ಕಣ್ಣು ಮುಖ ಬಾಯಿಗಳಲ್ಲಿ ನುಗ್ಗಿದುವು. ಎಷ್ಟೆಷ್ಟು ಬಟ್ಟೆ ಮುಸುಕು ಹಾಕಿಕೊಂಡರೂ ಧೂಳಿಂದ ಮುಕ್ತವಾಗಲು ಸಾಧ್ಯವಾಗಲಿಲ್ಲ. ಅಳು ಗೋಳು- ರಣಗೋಳಿನ ರಾಣ ರಂಪ. ಹಬ್ಬದ ಸಂಭ್ರಮ ಬಿರುಗಾಳಿಯಲ್ಲಿ ಧೂಳೀಪಟಲವಾಗಿ ಹೋಯಿತು.

ಬಿರುಗಾಳಿಯ ಉಗ್ರತೆ- ಸಾಗರದ ರೌದ್ರತೆ ಒಂದಕ್ಕೊಂದು ಹೊಯ್ಕಯ್ಯಾದಂತೆ ಪೈಪೋಟಿ ನಡೆಸುತ್ತಲೇ ಇವೆ. ಕೆಲವೇ ಕ್ಷಣಗಳಲ್ಲಿ ಸಡಗರ–ಸಂಭ್ರಮಗಳು ಮಣ್ಣು ಪಾಲಾದುವು. ಅಳು-ಗೋಳು ಒಂದೇ ಉಳಿದದ್ದು. ಇಡೀ ಹಳ್ಳಿಯೇ ಮಣ್ಣು–ಮರಳಿಂದ ತುಂಬಿ ಮುಚ್ಚಿಹೋಯಿತು. ಹಳ್ಳಿಯ ಗುರುತೂ ಸಿಗದಷ್ಟು ನಾಶವಿನಾಶ. ಹಟ್ಟಿ ಕೊಟ್ಟಿಗೆಗಳಲ್ಲಿದ್ದ ಪ್ರಾಣಿಕೋಟಿಯೊಂದೂ ಉಳಿಯಲಿಲ್ಲ.

ಹಾವಾಗುಚಿ ಬಿರುಗಾಳಿಯ ಹೊಡೆತಕ್ಕೆ ಸಿಗದಂತೆ ನೆಲಗಚ್ಚಿದ್ದರೂ ಇಡೀ ಹಳ್ಳಿಯ ಮಾರಣ ಹೋಮ ಅಂತರಂಗವನ್ನು ಛಿದ್ರವಿಛಿದ್ರಗೊಳಿಸಿತು.

ಬಿರುಗಾಳಿ ಬೀಸಿಯೇ ಬೀಸಿತು. ಇಡೀ ರಾತ್ರಿಯೆಲ್ಲಾ ಸಮುದ್ರದ ಅಲೆಗಳು ಘೋರ್ಗರೆಯುತ್ತಲೇ ಇದ್ದುವು. ಚಳಿಗಾಳಿಯ ಅವ್ಯಾಹತ ಹೊಡೆತ. ಭೀಮ ಭೀಕರ ಸಿಂಹ ಸ್ವಪ್ನ. ಎಲ್ಲರ ಜೀವಕಣಗಳೂ ತರಗೆಲೆಯಂತೆ ತರತರ ನಡುಗುತ್ತಿವೆ. ಈಗಲೀಗ ಪ್ರಾಣ ಚಿಮ್ಮುವಷ್ಟು ಭಯ ಭೀತಿ. ತಲೆಯೆತ್ತಿ ನೋಡಬಲ್ಲವರು ಯಾರೂ ಇರಲಿಲ್ಲ. ಜೀವಶ್ಯವಗಳಂತೆ ಎಲ್ಲರೂ ಮಖಮಡಿಯಾಗಿ ಬಿದ್ದಿದ್ದಾರೆ. ಮಾತುಕತೆ ಇಲ್ಲವೇ ಇಲ್ಲ. ಬಿರುಗಾಳಿಯ ಅಬ್ಬರ ಕಡಿಮೆಯಾದರೂ ಸಂಪೂರ್ಣ ನಿಂತಿರಲಿಲ್ಲ. ನೆಲಗಚ್ಚಿದ ಜನ ಹೊರಳಲಿಲ್ಲ ಕೂಡ. ಮಕ್ಕಳು ಮರಿಗಳ ಚೀರಾಟವೂ ಅಲ್ಲಲ್ಲೇ ಉಡುಗಿತು. ಅದೆಷ್ಟು ಮಂದಿ ವೃದ್ಧರು ಮಕ್ಕಳು ಬಿದ್ದಲ್ಲೇ ಗತಪ್ರಾಣರಾದರೋ....ಅಂತೂ, ಬೆಳಗಾ

ಯಿತು. ಬಿರುಗಾಳಿಯ ಆವೇಗ ಕಡಿಮೆಯಾಗಿತ್ತು. ಸಾಗರದಬ್ಬರ ಪೂರ್ತಿ ನಿಂತಿರಲಿಲ್ಲ.

ಬೆಳ್ಳನೆ ಬೆಳಗಾಯಿತು. ತಲೆಯೆತ್ತಿ ನೋಡವುದೂ ಸಹ ಬೇಡ, ಎಂಬಷ್ಟು ಘೋರಾತಿಘೋರ!

"ಓಜಿಸಾನ್! ನೀನು ದೇವತಾ ಪುರುಷ! ಶಿಂಟೋ ದೇವತೆಯ ದೂತ! ನೀನು ನೂರುವರ್ಷ ಬಾಳು!"

ಮತ್ತಾರೋ ನುಡಿದರು "ಓಜಿಸಾನ್, ನಿನ್ನ ಸಮಯೋಚಿತ ಪರಿಜ್ಞಾನದಿಂದ ಅಪಾರವಾದ ಜೀವ ಸಂಪತ್ತು ಉಳಿಯಿತು. ದೇವರು ದಯಾಮಯ! ಅದರೇನು? ಅಯ್ಯೋ...."

"ಅಯ್ಯೋ, ಜನ ಉಳಿದರೇನು? ಮನೆ ಮಠವೆಲ್ಲಾ ಹೋಯಿತು! ಮುಂದೇನು ಗತಿ? ಓಜಿಸಾನ್ ನಮಗೇನು ಹೇಳುತ್ತಿ?"

"ಇದುವರೆಗೆ ಯಾವ ದೇವದೂತನೂ ಇಷ್ಟು ಉಪಕಾರ ಮಾಡಿರಲಿಲ್ಲ. ಮುಂದೆಯೂ ನೀನೇ ಮಾರ್ಗದರ್ಶಿ!"

ಓಜಿಸಾನ್ ಮಾತಾಡಲಿಲ್ಲ. ತಲೆಯೆತ್ತಿಯೂ ನೋಡಲಿಲ್ಲ. ಇನ್ನೂ ಅನೇಕ ದುರ್ಬಲರು ಮತ್ತು ಮಕ್ಕಳುಗಳ ಮಾರಣ ಹೋಮದೊಂದಿಗೆ ಅವನೂ ಸೇರಿಹೋಗಿದ್ದ. ಇಡೀ ರಾತ್ರಿಯ ಬಿರುಗಾಳಿ ನೊಣೆದು ನುಂಗಿತ್ತು.

— o —

# ಕಾಯಿದೆಯ ಕುರುಡುಗಣ್ಣು

೨

ನ್ಯಾಯಾ ಬಹೀಶ್ವರಾಃ ಪ್ರಾಣಾಃ

ಲಾ ಕಾಲೇಜಿನ ಬೃಹದ್ ಆಧುನಿಕ ಆಲಯ.

ಅತ್ತಿತ್ತ ಹರೆಗೈ ಚಾಚಿ ಚಾಚಿ ಮುಂಬೆಳೆದು ನಿಂತ ಮಹಾಲಯ.

ಸುತ್ತಮುತ್ತ ಪರಿಸರದಲ್ಲಿ ಎಲ್ಲಿ ನೋಡಿದರೂ ಜನವೇ ಜನ. ಒಳಗಡೆ ಕಲಿಯುವವರು ಅರ್ಧಾಂಶವಾದರೆ ಹೊರಗಡೆ ಅಡ್ಡಾಡುವವರು ಬಹ್ವಂಶ. ಪ್ರೊಫೆಸರುಗಳೂ ಅಲ್ಲಲ್ಲಿ ಕಾಣ ಬರುತ್ತಾರೆ.

ಹತ್ತಿರ ಹತ್ತಿರವಾಗುತ್ತಿರುವ ಪರೀಕ್ಷೆಯ ತರಗತಿಯಲ್ಲಿ ಪ್ರೊಫೆಸರ್ ಕರ್ಣ ಪಾಠ ಹೇಳುತಿದ್ದರು–ಕೊಲೆಗಡುಕರು ಹೇಗೆ ತಮ್ಮದೇ ಆದ 'ಗುಪ್ತ ವ್ಯೂಹ' ನಿರ್ಮಿಸಿಕೊಂಡು ಕಾನೂನಿನ ಕಪಿಮುಷ್ಟಿಯಿಂದ ತಪ್ಪಿಸಿಕೊಳ್ಳುತ್ತಾರೆ ? ಯಾವಯಾವ ಕಾರಣದಿಂದ ಮೊಕದ್ದಮೆ ಕೈ ತಪ್ಪಿಹೋಗುತ್ತದೆ ? ಹೇಗೆ, ಎಲ್ಲೆಲ್ಲಿ ನ್ಯಾಯ ಸೋತು ಸುಣ್ಣವಾಗುತ್ತದೆ ? ಇಂತಹ ಸಂದರ್ಭದಲ್ಲಿ ಕಾನೂನು ಶಿಥಿಲಗೊಳ್ಳುವುದು ಹೇಗೆ ? ಎಂಬುದರ ವಿವರವನ್ನು ಪ್ರೊಫೆಸರ್ ಮೆಹನತ್ತಿನಿಂದ ವಿವರಿಸುತ್ತಿರುವಾಗ ನನ್ನ ಮನದಲ್ಲಿ ಸಂಶಯದ ಸುಳಿಯೊಂದು ತಟ್ಟನೆ ಮೂಡಿತು. ನಾನು ಎದ್ದು ನಿಂತು ಪ್ರಶ್ನೆ ಹಾಕಿದೆ,

"ಸರ್ ! ಕೊಲೆ ಪಾತಕಗಳಿಗೆ ಹಗಲಿಗಿಂತ ರಾತ್ರಿಯೇ ಪ್ರಶಸ್ತ ಸಮಯವಲ್ಲವೇ ?"

"ಹಾಗೆ ಹೇಳುವುದು ಹೇಗೆ?" ಮರು ಪ್ರಶ್ನೆ ಹಾಕಿದರು ಅವರು.

"ಹಗಲಾದರೆ ಕಣ್ಣಿಂದ ಕಂಡವರಿರುತ್ತಾರೆ. ಸಾಕ್ಷ್ಯಾಧಾರಗಳು ಸಿಗುತ್ತವೆ. ರಾತ್ರಿಯಲ್ಲಿ ಎಲ್ಲವೂ ಗೋಪ್ಯ."

"ಹಾಗೆಂದು ದೃಢವಾಗಿ ಹೇಳುವಂತಿಲ್ಲ. ಗೋಪ್ಯವೂ ಕೂಡ ಸುಲಭವಾಗಿ ಬಹಿರಂಗಗೊಳ್ಳುವ ಸಾಧ್ಯತೆಯಿದೆ."

"ಸರ್! ಕೋಪೋದ್ದೀಪ್ತವಾದ ಮನಸ್ಸು ಹಗಲು ಕೊಲೆಗಳಿಗೆ ಪ್ರೇರೇಪಿಸುವುದು ಸಹಜ. ಆದರೆ, ಉದ್ದೇಶ ಪೂರ್ವಕವಾದ ಡಕಾಯಿತಿ-ಕೊಲೆಗಳಿಗೆ ರಾತ್ರಿಯೇ ಪ್ರಶಸ್ತ ಸಮಯ ಅಂದರೆ ಏನಂತೀರಿ?"

ಪ್ರೊಫೆಸರ ಕಂಠ ಕಹಳೆ ಸದೃಢವಾಗಿ ಮೊಳಗಿತು,

"ಇಲ್ಲಿ ಕೇಳು, ಕೊಲೆಗಾರನಿಗೆ ರಾತ್ರಿ ಹಗಲು ಒಂದೇ. ಕೊಲೆಗಾರ ಬುದ್ಧಿವಂತನಾದರೆ ಕಾನೂನಿನ ಕೊಂಡಿಯಿಂದ ಕಳಚಿಕೊಳ್ಳಲು ರಾತ್ರಿಗಿಂತ ಹಗಲೇ ಉತ್ತಮವಾದೀತು."

"ಅದು ಹೇಗೆ ಸರ್? ಕಂಡವರು ಬೆನ್ನಟ್ಟಬಹುದು. ಸಾಕ್ಷಿ ಹೇಳಬಹುದು. ಇಂತಹ ಪ್ರಸಂಗದಲ್ಲಿ ಸಿಕ್ಕಿಬೀಳುವ ಸಾಧ್ಯತೆ ಇರುತ್ತದೆ ಅಲ್ಲವೇ?' ಕೊಲೆಗಾರ ಹೇಗೆ ತಪ್ಪಿಸಿಕೊಳ್ಳುತ್ತಾನೆ?"

"ಕೇಳು! ಹಾಗೆಂದಮೇಲೆ ಹಗಲುಗೊಲೆಗಳು ರಾಜಾರೋಷವಾಗಿ ನಡೆಯುತ್ತವೆ ಹೇಗೆ? ಯೋಚಿಸಿ ನೋಡು; ವಿಚಾರಶೀಲನಾಗು."

"ಸರ್! ಆಗಲೇ ಹೇಳಿದೆನಲ್ಲಾ ಕೋಪೋದ್ದೀಪ್ತತೆಯಲ್ಲಿ ಹದ್ದುಮೀರಿ ನಡೆಯುವ ಪ್ರಸಂಗ ಅದು. ಕಾಯಿದೆಯ ವಜ್ರಮುಷ್ಟಿಯ ಜಾಲದಿಂದ ತಪ್ಪಿಸಿಕೊಳ್ಳುವ ಸಲುವಾಗಿ ರಾತ್ರಿ ನಡೆಸುವ ಕೊಲೆಗಳಿಗೆ ಯುಕ್ತಿ-ಕುತಂತ್ರಗಳ ಬೆಸುಗೆ ಇರುತ್ತದೆ. ಯುಕ್ತಿಯಿಂದ ಕಾನೂನಿನ ಕಣ್ಣಿಗೆ ಮಣ್ಣೆರಚುತ್ತಾರೆ. ಕೆಲವೊಮ್ಮೆ ಪೋಲೀಸರ ಅಚಾತುರ್ಯದಿಂದಲೂ ಮಣ್ಣು ಮುಕ್ಕುತ್ತವೆ, ಎನ್ನಬಹುದು. ಅಂತೂ ಕೊಲೆಗಡುಕತನಕ್ಕೆ ರಾತ್ರಿ ಪ್ರಶಸ್ತಸಮಯ ಅಲ್ಲವೇ?"

ಪ್ರೊಫೆಸರ್ ಕರ್ಣ ಮುಗುಳು ನಗುತ್ತ ನುಡಿದರು,

"ನಿನ್ನ ಅಭಿಪ್ರಾಯವನ್ನು ಅಲ್ಲವೆಂದು ಹೀಗಳೆಯಲಾರೆ. ಸಾಧ್ಯಾ ಸಾಧ್ಯತೆಗಳು ಹಾಗೂ ಇವೆ, ಹೀಗೂ ಇವೆ. ಇಲ್ಲಿ ಕೇಳು, ನಿನಗೊಂದು ಸತ್ಯ ಕಥೆಯ ನಿದರ್ಶನ ಕೊಡುವೆ. ನನ್ನ ಕಾಲೇಜಿನ ಸಹಪಾಟಿ ಮಣಿಕುಂಜು ನನ್ನೊಂದಿಗೇನೇ ಪದವೀಧರನಾದ. ಲಾ ಪದವಿಗಳಿಸಿದರೂ ಲಾ ಪ್ರಾಕ್ಟೀಸಿನಲ್ಲಿ ತೀರಾ ಹಿಂದುಳಿದ. ಎಂಟು ಹತ್ತು ವರ್ಷ ಲಾ ಪ್ರಾಕ್ಟೀಸ್ ಮಾಡಿದ ಮೇಲೂ ಅವನು ಸಿದ್ಧಹಸ್ತನಾಗಲಿಲ್ಲ. ಮುನ್ಸೀಪ್ ಹುದ್ದೆಗಾಗಿ ಅರ್ಜಿ ಹಾಕಿದ. ಅದೃಷ್ಟವಶಾತ್ ಉದ್ಯೋಗ ದೊರೆಯಿತು. ಅವನು ಜಾರಿಬಿಟ್ಟೆ ಮೈಕೊಡವಿ. ಅವನಿಗೊಬ್ಬ ಘಟಿಂಗ ಮಗ. ಹೆಸರು ದೇಶೀಕುಂಜು. ಶಾಲೆಯ ಹಂತವನ್ನೂ ದಾಟಲಾರದ ಅವನಿಗೆ ಅಪ್ಪನ ಪದವಿಯಿಂದ ಕೋಡು ಮೂಡಿತು. ವ್ಯಾಪಾರ ರಂಗಕ್ಕಿಳಿದ. ತಂದೆಯ ಹೆಸರಿನಿಂದ ಕೆಲವು ಏಜನ್ಸಿಗಳು ಸುಲಭದಲ್ಲಿ ದಕ್ಕಿದುವು. ಸರಿ, ಕಳ್ಳವ್ಯಾಪಾರ–ದುಂಡಾವೃತ್ತಿ ಉದ್ದಂಡವಾಗಿ ಹುಟ್ಟಿ ಬೆಳೆದುವು. ಅವನು ತನ್ನಂತಹ ಪುಂಡರ ಬಳಗವನ್ನೇ ಕಟ್ಟಿಕೊಂಡ. ಮಣಿ ಕುಂಜು ಕಣ್ಣಿದ್ದೂ ಕುರುಡನಾಗಿದ್ದ.

ಶ್ರೀಗಂಧದ ಕಳ್ಳ ವ್ಯಾಪಾರ ಹಿಡಿದ ದೇಶೀಕುಂಜು. ಆಗಾಗ ಪೋಲೀಸರ ಕೈ ಬೆಚ್ಚಗೆ ಮಾಡುತಿದ್ದ. ಮುನ್ಸೀಪರ ಮಗನಾದುದಕ್ಕೂ, ಪೋಲೀಸರನ್ನು ಬುಟ್ಟಿಗೆ ಹಾಕಿಕೊಂಡುದುದಕ್ಕೂ ಸರಿಹೋಯಿತು. ಅವನ ದುಷ್ಟ ಪ್ರವೃತ್ತಿಗೆ ನಿಲುಗಡೆ ಇಲ್ಲವೇ ಇಲ್ಲ. ಕಾನೂನಿನ ಕಣ್ಣಿಗೆ ಬೀಳಲೂ ಇಲ್ಲ. ಬರಬರುತ್ತಾ ರೌಡಿಯಾಗತೊಡಗಿದ. ಹೊಡೆದಾಟ-ಕೊಲೆಗಳೂ ನಡೆದು ಹೋದುವು. ಆದರೂ ಪತ್ತೆ ಆಗಲಿಲ್ಲ. ಅಲ್ಲಿದ್ದ ಪೋಲೀಸ್ ಅಧಿಕಾರಿ ವರ್ಗವಾಗಿ ಹೊಸ ಪೋಲಿಸ್ ಅಧಿಕಾರಿ ಬಂದಾಗ ಇವನ ಮೇಲೆ ಕಣ್ಣಿಟ್ಟ. ಆದರೂ ದೇಶೀ ಕುಂಜು ಜಗ್ಗಲಿಲ್ಲ. ಒಮ್ಮೆ ವಿದ್ಯಾರ್ಥಿನಿಯರನ್ನು ಕೆಣಕಿ ಪೋಲೀಸರ ಕೈಗೆ ಸಿಕ್ಕಿಬಿದ್ದ. ಹೊಸ ಪೋಲೀಸ್ ಅಧಿಕಾರಿ ಅವನನ್ನು ಅರೆಸ್ಟ್ ಮಾಡಿ ಪೋಲೀಸ್ ಕಸ್ಟಡಿಯಲ್ಲಿಟ್ಟ. ದೇಶೀ ಕುಂಜು ಜಾಮೀನಿನ ಮೇಲೆ ಬಿಡುಗಡೆ ಹೊಂದಿ ಹೊರಬಂದ. ಅವನ ನಾನಾ ದುಷ್ಟ ಪ್ರವೃತ್ತಿಗಳ ಮೇಲೆ ಮೊಕದ್ದಮೆ ಬಿದ್ದುವು. ಆರು ತಿಂಗಳ ಕಠಿಣ ಸಜೆಯೊಂದಿಗೆ ಅಧಿಕಮೊತ್ತದ ದಂಡವೂ ಬಿತ್ತು. ಅದರಿಂದ

ಪೋಲೀಸ್ ಅಧಿಕಾರಿಯ ಮೇಲೆ ಸೇಡಿನ ಮನೋಭಾವ ಬೆಳಸಿಕೊಂಡ ದೇಶಿ ಕುಂಜ್ರು. ಇನ್ನೊಮ್ಮೆ ಹಗಲೇ ನಡೆದ ದೊಂಬಿಯಲ್ಲಿ ಇನ್ಸ್‌ಪೆಕ್ಟರನ ಹಿಂದಲೆಗೆ ಪಿಸ್ತೂಲಿಂದ ಗುಂಡು ಹಾರಿಸಿದ. ಗುಂಡು ಬಾಯಿಂದ ಹೊರಹಾರಿತು. ಅದನ್ನು ಎಷ್ಟು ಸುಲಭದಲ್ಲಿ ಆತ್ಮಹತ್ಯೆ ಎನಿಸಿಬಿಟ್ಟ ತಿಳಿಯಿತೇ? ಗುಂಡು ದೂರದಿಂದ ಬಡಿದುದಲ್ಲ ಬಾಯಿಯೊಳಗೆ ಪಿಸ್ತೂಲಿಂದ ಹೊಡೆದು ಆತ್ಮಹತ್ಯೆ ಮಾಡಿಕೊಂಡಿದ್ದಾನೆ ಎಂದು ಸುಳ್ಳು ಸಾಕ್ಷಿ ಪುರಾವೆ ನೀಡಿ ಸಾಬೀತುಗೊಳಿಸಿಬಿಟ್ಟ. ಸುಳ್ಳು ಮೊಕದ್ದಮೆ ಹೂಡಿದನೆಂದು ಆ ಅಧಿಕಾರಿಯನ್ನು ದೂರದ ಊರಿಗೆ ವರ್ಗಾಯಿಸಿ ಜಯಭೇರಿ ಹೊಡೆದ. ಇದಕ್ಕೇನೆನುತ್ತಿ? ಪ್ರೊಫೆಸರ್ ಕರ್ಣ ಸವಾಲು ಹಾಕುವಂತೆ ಹುಬ್ಬೇರಿಸಿ ಪುನಃ ನಕ್ಕು ನುಡಿದರು, "ಬಹುಶಃ, ಅವನ ದಾಂಧಲೆ ಈಗಲೂ ನಡೆಯುತ್ತಿರಬಹುದು."

ನಾನು ಮೂಕ ವಿಸ್ಮಿತನಾದೆ.

ಮುಂದೆ ಇಂತಹ ದಾಂಧಲೆಗಳನ್ನು ಅಡಗಿಸಲು ನನ್ನಿಂದೇನಾದರೂ ಸಹಾಯವಾದೀತೇ ? ಎಂಬ ಆಲೋಚನೆ ಮೂಡಿದಾಗ ಎದೆಯ ಹಕ್ಕಿ "ಚಿಃ! ಹಾಗೆಂದರೇನು ? ನಿನ್ನ ಕೈಲಾದಷ್ಟು ನ್ಯಾಯಕ್ಕಾಗಿ ಧೈರ್ಯವಾಗಿ ಹೋರಾಡು. ಇಂಥ ಧೂರ್ತತನವನ್ನು ಯುವಜನರಲ್ಲದೆ ಇನ್ನಾರು ಸರಿಪಡಿಸಬೇಕು ? ಬುದ್ಧಿಯಿದ್ದು ಉಪಯೋಗಿಸದೆ ಹೋದರೆ ತಪ್ಪು ನಿನ್ನದೇ ಆಗುತ್ತದೆ ನೆನಪಿರಲಿ," ಎಂದಿತು.

ನಾನು ಉತ್ಸಾಹದಿಂದ ಕರ್ತವ್ಯೋನ್ಮುಖನಾದೆ. ಲಾ ಪುಸ್ತಕಗಳ ಕೋಟೆಯಲ್ಲಿ ಮುಳುಗಿಹೋದೆ. ವಿಶ್ರಾಂತಿಗಾಗಿ ಮಂಚದಮೇಲೆ ಸ್ವಲ್ಪ ಹೊತ್ತು ಉರುಳಿದರೂ ಕಾಲದೆಶೆಯಲ್ಲಿ ತಲೆದೆಶೆಯಲ್ಲಿ ಲಾ ಪುಸ್ತಕಗಳೇ. ರಸಹೀನ ಸಾಹಿತ್ಯ. ತಲೆ ಚಿಟ್ಟು ಹಿಡಿಸುವಂತಹ ಕಾಯಿದೆ-ಕಟ್ಟಳೆಗಳು ಮನದಲ್ಲಿ ಸದಾಗೊಂದಲ ಹೂಡುತ್ತವೆ. ಆದರೂ ನಿಷ್ಠೆಯಿಂದ ಕಾರ್ಯಶೀಲನಾದೆ.

○ ○ ○ ○

ನಾನು ನನ್ನ ನ್ಯಾಯವಾದಿತ್ವದಲ್ಲಿ ಸಾಕಷ್ಟು ಅನುಭವ ಪಡೆದಿದ್ದೆ. ರಸಹೀನತೆಯಲ್ಲಿಯೆ ಮುಳುಗಿ ಅನುಭವ ಪಕ್ವಾಯಿತು. ನಾನೊಲ್ಲೆನೆಂದರೂ ಕಾಯಿದೆ-ಕಟ್ಟಳೆ ನನ್ನನ್ನು ಬಿಡದು.

ಆಫೀಸು ದಿನವೂ ಕಕ್ಷಿಗಾರರಿಂದ ತುಂಬಿ ತುಳುಕುತಿತ್ತು. ಬಿಡುವಿಲ್ಲದ ಕೆಲಸದಲ್ಲಿ ಸುಖ ದುಃಖಗಳ ಕಟು ಅನುಭವ ಮನಃಚಿತ್ರಗಳನ್ನು ತುಂಬಿತು. ಕಾನೂನು ಕಾಯಿದೆಗಳ ರಮಣಿಯನ್ನು ಮನಸಾ ವರಿಸಿದೆ. ಅನೇಕಾನೇಕ ಮೊಕದ್ದಮೆಗಳಲ್ಲಿ ತಂತ್ರ–ಯುಕ್ತಿಗಳ ಬಳಕೆಯಿಂದ ಜಯಶೀಲನಾಗುತಿದ್ದೆ, ಉತ್ಸಾಹ ನೂರ್ಮಡಿಗೊಳ್ಳುತಿತ್ತು. ಉದ್ಯೋಗದಲ್ಲಿ ರಸಜ್ಞತೆಯನ್ನು ಪಡೆಯ ಹತ್ತಿದೆ.

ಅಂದು ಬೆಳಗಿನ ಎಂಟರ ಸಮಯ.

ನಾನಿನ್ನೂ ಆಫೀಸಿಗೆ ಸಿದ್ಧನಾಗಿರಲಿಲ್ಲ. ಅಗಲೇ ತಲೆಬಾಗಿಲಿನ ಗಂಟೆಯ ಕರೆ.

ನಾನೇ ಹೋಗಿ ಕದ ತೆರೆದೆ. ಮೈಯೆಲ್ಲಾ ಸಂಕೋಚದ ಮುದ್ದೆಯಾದ ಹುಡುಗಿಯೊಡನೆ ಮನುಷ್ಯನೊಬ್ಬ ಒಳಬಂದ. ಆಂತರ್ಯದ ಕಲ್ಮಶವೆಲ್ಲಾ ಅವನ ಮುಖದ ಮೇಲೆ ಮುದ್ರೆಯೊತ್ತಿತ್ತು. ನೋಡಿದ ಪ್ರಪ್ರಥಮ ನೋಟಕ್ಕೆ ಅವನು ಹೃದಯ ಹೀನ ಎಂಬುದನ್ನರಿತುಕೊಂಡೆ. ಮನಸ್ಸು ಸೂಕ್ಷ್ಮವಾಗಿ ಅವನನ್ನು ಅವಲೋಕಿಸಿತು. ನಾನು ಕುಳಿತುಕೊಳ್ಳಲು ಕುರ್ಚಿಯ ಕಡೆ ಕೈ ತೋರಿದನಂತರ ಅವರಿಬ್ಬರೂ ಕುಳಿತುಕೊಂಡರು.

"ಏನ್ರೀ ? ನನ್ನಿಂದ ಏನಾಗಬೇಕು ?"

"ನಿಮ್ಮೊಡನೆ ಸ್ವಲ್ಪ ಮಾತಾಡಬೇಕಿತ್ತು."

"ಏನು ಹೇಳಿ ?"

"ವಿಷಯ ಗುಟ್ಟಾಗಿರತಕ್ಕದ್ದು. ಅದಕ್ಕೇ ...." ಮಾತು ಅಷ್ಟಕ್ಕೇ ತುಂಡುಗಡಿಯಿತು. ಅವನು ಸುತ್ತಮುತ್ತ ನೋಡಿ ಬೇರಾರೂ ಇಲ್ಲವೆಂಬುದನ್ನು ಖಚಿತ ಪಡಿಸಿಕೊಂಡು ಒಣಗಿದ ತುಟಿಯನ್ನು ನಾಲಿಗೆಯಿಂದ ಸವರಿಕೊಂಡ. ಅಂತರಾಳದ ಕಸಿವಿಸಿಯನ್ನು ಹುಗಿದಿಡಲು ಸರ್ವಸಹಸಾ ಪ್ರಯತ್ನ ಪಡುತಿದ್ದುದು ಕಂಡು ಬಂತು.

"ಆಗಲಿ, ಏನೆಂಬುದನ್ನು ತಿಳಿಸಿ."

ಅವನು ಹೇಳಲೋ ಬೇಡವೋ ಎಂಬ ಸಂಕೋಚದಿಂದ ಸ್ವಲ್ಪಹೊತ್ತು ಸುಮ್ಮನಾದ.

ನನ್ನ ಸಹನೆ ಮೀರಿತು, "ಅದೇನು ಹೇಳಿ ಬೇಗ.... ನನಗೆ ಬೇರೆ ಕೆಲಸವಿದೆ."

"ನಾವಿಬ್ಬರೂ ಪ್ರೇಮಿಗಳು. ಇದು ಅಂತರ್ಜಾತಿ ವಿವಾಹವಾದುದರಿಂದ ನಮಗೆ ಕಾನೂನಿನ ರಕ್ಷಣೆ ಬೇಕು. ಇದರ ನಿರ್ವಹಣೆ ಹೇಗೆಂಬುದಕ್ಕೆ ನಿಮ್ಮ ಸಲಹೆ ಬೇಕಾಗಿದೆ. ದಯವಿಟ್ಟು ...."

"ನಿಮ್ಮ ವಯಸ್ಸೆಷ್ಟು?"

"ನನಗೆ ಮೂವತ್ತಾರು."

ಅವನನ್ನು ನೋಡಿದರೆ ಹತ್ತಿರ ಹತ್ತಿರ ನಲವತ್ತೈದು ವರ್ಷಗಳ ಪ್ರಾಯ ವಿರಬಹುದು. ನಾನದನ್ನು ಪ್ರಶ್ನಿಸದೆ ಹುಡುಗಿಯನ್ನು ಕೇಳಿದೆ "ಏನಮ್ಮಾ ನಿನ್ನ ವಯಸ್ಸೆಷ್ಟು?"

"ಹದಿನೈದು ...."

ಆಗ ಅವನು ಅವಳ ಕಡೆ ಅಡಿಗಣ್ಣಿಂದ ನೋಡಿ ಮೊಣಕೈಯಿಂದ ಮೆಲ್ಲಗೆ ತಿವಿದು ಎಚ್ಚರಿಸಿದುದನ್ನು ನಾನು ಕಂಡೆ. ಅವನು ಕೊಟ್ಟ ಸೂಚನೆ ಯನ್ನು ಅವಳು ಅರ್ಥಮಾಡಿಕೊಂಡಳೋ ಇಲ್ಲವೋ ಖಚಿತವಾಗಿ ಹೇಳಲಾರೆ. ಅವಳು ಬಾಗಿದ ತಲೆಯೆತ್ತಲಿಲ್ಲ. ತೀರ ಮುಗ್ಧೆ ಎಂಬುದರ ಅರಿವಾಯಿತು ನನಗೆ.

"ಇದು ಹೇಗಾಗುತ್ತೆ? ಅವಳಿಗಿನ್ನೂ ಹದಿನೈದು ವಯಸ್ಸು ಮೈನರ್ ಹುಡುಗಿ. ಅಂದಮೇಲಿದು ಕಾನೂನಿಗೆ ವಿರುದ್ಧವಾಗುತ್ತೆ. ಅವಳ ತಂದೆತಾಯಿ ಯರ ಒಪ್ಪಿಗೆ ಪಡೆಯದೆ ಮೈನರ್ ಹುಡುಗಿಯನ್ನು ಕರೆತಂದಂತೆ ಕಾಣುತ್ತೆ. ಇದು ತಪ್ಪು! ಪೋಲೀಸ್ ಕೇಸ್ ಆಗುತ್ತೆ!"

ಅವನು ಎರಡೂ ಕೈಗಳನ್ನು ಜೋಡಿಸಿಕೊಂಡು ಅತೀ ದೈನ್ಯದಿಂದ ನುಡಿದ,

"ಸ್ವಾಮಿ! ಏನೋ ಆದುದು ಆಗಿ ಹೋಗಿದೆ! ಹೇಗಾದರೂ ಕಾಪಾಡಿ! ಕೈಮುಗಿವೆ!"

ಮುಖಭಾವ ಕುಂದಿ ಕಂದಿ ಬಾಡಿ ಹೋಯಿತು. ಮತ್ತೆ ಮತ್ತೆ ಬೇಡಿ ಕೊಳ್ಳತೊಡಗಿದ. ದನಿ ಗೋಗರೆಯಿತು. ಸಂತಾಪದಿಂದ ಉಸಿರಾಡಿದ.

"ಈ ವಿಚಾರದಲ್ಲಿ ನಾನು ನಿಮ್ಮನ್ನು ರಕ್ಷಣೆ ಮಾಡಲಾರೆ. ಹುಡುಗಿ ಚಿಕ್ಕವಳು. ಅವಳನ್ನು ರಿಮ್ಯಾಂಡ್ ಹೋಮಿಗೆ ಸೇರಿಸುವೆ. ನೀವು ಮುಂದೆ ಅವಳ ತಂದೆ ತಾಯಿಯ ಒಪ್ಪಿಗೆ ಪಡೆದು ಅವಳಿಗೆ ಹದಿನೆಂಟು ತುಂಬಿದನಂತರ ಮದುವೆಯಾಗಬಹುದು .... ಈಗಲ್ಲ."

ಹುಡುಗಿ ಮುಸು ಮುಸು ಅಳತೊಡಗಿದಳು. ಅವಳ ದುಃಖದ ಹುರುಳು ಅರ್ಥವಾಗಲಿಲ್ಲ. ಬಹುಶಃ 'ರಿಮ್ಯಾಂಡ್ ಹೋಂ' ಎಂಬುದನ್ನು ಅಪಾರ್ಥ ಮಾಡಿಕೊಂಡಿರಬಹುದು ಎನಿಸಿತು ನನಗೆ. ಆದ್ದರಿಂದ ಅವಳಿಗೆ ಧೈರ್ಯ ತುಂಬುವ ಸಲುವಾಗಿ ನುಡಿದೆ "ರಿಮ್ಯಾಂಡ್ ಹೋಂ" ಎಂದರೆ ನೀನು ಜೈಲು ಎಂದು ತಿಳಿದುಕೊಂಡೆಯೋ ಹೇಗೆ ? ಹಾಗೇನೂ ಅಲ್ಲ. ಅದೊಂದು ಅಭಯಾಶ್ರಮವಿದ್ದಂತೆ. ಅಲ್ಲಿ ನಿನ್ನಂತೆ ಮುಗ್ಧ ಹೆಣ್ಣು ಮಕ್ಕಳು ಬೇಕಾದಷ್ಟು ಮಂದಿ ಇರುತ್ತಾರೆ. ಅಲ್ಲಿ ಚೆನ್ನಾಗಿ ನೋಡಿಕೊಳ್ಳುತ್ತಾರೆ. ದುಃಖಪಡುವಂತಾದ್ದೇನಿಲ್ಲ. ಮುಂದೆ ಸಮವಯಸ್ಕಳಾದನಂತರ ಇಷ್ಟಪಟ್ಟರೆ ಇವರನ್ನೇ ಮದುವೆಯಾಗಬಹುದು" ಎಂದು ನಾಲ್ಕು ಸಾಂತ್ವನದ ಮಾತುಗಳನ್ನಾಡಿ ಅವಳ ವಿಳಾಸ ಪಡೆದುಕೊಂಡೆ.

ಅವನು ಅಷ್ಟಕ್ಕೆ ಸುಮ್ಮನಾಗಲಿಲ್ಲ. ಮತ್ತೆಮತ್ತೆ ಪುನಃ ಪುನಃ ಬೇಡಿ ಕೊಳ್ಳತೊಡಗಿದ.

ನಾನು ಖಡಾಖಂಡಿತವಾಗಿ ನಿರಾಕರಿಸಿ, ನನ್ನ ಮಡದಿ ಶಾರದೆಯನ್ನು ಕರೆದು ಹೇಳಿದೆ,

"ಈ ಹುಡುಗಿಯನ್ನು ಒಳಗೆ ಕರೆದುಕೊ. ಅರಿಯದ ಹುಡುಗಿ ಇವನೊಡನೆ ಬಂದಿದ್ದಾಳೆ. ಮಧ್ಯಾಹ್ನ ರಿಮ್ಯಾಂಡ್ ಹೋಮಿಗೆ ಸೇರಿಸೋಣ." ಬಳಿಕ ಅವಳಿಗೂ ಮತ್ತೆ ಹೇಳಿದೆ "ಮಗೂ! ನೀನೇನೂ ಅಂಜಬೇಡ. ನಿನಗೆ ಈತ

ನನ್ನೀ ಮದುವೆಯಾಗುವ ಇಚ್ಛೆಯಿದ್ದರೆ ಸೂಕ್ತ ಸಮಯದಲ್ಲಿ ಮಾಡಿಸೋಣ. ಚಿಂತೆ ಮಾಡಬೇಡ. ಸಧ್ಯ, ನಿನ್ನ ತಂದೆ ತಾಯಿಯರಲ್ಲಿಗೆ ಕಳುಹಿಸುವೆ."

ಅವಳು ಏನು ಪರಿಭಾವಿಸಿದಳೋ ಕಂಬನಿ ಸುರಿಸುತ್ತಲೇ ಇದ್ದಳು.

ಮರುಕ್ಷಣವೇ ನಾನು ಒಳಬಂದು ಟಿಲಿಫೋನಿನ ಮೂಲಕ ಪೋಲೀಸರಿಗೆ ಕರೆ ನೀಡಿದೆ. ಕೆಲವೇ ಕೆಲವು ನಿಮಿಷಗಳೊಳಗಾಗಿ ಆಗಮಿಸಿದ ಪೋಲೀಸರು ಅವನನ್ನು ವಶಕ್ಕೆ ತೆಗೆದುಕೊಂಡರು. ನಾನು ಹುಡುಗಿಯನ್ನು ಅಂದೇ ರಿಮ್ಯಾಂಡ್ ಹೋಮಿಗೆ ಸೇರಿಸಿ ಅವಳ ತಂದೆ ತಾಯಿಯರಿಗೆ ಕಾಗದ ಬರೆಸಿದೆ. ನಾನು ಸರಿಯಾದ ಪಾತ್ರ ನಿರ್ವಹಿಸಿದೆನೆಂಬ ಸಮಾಧಾನ ಮನವನ್ನು ಆಕ್ರಮಿಸಿತು. ನಾನು ತುಷ್ಟನಾದೆ.

೦ ೦ ೦ ೦

ಸಂಜೆ ಏಳರ ಸಮಯ. ಕಣ್ಣು ತಿವಿಯುವಂತಹ ದಟ್ಟ ಕಗ್ಗತ್ತಲು. ಕೋಟ್ಯಾನುಕೋಟಿ ನಕ್ಷತ್ರಗಳಿದ್ದರೂ ಎಳೆಬೆಳಕಿನ ಛವಿ ಇಲ್ಲವೇ ಇಲ್ಲ. ಕತ್ತಲೆಯ ತೆರೆ ತಿರೆಯನ್ನು ಮುಸುಗಿತ್ತು.

ಮಾಗಿಯ ಹಿಮಗಾಳಿ ಮೈಕೊರೈಸುವಂತೆ ಶೀತಲಾತಿಶೀತಲ ರೀತಿಯಲ್ಲಿ ತೀಡುತ್ತಿದೆ. ಮೈಮೇಲೆ ಉಣ್ಣೆಯ ಬಟ್ಟೆಗಳಿದ್ದರೂ ಸಣ್ಣಗೆ ನಡುಗುತ್ತದೆ ಜೀವ.

ತಲೆ ಬಾಗಿಲ ಕರೆಗಂಟೆ ಕಿರ್ರನೆ ಕೂಗಿ ಕರೆ ನೀಡಿತು.

ಈಗಾಗಲೇ ಆಫೀಸಿನಲ್ಲಿ ಜನ ಕಿಕ್ಕಿರಿ ತುಂಬಿದ್ದಾರೆ. ಇನ್ನೂ ಸೇರ್ಪಡೆಯಾದರೆ ಕಷ್ಟವೇ. ಸ್ಥಳಾಭಾವದಿಂದ ಸ್ವಲ್ಪ ಕಸಿವಿಸಿ ಮೂಡಿದರೂ ಕದ ತೆರೆಯದೆ ಗತ್ಯಂತರವಿಲ್ಲ. ಗುಮಾಸ್ತ ಕದ ತೆರೆದ. ನನ್ನ ನೋಟ ಬಾಗಿಲ ಕಡೆ ಹರಿಯಿತು. ಒಳ ಬಂದವರು ವೃದ್ಧ ದಂಪತಿಗಳಂತೆ ತೋರುತ್ತಿದ್ದ ಜೋಡಿ. ಯಜಮಾನನ ಹೆಗಲಮೇಲೆ ಕೆಂಪು ಶಾಟಿಕೆಯಂತಹ ಉತ್ತರೀಯ. ತಲೆಗೊಂದು ಮಾಸಿದ ಮುಂಡಾಸು ಧರಿಸಿದ್ದ. ಮಾನಸಿಕ ಮುಗ್ಧತೆ ಮುಖದಲ್ಲಿ ಅಚ್ಚೊತ್ತಿದ್ದ ಶುದ್ಧ ಗ್ರಾಮೀಣ ಮಂದಿ.

ವೃದ್ಧ ಮಹಾಶಯ ಕುರ್ಚಿಯ ಮೇಲೆ ಕುಳಿತುಕೊಂಡ. ಆತನ ಹಿಂದಿದ್ದ ಸ್ತ್ರೀ ನೆಲದ ಮೇಲೆ ಕುಳಿತುಕೊಂಡಳು. ಮೈತುಂಬ ಸೆರಗು ಹೊದ್ದು ಮೈಮುದುಡಿ ಕುಳಿತುಕೊಂಡ ರೀತಿ ಅತೀ ಕರುಣಾಜನಕವಾಗಿತ್ತು.

"ಇದೇಕೆ ನೆಲದಲ್ಲಿ .... ? ಕುರ್ಚಿಯಮೇಲೆ ಕುಳಿತುಕೊಳ್ಳೀಮ್ಮಾ" ನಾನೆಂದೆ.

ನನ್ನ ಮಾತಿಗೆ ಸಂಕೋಚದಿಂದ ಉತ್ತರಿಸಿದಳು ಅವಳು "ಪರವಾಯಿಲ್ಲ ಸ್ವಾಮಿ! ಇಲ್ಲಿಯೇ ಆದೀತು."

"ಏಳು, ತಾಯಿ. ನೆಲದಮೇಲೆ ಕೂಡುವುದು ಗೌರವವಲ್ಲ. ಮೇಲೆ ಕುಳಿತುಕೊ .... "

ಅವಳು ಏಳದೆ ಸಂಕೋಚದ ಮುದ್ದೆಯಾದಳು. ಬಹಶಃ ಸಾಮಾಜಿಕ ಬದ್ಧ ರೂಢಿಯಿಂದ ಬಂಧಿತ ಜೀವ .... ಹೀಗೆ ಒಮ್ಮೆಲೇ ಎಲ್ಲರೆದುರಿಗೆ ಕುರ್ಚಿಯಮೇಲೆ ಕುಳಿತುಕೊಳ್ಳುವುದು ಅವಳಿಗೆ ಹಿಡಿಸಲಿಲ್ಲ. ಅವನಾದರೂ ಹೇಳಿಯಾನೆಂದು ನೋಡಿದರೆ ಅವನು ಏನೊಂದೂ ಮಾತಾಡದೆ ಸುಮ್ಮನಾದ. ಬಹುಶಃ ತಮ್ಮ ದಿನಚರಿಯಲ್ಲಿ ಅದೇ ಪದ್ಧತಿ ಇರಬಹುದು ಅವರಲ್ಲಿ. ಅದರಿಂದಲೇ ಅವನ ಮುಖದಲ್ಲಿ ಸಣ್ಣ ಸಮಾಧಾನದ ಮುದ್ರೆಯಿತ್ತು, ಮಾತಾಡಲಿಲ್ಲ.

"ಏಕೆ ಇಲ್ಲಿಯ ತನಕ ಬರೋಣವಾಯಿತು ?" ನಾನು ಪ್ರಶ್ನೆ ಹಾಕದೆ.

"ನಿಮ್ಮ ಕಾಗದ ತಲ್ಪಿತು. ನನ್ನ ಮಗಳು ಚಂದ್ರಿಯನ್ನು ರಿಮ್ಯಾಂಡ್ ಹೋಮಿಗೆ ಸೇರಿಸಿರುವುದಾಗಿ ಬರೆಸಿದ್ದೀರಿ. ಅದಕ್ಕಾಗಿ ಬಂದೆವು."

ವೃದ್ಧೆಯ ಮ್ಲಾನ ಮುಖದಲ್ಲಿ ಕಂಬನಿಧಾರೆ ಹರಿಯಿತು.

"ಓ, ನೀವು ಚಂದ್ರಿಯ ತಂದೆತಾಯಿಗಳೇ ? ಅಂದು ಅವಳು ಹೊರಟು ಬಂದುದು ನಿಮಗೆ ತಿಳಿಯಲಿಲ್ಲವೇ ? ಹುಡುಗಿ ನೋಡಿದರೆ ಚಿಕ್ಕವಳು .... ಇದು ಹೇಗೆ ಸಾಧ್ಯವಾಯಿತು ?"

“ಅವನು ಪರಮ ಧೂರ್ತ ! ಅವನು ಈಗಾಗಲೇ ಇಬ್ಬರು ಹೆಂಡಿರನ್ನು ಕೊಲೆ ಮಾಡಿದ್ದಾನೆ. ಈಗ ನಮ್ಮ ಮಗಳನ್ನು ನಮಗೆ ತಿಳಿಯುವಂತೆ ಅಪಹರಿಸಿದ್ದಾನೆ. ಇವಳು ಏನೂ ಅರಿಯದ ಹುಡುಗಿ. ಅವನ ಮಾತಿಗೆ ಮರುಳಾಗಿ ಬಂದಿದ್ದಾಳೆ. ನೀವು ಅವನಿಂದ ಉಳಿಸಿ ನಮಗೆ ಉಪಕಾರ ಮಾಡಿದ್ದೀರಿ. ನಿಮ್ಮ ಉಪಕಾರ ಎಂದಿಗೂ ಮರೆಯುವಂತಿಲ್ಲ.”

“ಇನ್ನು ಮುಂದೆ ಚಂದ್ರಿಯನ್ನು ಶಾಲೆಗೆ ಕಳುಹಿಸಿ ವಿದ್ಯಾಭ್ಯಾಸ ಮಾಡಿಸಿ. ಪ್ರಾಪ್ತವಯಸ್ಕಳಾದನಂತರ ಸೂಕ್ತ ವರನಿಗೆ ಕೊಟ್ಟು ಮದುವೆ ಮಾಡಿರಿ. ಎಳೆಯ ಹುಡುಗಿ ತಿಳಿಯದೆ ತಪ್ಪು ಕೆಲಸ ಮಾಡಿದಾಳೆ. ನೀವು ಎಚ್ಚರಿಕೆ ವಹಿಸಬೇಕಾಗಿತ್ತು.”

ಆ ಧೂರ್ತ ವಾಸುವಿನ ಮಗಳು ಚಂದ್ರಿಯ ಓರಗೆಯ ಹುಡುಗಿ. ಇಬ್ಬರೂ ಒಂದೇ ಕಡೆ ಓದುವುದರಿಂದ ಅವರವರಿಗೆ ಸಂಪರ್ಕ ಬೆಳೆಯಿತು. ಇನ್ನು ಮುಂದೆ ಶಾಲೆಗೆ ಕಳುಹಿಸುವುದೇ ಇಲ್ಲ. ಹೊರಹೋದರೆ ಈ ಕಷ್ಟ ....?”

“ಹಾಗೆಂದರೆ ಹುಡುಗಿಗೆ ಅನ್ಯಾಯವಾಗುತ್ತೆ. ಈ ಕಾಲಕ್ಕೆ ವಿದ್ಯೆ ಬೇಕೇ ಬೇಕು, ಹಾಗೆ ಮಾಡಬೇಡಿ.”

“ಸ್ವಾಮಿ, ಹಳ್ಳಿಯಲ್ಲಿ ಇರುವುದೊಂದೇ ಶಾಲೆ. ನಾವು ಏನು ಮಾಡೋಣ ? ಅವನಿಗೆ ನಲವತ್ತೈದು ವರ್ಷವಾಗಿದೆ. ಹದಿನೈದರ ಹುಡುಗಿಯ ಮೇಲೆ ಕಣ್ಣು. ಇದಕ್ಕೆ ಇತಿ ಮಿತಿಯುಂಟೇ ? ಊರವರು ಅವನ ಕಾಲು ಮುರಿಯಲು ಸಿದ್ಧವಿದ್ದಾರೆ. ಆದರೆ, ಕೋರ್ಟು ಕಚೇರಿಗಳ ತಿರುಗಾಟ ಯಾರಿಗೂ ಬೇಡ.”

ನಾನು ವಿಚಾರಶೀಲನಾದೆ. ವಿಷಯ ಎದೆಯಾಳಕ್ಕೆ ಇಳಿಯಿತು. ಬಡ ದೇಶ, ಬಡಜನ, ಅತಂತ್ರ ಆಡಳಿತದಲ್ಲಿ ಇಲಿ ಹೆಗ್ಗಣಗಳ ಕೂಟ. ಅವಿದ್ಯೆ–ಅಜ್ಞಾನ ಕುಸಂಸ್ಕಾರಕ್ಕೆ ದಾರಿ. ಇದರ ದುರಸ್ತಿಗಾಗಿ ಹತ್ತು ಮಂದಿ ಗಾಂಧೀಜಿಗಳು ಅವತರಿಸಿದರೂ ಇಂದು ಸಾಲದು. ಅಪ್ಪಟ ನಾಗರಿಕತೆ ಮೂಡದು. ಪ್ರಗತಿಯು ಗುರಿ ಮುಟ್ಟದು ....

ಕೊನೆಯ ಅಂಕವಾಗಿ ವೃದ್ಧ ದಂಪತಿಗಳು ಕೈಮುಗಿದು ರಿವ್ಯ್ಯಾಂಡ್ ಹೋಮಿನತ್ತ ಹೊರಟರು.ಅವರ ಮುಖದಲ್ಲಿ ಕಿರು ಸಂತಸದ ಬೆಳಕನ್ನು ಕಂಡೆ. ಅವರಿಗಾಗಿ ಮನಸ್ಸು ಮರುಗಿತು. ಇನ್ನಾದರೂ ಚಂದ್ರಿಯ ಬಾಳು ಸುಖಕರ ವಾಗಿರಲಿ ಎಂದು ಹಾರೈಸಿದೆ.

o o o o

ಸಾಯಂಕಾಲ. ಐದು ಗಂಟೆಯ ಸಮಯ ....

ನಾನು ಆಗತಾನೇ ಕೋರ್ಟಿನಿಂದ ಹಿಂದಿರುಗಿದ್ದೆ. ಇನ್ನೂ ಮುಖ ಮಜ್ಜನ ಮಾಡಿರಲಿಲ್ಲ. ಆಗಲೇ ಟೆಲಿಫೋನಿನ ಕರೆ.

"ಹಲೋ .... ನಮಸ್ಕಾರ."

ನಮಸ್ಕಾರ ಅಡ್ವೋಕೇಟರು ಇದ್ದಾರೆಯೇ ?"

"ಹೌದು .... ನಾನೇ ಮಾತಾಡುತ್ತಿರುವುದು. ಏನು ಸಮಾಚಾರ ?"

"ಒಂದು ಕೇಸಿನ ವಿಚಾರವಾಗಿ ನಿಮ್ಮೊಡನೆ ಮಾತಾಡಬೇಕಾಗಿದೆ."

"ಸಾಯಂಕಾಲ ಬನ್ನಿ."

"ಸಾಯಂಕಾಲವಾದರೆ ಆಫೀಸಿನಲ್ಲಿ ಜನ ತುಂಬಿರುತ್ತಾರೆ. ನಾನು ನಿಮ್ಮೊಂದಿಗೆ ಅಂತರಂಗವಾಗಿ ಮಾತಾಡಬೇಕಾಗಿದೆ. ದಯವಿಟ್ಟು ಕ್ಷಮಿಸಿ, ಈಗಲೇ ಬಂದರೆ ಆಗಬಹುದೇ ?"

ನಾನು ಮಾನಸಿಕವಾಗಿ ಮಾತ್ರವಲ್ಲ, ದೈಹಿಕವಾಗಿಯೂ ದಣಿದಿದ್ದೆ. ಕೋರ್ಟಿಂದ ಕೋರ್ಟಿಗೆ ಅಲೆಯುವುದು ಗಂಟೆಗಟ್ಟಲೆ ನಿಂತು ವಾದಿಸುವುದು, ಮೇಲಾಗಿ ರಸಹೀನ ವಿಚಾರ ಸಾಹಿತ್ಯವನ್ನು ಚರ್ವಿತಚರ್ವಣಗೊಳಿಸುವ ಕರ್ಮಕಾಂಡ ಬೇಡವೇ ಬೇಡ. ಅಂದಮೇಲೆ, ಆತನ ಆತುರಕ್ಕೆ ಮನಸ್ಸು ಹೇಸಿತು. ಆದರೂ ವಿಧಿಯಿಲ್ಲ. ಒಪ್ಪಿಗೆ ಕೊಟ್ಟು ಟೆಲಿಫೋನಿನ ಸಂಪರ್ಕ ತುಂಡುಗಡಿದೆ. ನಾನು ಮುಖಮಜ್ಜನ ಮಾಡಿ ಚಹ ಕುಡಿಯುವಷ್ಟರಲ್ಲಿ ವ್ಯಕ್ತಿ ತಲೆ ಬಾಗಿಲಿಗೆ ಬಂದಾಗಿತ್ತು. ಆತನನ್ನು ಹಿಂದೆಂದೂ ನೋಡಿರಲಿಲ್ಲ. ವ್ಯಕ್ತಿ ಪೀಚಲಾದರೂ ಮುಖದಲ್ಲಿ ಸಾತ್ವಿಕತೆಯ ಕಳೆಯಿತ್ತು. ಸರಳ ತೊಡಿಗೆಯ ನಾಗರಿಕ ವ್ಯಕ್ತಿ. ಅವನನ್ನು ನಾನು ಒಳಬರ ಮಾಡಿಕೊಂಡೆ.

ಒಡಲ ಕಳಕಳಿಯೆಲ್ಲಾ ಒಮ್ಮೆಗೇ ಮುಖಕ್ಕೆ ನುಗ್ಗಿಬಂದಂತೆ ಮುಖಬಿಂಬ ಮ್ಲಾನವಾಯಿತು. ಇಳಿದನಿಯಲ್ಲಿ ವಂದನೆ ಸಲ್ಲಿಸಿದ.

ಅವನು ಕುಳಿತನಂತರ ನಾನು ಕದ ಮುಚ್ಚಿಕೊಂಡು ಕೇಳಿದೆ,

"ಏನಪ್ಪಾ ಸಮಾಚಾರ .... ? ನಿಮ್ಮ ಹೆಸರೇನು ?"

ಅವನು ತೀರಾ ಭಾರವಾದ ದನಿಯಲ್ಲಿ ನುಡಿದ,

''ನನ್ನ ಹೆಸರು ಮಿತ್ರ. ಕಳೆದ ತಿಂಗಳು ಯಶವಂತಪುರದಲ್ಲಿ ದಂಪತಿಗಳ ಜೋಡಿಕೊಲೆಯಾದುದನ್ನು ನೀವು ಪತ್ರಿಕೆಗಳಲ್ಲಿ ಓದಿರಬಹುದು. ನಾನೀಗ ಬಂದಿರುವುದು ಅದರ ಸಂಬಂಧ ...."

ಅಷ್ಟಕ್ಕೆ ಸುಮ್ಮನಾಗಿ ಉಗುಳು ನುಂಗಿದ ಮಿತ್ರ.

"ಸರಿ, ಮುಂದೆ ಹೇಳಿ ...."

ಅವನು ನಿಟ್ಟುಸಿರು ಬಿಟ್ಟು ಮುಂದುವರಿದ "ಕೊಲೆಯಾದವರು ನನ್ನ ದೊಡ್ಡಪ್ಪ-ದೊಡ್ಡಮ್ಮ. ಒಂದಾನೊಂದು ಕಾಲದಲ್ಲಿ ಅವರಿಗೂ ನಮಗೂ ಆಸ್ತಿ ವಿಚಾರದಲ್ಲಿ ಸ್ವಲ್ಪ ಮನಸ್ತಾಪವಿದ್ದುದು ನಿಜ. ಅದು ಬಹಳ ಹಿಂದಿನ ಸಮಾಚಾರ, ಎಂದರೆ ನನ್ನ ತಂದೆಯ ಕಾಲದ್ದು. ನನ್ನ ತಂದೆಯವರು ತೀರಿ ಕೊಂಡು ಹತ್ತುವರ್ಷಗಳಾದುವು. ಅವರೊಂದಿಗೆ ನಮ್ಮ ತಂದೆಯ ಸ್ನೇಹ ಸಂಬಂಧ ಏನೇನೂ ಇರಲಿಲ್ಲ. ನಾವೂ ಅಷ್ಟೆ. ಕಷ್ಟ ಸುಖಗಳಲ್ಲಿ ಭಾಗವಹಿಸಿ ದ್ದುದೇ ಹೊರತು ಸ್ನೇಹ ಸಂಬಂಧ ಬೆಳೆಸಲಿಲ್ಲ. ಅವರ ಕೊಲೆಯಾದ ದಿನ ನಾನು ಮೈಸೂರಿನಲ್ಲಿದ್ದೆ. ಅದ್ಯಾವ ದುಷ್ಟ ಜನ ನನ್ನ ಮೇಲೆ ಗುಮಾನಿ ಹೇಳಿದರೋ ನನ್ನ ವಿನಾಕಾರಣ ಅರೆಸ್ಟ್ ಮಾಡಿ ಮೊಕದ್ದಮೆ ಹೂಡಿದ್ದಾರೆ. ಕೊಲೆಯಾದುದು ರಾತ್ರಿ ಒಂಬತ್ತರ ಸಮಯದಲ್ಲಿ. ಅವರನ್ನು ಕೊಲೆ ಮಾಡಿದ ನಾನು ಅವರ ಮನೆಯ ಹಿಂಬಾಗಿಲಿಂದ ಹೊರಬಿದ್ದುದನ್ನು ನೋಡಿ ದುದಾಗಿ ನೆರೆಮನೆಯವರು ಸಾಕ್ಷಿ ಹೇಳಿದ್ದಾರೆ! ಇದಕ್ಕೇನೆನ್ನೋಣ ? ನಾನು ಐವತ್ತು ಸಾವಿರ ರೂಪಾಯಿಗಳ ವೈಯಕ್ತಿಕ ಜಾಮೀನು ಬರೆದುಕೊಟ್ಟು ಹೊರಬಂದಿರುವೆ. ಈಗ ನನಗೆ ಈ ವಿಚಾರದಲ್ಲಿ ನಿಮ್ಮ ಸಹಾಯ ಬೇಕಾಗಿದೆ. ನನಗೆ ಚಿಕ್ಕವಯಸ್ಸಿನ ಹೆಂಡತಿ ಮಕ್ಕಳಿದ್ದಾರೆ. ವಿನಾಕಾರಣ ನನ್ನಮೇಲೆ

ಆಪಾದನೆ.... ತಂದೆಯ ನಂತರ ನಾವು ಆ ಆಸ್ತಿಯನ್ನು ಬಯಸಲೂ ಇಲ್ಲ. ವಾದ ವಿವಾದಕ್ಕೆ ಇಳಿಯಲೂ ಇಲ್ಲ. ಅಂದಮೇಲೆ ಅದೇನಿದ್ದರೂ ತಂದೆಯವರ ಕಾಲದ್ದು. ಈಗ ನನ್ನ ಮೇಲೆ ಗುಮಾನಿ ಮಾಡಲು ಕಾರಣವೇ ಇಲ್ಲ."

"ಈ ಬಗ್ಗೆ ನೀವು ಏನೆಂದು ಹೇಳಿಕೆ ಕೊಟ್ಟಿದ್ದೀರಿ ?"

"ಏನೆಂದು ಹೇಳಿಕೊಳ್ಳಲಿ ಸ್ವಾಮಿ ? ಕೊಲೆಯಾದ ಗಳಿಗೆಯಲ್ಲಿ ನಾನು ಮೈಸೂರು ಹಾದಿಯಲ್ಲಿದ್ದೆ. ಈ ವಿಚಾರ ಸರ್ವಥಾ ನನಗೆ ತಿಳಿಯದು. ಖಂಡಿತಾ ನಾವೆಂದೂ ದ್ವೇಷಾಸೂಯೆಯನ್ನು ಮುಂಬೆಳಸುವ ಗೋಜಿಗೆ ಹೋಗಿಯೇ ಇಲ್ಲ. ಇಷ್ಟಕ್ಕೂ ನಾನಂದು ಯಶವಂತಪುರವನ್ನು ಐದೂವರೆಗೆ ಬಿಟ್ಟು ರಾತ್ರಿ ಹತ್ತೂವರೆ ಗಂಟೆಗೆ ಮೈಸೂರು ತಲುಪಿದೆ. ಕೊಲೆಯಾದುದು ರಾತ್ರಿ ಒಂಭತ್ತು ಗಂಟೆಯಲ್ಲಿ. ಆದರೆ, ಪೋಲೀಸರು ಕೇಳಬೇಕಲ್ಲ. ನಾನು ಆ ಸ್ಥಳವನ್ನು ಐದೂವರೆಗೆ ಬಿಟ್ಟೆನೆಂದು ಸರಿಯಾದ ಸಾಕ್ಷಿ ಒದಗಿಸಿದರೂ ನಂಬಲಿಲ್ಲ.

"ಬಹುಶಃ, ಉದ್ದೇಶಪೂರ್ವಕವಾಗಿ ನನ್ನಮೇಲೆ ಆಪಾದನೆ ಮಾಡಿದ್ದಾರೆ. ಏನು ಕಾರಣ ಎಂಬುದು ಅರ್ಥವಾಗಲಿಲ್ಲ. ನಮಗೆ ದೊಡ್ಡಪ್ಪನಲ್ಲಿ ರಾಗ ದ್ವೇಷಾದಿಗಳು ಇರಲೇ ಇಲ್ಲ. ಆಗಲೇ ಹೇಳಿರುವೆ, ಅದೆಲ್ಲಾ ಏನಿದ್ದರೂ ನಮ್ಮ ತಂದೆಯವರ ಕಾಲದಲ್ಲಿತ್ತು. ಅವರು ಮರಣಿಸಿ ಹತ್ತು ವರ್ಷಗಳ ಮೇಲಾದುವು. ಅಂದಿನಿಂದ ಅವರ ಕಡೆಗೆ ನಾವು ಹೋಗಿ–ಬರುವ ಸ್ನೇಹ ಸಂಬಂಧ ಇಟ್ಟುಕೊಂಡೇಯಿಲ್ಲ. ಯಾವಾಗಲಾದರೊಮ್ಮೆ ಕಷ್ಟ ಸುಖಗಳಲ್ಲಿ ಭಾಗವಹಿಸಿದ್ದುಂಟು. ಅಷ್ಟು ವಿನಾ ಮತ್ತೇನೂ ನಾನರಿಯೆ.

"ನಾನು ಉದ್ದಿಮೆದಾರ. ನನಗೆ ಸರ್ವೆ ಆಫೀಸಿನಲ್ಲಿ ಆಗಾಗ ಕೆಲಸ ಬೀಳುತ್ತದೆ ಹಾಗೆ ಹೋಗಬೇಕಾದರೆ ದೊಡ್ಡಪ್ಪನ ಮನೆಯ ಮುಂದೆಯೇ ಹೋಗಿಬರಬೇಕು. ಬೇರೆ ದಾರಿಯಿಲ್ಲವಾದುದರಿಂದ ನಾನು ಹೋಗಿಬರುವುದು ಅದೇ ರಸ್ತೆಯಲ್ಲಿ. ಅಂದಹಾಗೆ, ಅದೇ ದಿನ ನಾನು ಆಫೀಸಿನಿಂದ ಹಿಂದಿರುಗಿ ಬರುವಾಗ ದೊಡ್ಡಪ್ಪನ ಮನೆಯ ಹತ್ತಿರ ನನ್ನ ಗೆಳೆಯ ಹರ್ಷ ಸಿಕ್ಕಿದ. ನಾನು ಕಾರು ನಿಲ್ಲಿಸಿ ಅವನನ್ನು ಒಳ ಬರಮಾಡಿಕೊಂಡೆ. ಸ್ವಲ್ಪ ಹೊತ್ತು

ಅಲ್ಲೇ ಮಾತಾಡಿದೆವು. ಅವನೂ ಮೈಸೂರಿಗೆ ಬರುವವನಿದ್ದ. ಅವನನ್ನು ಜೊತೆ ಗೂಡಿಸಿಕೊಂಡೆ. ನಾವು ದೊಡ್ಡಪ್ಪನ ಮನೆಯ ಬಳಿ ಕಾರು ನಿಲ್ಲಿಸಿದೆವಷ್ಟೆ ಅದನ್ನು ಯಾರು ನೋಡಿದರೋ ಅದನ್ನೇ ಕತೆ ಕಟ್ಟಿರಬಹುದು. ಪೋಲೀಸ ರಿಗೆ ತಮ್ಮ ದಕ್ಷತೆಯನ್ನು ತೋರಿಸಿಕೊಳ್ಳುವ ಷೋಕಿ ಒಂದುಂಟಲ್ಲ! ತಕ್ಷ ಣವೇ ಕೊಲೆಗಾರನನ್ನು ಹಿಡಿದೆವು ಎಂದು ಡಂಗೂರ ಬಾರಿಸಿಕೊಳ್ಳುವ ವಿಧಾನ ಇದು. ಯಾರು ಕೊಲೆಗಾರರೋ ಏನೋ ನನ್ನ ಮೇಲೆ ಈ ಅಪಾದನೆ ಹೊರಿಸುವುದೆಂದರೆ ಹೇಗೆ ಹೇಳಿ? ನಾನು ಹರ್ಷನೊಂದಿಗೆ ಯಶವಂತಪುರ ಬಿಟ್ಟಾಗ ಐದುಮುಕ್ಕಾಲು ಗಂಟೆಯಿರಬಹುದು. ನಾವು ಊರು ಬಿಟ್ಟು ಒಂದೂವರೆ ಗಂಟೆಯನಂತರ ಈ ಕೊಲೆ ನಡೆದಿದೆ........ನಾನು ಸುದ್ದಿ ತಿಳಿದು ಮೈಸೂರಿನಿಂದ ಯಶವಂತಪುರಕ್ಕೆ ಹಿಂದಿರುಗಿದ್ದೇ ತಡ, ಇನ್ನೂ ಮುಖ ತೊಳೆಯಲಿಲ್ಲ; ಆಗಲೇ ಅರೆಸ್ಟ್ ವಾರೆಂಟ್! ನನಗೆ ದಿಗ್ಭ್ರಮೆಯಾಯಿತು. ನಾನು ಎಷ್ಟೆಷ್ಟು ಕೇಳಿಕೊಂಡರೂ, ವಾದಿಸಿದರೂ ಅದೆಲ್ಲಾ ಅರಣ್ಯರೋಧನ ವಾಗಿ ಕೈಗೆ ಕೋಳ ಬಿತ್ತು. ಪೋಲೀಸ್ ಕಸ್ಟಡಿಗೆ ಎಳೆದುಕೊಂಡು ಹೋದರು. ಅಲ್ಲಿಂದ ಮ್ಯಾಜಿಸ್ಟ್ರೇಟರ ಮುಂದೆ ನಿಲ್ಲಿಸಿದರು.

"ಅಂದಿನಿಂದ ಕೇಸನ್ನು ಸಾಬೀತುಗೊಳಿಸಲು ಬಗೆಬಗೆಯ ನಾಟಕ ಆಡಿ ದ್ದಾರೆ ಈ ಪೋಲೀಸರು. ನಾನು ನಿಜಕ್ಕೂ ಹೇಳುವುದಾದರೆ ನಾನೆಂದೂ ಸತ್ಯ–ಧರ್ಮ ಬಿಟ್ಟವನೇ ಅಲ್ಲ. ನನಗೆ ಅಂತಹ ಆಸ್ತಿಪಾಸ್ತಿಯ ಗೀಳಿಲ್ಲ. ಒಂದು ವೇಳೆ, ನಾನು ಇಷ್ಟಪಟ್ಟಿದ್ದಿದ್ದರೆ ದೊಡ್ಡಪ್ಪನ ವಿರುದ್ಧ ಮೊಕದ್ದಮೆ ನಡೆಸಬಹುದಾಗಿತ್ತು. ಪಿತ್ರಾರ್ಜಿತವಾದ ಆಸ್ತಿಯಲ್ಲಿ ನನ್ನ ತಂದೆಗೆ ಪಾಲು ಕೊಡಲೇ ಇಲ್ಲ. ಮೋಸ–ಮೋಸ, ಮೋಸದ ಬಂಡವಾಳಕ್ಕೆ ದೊಡ್ಡಪ್ಪ ಒಡೆಯ. ಮೋಸದಿಂದಲೇ ಅಪಾರವಾದ ಆಸ್ತಿ ಗಳಿಸಿದ್ದಾನೆ. ಕೊಚ್ಚೆಯಲ್ಲಿ ಕಾಸು ಸಿಕ್ಕಿದರೂ ಹೆಕ್ಕಿಕೊಳ್ಳುವವನೇ. ಅವನ ಮೇಲೆ ಈ ಮೋಸಗಾರಿಕೆ ಯಿಂದ ಯಾರಿಗೆ ದ್ವೇಷವಿತ್ತೋ ತೀರಿಸಿಕೊಂಡಿದ್ದಾರೆ. ಅವನನ್ನು ಬಿಟ್ಟು ನನ್ನ ಮೇಲೆ ಈ ಕ್ರಮ. ಇದಕ್ಕೇನು ಹೇಳಲಿ ?" ಅವನ ಕಂಠ ಗದ್ಗದಿತ ವಾಯಿತು. ಕಷ್ಟದಿಂದ ಸಾವರಿಸಿಕೊಂಡ.

"ಯಾವ ಸಾಕ್ಷ್ಯಾಧಾರದ ಮೇಲೆ ನಿಮ್ಮನ್ನು ಅರೆಸ್ಟ್ ಮಾಡಿದ್ದಾರೆ?"

"ನಾನಂದು ನನ್ನ ಗೆಳೆಯನೊಂದಿಗೆ ಅವರ ಮನೆಯ ಬಳಿ ಮಾತಾಡಿ ದ್ದನ್ನು ಯಾರು ನೋಡಿದರೋ ಅವರೇ ಈ ಕತೆಯನ್ನು ಸೃಷ್ಟಿಸಿದ್ದಾರೆ........ ಅಥವಾ ಪೋಲೀಸರ ಸೃಷ್ಟಿಯೋ ಯಾರಿಗೆ ಗೊತ್ತು?"

ವಿಷಾದವಾಣಿ ಎದೆಯಾಳದಿಂದ ಹೊರಬಿತ್ತು. ಅತೀ ಸಾತ್ವಿಕತೆಯ ಛಾಯೆ ತುಂಬಿದ ಹೊಳಪು ಗಣ್ಣುಗಳಲ್ಲಿ ನೀರಾಡಿತು. ಆತನ ಸಂಕಷ್ಟವನ್ನು ಅರಿತು ನನ್ನ ಮನಸ್ಸು ನೊಂದು ನೀರಾಯಿತು.

"ನೀವು ನನ್ನ ಸ್ನೇಹ ವರ್ಗದಲ್ಲಿ ಅಥವಾ ಉದ್ದಿಮೆಯ ಕ್ಷೇತ್ರದಲ್ಲಿ ಯಾರನ್ನಾದರೂ ವಿಚಾರಿಸಿ ತಿಳಿದು ನೋಡಿದರೆ ನನ್ನ ವಿಚಾರ ನಿಮಗೆ ಪೂರಾ ತಿಳಿದೀತು. ನನ್ನಂತಹ ಪರಮ ಸಾತ್ವಿಕ ವ್ಯಕ್ತಿಗೆ ಈ ಅರೋಪ ಮಾಡುವುದೆಂದರೆ ಈ ಪೋಲೀಸರು ಎಷ್ಟು ನಿಶ್ಚಯಿಸಿರಬಹುದು ನೀವೇ ಯೋಚಿಸಿ ನೋಡಿ!"

"ಒಡವೆ ವಸ್ತು ಕಳುವಾಗಿಲ್ಲವೇ?"

"ಆಗಿರಬಹುದೇನೋ....ಆ ವಿಚಾರ ನನಗೆ ತಿಳಿಯದು."

"ನಿಮ್ಮ ಮೇಲೆ ಗುಮಾನಿ ಮಾಡಲು ಕಾರಣವೊಂದು ಬೇಕಲ್ಲ."

"ಕಾರಣ ಇಲ್ಲನೇ ಇಲ್ಲ. ಕೃತಕ ಕತೆ ಸೃಷ್ಟಿ. ದೊಡ್ಡಪ್ಪನ ಪಕ್ಕದ ಮನೆ ಯವರು ದೊಡ್ಡಪ್ಪನ ಮನೆಯ ಹಿಂಬಾಲಿಂದ ಹೊರಬಂದು ಇನ್ನೊಬ್ಬ ನೊಂದಿಗೆ ನಾನು ಕಾರು ಹತ್ತಿದುದನ್ನು ನೋಡಿದ್ದಾರೆ ಎಂದು ಪೋಲೀಸರು ಅಂಬೋಣ....ನನಗೆ ಇವರನ್ನೆಲ್ಲಾ ಸುಟ್ಟುಬಿಡೋಣ ಎಂಬಷ್ಟು ಸಿಟ್ಟು ಬರು ತ್ತದೆ. ಆದರೆ, ಏನು ಮಾಡಲಿ ಹೇಳಿ."

ಅವನ ಸಂಕಟ ನನ್ನ ಎದೆಯಾಳಕ್ಕಿಳಿಯಿತು. ನಾನು ವಕಾಲತ್ತು ವಹಿ ಸಿದೆ.

ಆದಿನ ಮಿತ್ರ ಮೈಸೂರಿನಲ್ಲಿದ್ದುದನ್ನು ಸಾಬೀತುಪಡಿಸಿದರೂ, ಅವನು ಕೊಲೆ ಮಾಡಿದನಂತರವೇ ಮೈಸೂರಿಗೆ ಹೋದನೆಂಬುದಕ್ಕೆ ಕೃತಕ ಪುರಾವೆಗಳು ಒದಗಿದುವು. ಕೊಲೆ ಮಾಡಲು ಸೂಕ್ತ ಸಮಯಹೊಂದಿಸಿ

ಕೊಳ್ಳುವುದಕ್ಕಾಗಿಯೇ ಆ ರಸ್ತೆಯಲ್ಲಿ ಆಗಾಗ ಓಡಾಡುತಿದ್ದನೆಂದು ಒತ್ತಿ ಹೇಳಿದರು ಸರಕಾರಿ ವಕೀಲರು. ನಾನು ಎಷ್ಟೆಷ್ಟು ಪ್ರಯತ್ನಿಸಿದರೂ ಅವ ನನ್ನು ಉಳಿಸಿಕೊಳ್ಳಲಾಗಲಿಲ್ಲ. ಆಸ್ತಿಯ ಉದ್ದೇಶವೇ ಕೊಲೆಗೆ ಕಾರಣವೆಂದು ತೀರ್ಮಾನಿಸಿದರು ಕುರುಡುಗಣ್ಣಿನ ನ್ಯಾಯಾಧೀಶರು.

ಪಕ್ಕದ ಮನೆಯವರು, ತಾವು ಸಾಕ್ಷಾತ್ ಮಿತ್ರನನ್ನು ಕಂಡುದುದಾಗಿ ಸಾಕ್ಷ್ಯ ಹೇಳಿದ್ದರು. ಅವನಿಗೆ ವಿನಾಕಾರಣ ಹದಿನಾಲ್ಕು ವರ್ಷಗಳ ಕಾರಾ ಗ್ರಹ ವಾಸ ಲಭಿಸಿತು. ಆ ನತದೃಷ್ಟ ವ್ಯಕ್ತಿಗಾಗಿ ಆತನ ಮಡದಿ ಮಕ್ಕಳಿ ಗಾಗಿ ಮರುಗಿದೆ. ಹೃದಯ ಕಲ್ಲು ಹೊತ್ತಷ್ಟು ಭಾರವಾಯಿತು.

೦ ೦ ೦ ೦

ಅಂದು ಏಳನೆಯ ಕೋರ್ಟಿನಿಂದ ಸಾಕ್ಷಿಯಾಗಿ ಬರಲು ನನಗೆ ನೋಟೀಸ್ ಬಂದಿತು.

ನಾನು ಯಥಾಪ್ರಕಾರವಾಗಿ ಕೋರ್ಟಿಗೆ ಹೋದೆ. ಜಗಲಿಯ ಮೆಟ್ಟಿ ಲನ್ನು ಹತ್ತಿದಾಗಲೇ ಬೆಳ್ಳಿ ದಂಡದವ ಎದುರಾದ. ಅವನು ಬೆಳ್ಳಿದಂಡದ ಸಹಿತ ಮುಂದೆ ಸಾಗುತಿದ್ದಂತೆ ಹಿಂದೆಯೇ ನ್ಯಾಯಾದೀಶ ರಾಮಚಂದ್ರ ಭಟ್ ಬರುತ್ತಿದ್ದರು. ಮಿತ್ರನನ್ನು ಮುಳುಗಿಸಿದ ಮಹಾನುಭಾವ.

"ನಮಸ್ಕಾರ ಸರ್ !"

"ನಮಸ್ಕಾರ."

ಅವರ ಹೀನ ಚರಿತ್ರೆಯೆಲ್ಲಾ ಚಿತ್ತಭಿತ್ತಿಯ ಮೇಲೆ ಚಲನ ಚಿತ್ರದಂತೆ ಸುಳಿಸುಳಿದಳಿಯಿತು. ನ್ಯಾಯಸ್ಥಾನದ ನ್ಯಾಯ ಪೀಠದಲ್ಲಿ ಮಂಡಿಸಿ ಆತ ಆಡುವ ಆಟ ಬ್ರಾಹ್ಮಣ್ಯಕ್ಕೆ ಮಸಿ ಬಳಿಯುವಂತಾದ್ದು. ಮಾನವ ಸತ್ತರೆ ಚಿಂತೆಯಿಲ್ಲ; ಮಾನವತೆ ಸಾಯಬಾರದು.

ಅವರು ಹೊರಟರು. ನಾನು ಏಳನೆಯ ಕೋರ್ಟಿಗೆ ಹೋದೆ. ಹೃದಯ ಭಾರವಾಗಿತ್ತು.

ಕೇಸು ಕೂಗಿದ್ದರು. ಚಂದ್ರಿಯೊಡನೆ ತಾಯಿ ತಂದೆಯರು ಬಂದಿದ್ದರು. ಚಂದ್ರಿಯ ಪ್ರೇಮಿ ಕಟಕಟೆಯಲ್ಲಿ ನಿಂತು ಹೇಳಿಕೆ ನೀಡುತಿದ್ದ.

"ಸ್ವಾಮಿ! ನಾನು ದೇವರಮೇಲೆ ಆಣೆಯಿಟ್ಟು ಹೇಳುವೆ. ನನಗೆ ಐವತ್ತು ವರ್ಷ ಎಂಬುದು ಬರೀ ಕಟ್ಟುಕತೆ ನನಗೆ ಮೂವತ್ತಾರು ತುಂಬಿದೆ ಅಷ್ಟೆ. ನಾನು ಮಡದಿಯನ್ನು ಕಳೆದುಕೊಂಡಾಗಿನಿಂದ ಕೊರಗಿ ಕರಗಿ ಕುಂದಿ ರುವುದು ಸತ್ಯ. ನಾನು ಚಂದ್ರಿಯನ್ನು ಪ್ರಾಣಾತ್ಮಪೂರ್ವಕವಾಗಿ ಪ್ರೀತಿಸುವೆ. ಅವಳೂ ಅಷ್ಟೇ. ನನ್ನನ್ನು ನೆಚ್ಚಿ ಪ್ರೀತಿಸುತ್ತಾಳೆ. ನಾವಿಬ್ಬರೂ ಮೊದಲಿ ನಿಂದಲೂ ಅನ್ಯೋನ್ಯತೆಯನ್ನು ಸಂಪಾದಿಸಿದವರು. ಮುಂದೆ ಗೌರವ ಜೀವನ ನಡೆಸುವ ಪರಮೋದ್ದೇಶ ಹೊಂದಿದವರು. ನನ್ನ ತಬ್ಬಲಿ ಮಕ್ಕಳನ್ನು ಅವಳು ತುಂಬಾ ಪ್ರೀತಿಸುತ್ತಾಳೆ. ಆದ್ದರಿಂದ ಮುಂದೆ ನಮ್ಮ ಜೀವನ ಸುಖ ವಾಗಿರಲಿಕ್ಕೇ ಬೇಕು. ನಮ್ಮ ಮದುವೆಗೆ ಅವಕಾಶ ನೀಡದಂತೆ ಅವಳನ್ನು ನಿರ್ಬಂಧದಲ್ಲಿಟ್ಟಿರುವುದರಿಂದ ಈಗ ವಿವಾಹಕ್ಕೆ ಅಡ್ಡಿಯಾಗಿದೆ. ಅಲ್ಲದೆ ಚಂದ್ರಿಯ ಜೀವಕ್ಕೂ ಅಪಾಯವಿದೆ. ಇದನ್ನೆಲ್ಲಾ ಸ್ವಾಮಿಯವರು ಪರಾ ಮರಿಸಿ ನಮ್ಮ ಶುಭ ಲಗ್ನಕ್ಕೆ ಅನುಕೂಲ ಮಾಡಿಕೊಡಬೇಕಾಗಿ ಬೇಡಿ ಕೊಳ್ಳುವೆ. ನನ್ನ ಹೇಳಿಕೆಯಲ್ಲಿ ಕೃತ್ರಿಮ ಮೋಸ ಸುಳ್ಳು ಉತ್ಪ್ರೇಕ್ಷೆ ಯಾವುದೂ ಇಲ್ಲ. ನಿಮ್ಮ ಪಾದದಾಣೆ ಸ್ವಾಮಿ!"

ಅವನ ನಯ-ವಿನಯಗಳ ಸೋಗಿನ ಹೇಳಿಕೆ ಕೇಳಿ ನನ್ನ ಮೈ ಉರಿ ಯಿತು. ಆ ತಾಯಿ ತಂದೆಗಳು ಅಳುತಿದ್ದುದರಿಂದಲೋ ಅಥವಾ ನ್ಯಾಯಾ ಲಯದ ಭಯದಿಂದಲೋ ಮಗಳೂ ಮುಸಿ ಮುಸಿ ಅಳುತಿದ್ದಾಳೆ. ಅವಳ ಎತ್ತರದ ನಿಲುವು ಕುಗ್ಗಿ ಕುಬ್ಜವಾದಂತಿದೆ. ಸೀರೆಯ ಸೆರಗನ್ನು ಮೈ ತುಂಬಾ ಹೊದ್ದಿದ್ದಾಳೆ. ಮುಖಭಾವ ಪ್ರಸನ್ನವಾಗಿರಲಿಲ್ಲ.

ಅವಳ ಹೆಸರನ್ನು ಕೂಗುತ್ತಲೂ ಅವಳು ಹೋಗಿ ಕಟಕಟೆಯಲ್ಲಿ ನಿಂತು ಹೇಳಿಕೆಗೆ ಅಣಿಯಾದಳು. ಅವಳು ಹೆದರಬಹುದೆಂದು ಭಾವಿಸಿದ್ದೆ ನಾನು, ಊಹೂ, ಹಾಗೇನೂ ಆಗಲಿಲ್ಲ. ಸೆರಗಿನಿಂದ ಮುಖ ಕಣ್ಣುಗಳನ್ನು ತೀಡಿ ಕೊಂಡು ದೃಢಕಂಠದಿಂದ ನುಡಿದಳು "ಸ್ವಾಮಿ, ನಾನು ಬಿದಿರೆ ಹಳ್ಳಿ

ರಾಮಯ್ಯ ಮತ್ತು ಚಿನ್ನಮ್ಮನ ಮಗಳು. ನನಗೆ ಇಬ್ಬರು ಅಕ್ಕಂದಿರು ಇಬ್ಬರು ಅಣ್ಣಂದಿರು ಇದ್ದಾರೆ. ಯಾರಿಗೂ ಮದುವೆಯಾಗಿಲ್ಲ. ನಾನು ಪಾಪಣ್ಣನನ್ನು ಮದುವೆಯಾಗಲು ಒಪ್ಪಿದ್ದು ನಿಜ. ಅವರ ಮಗಳು ಲಕ್ಷ್ಮಿ ಮತ್ತು ನಾನು ತುಂಬಾ ಗೆಳತಿಯರು. ಆದ್ದರಿಂದಲೇ ನನಗೆ ಈ ಮದುವೆ ಇಷ್ಟ ...."

"ನಿನ್ನ ವಯಸ್ಸೆಷ್ಟು ....?"

"ಹದಿ....ಹ....ಹದಿನೆಂಟು ತುಂಬಿದೆ!"

"ನಿನ್ನನ್ನು ನೋಡಿದರೆ ಹಾಗೆನಿಸುವುದಿಲ್ಲ?"

"ಖಂಡಿತ ತುಂಬಿದೆ ಸ್ವಾಮಿ! ನಾನು ಸುಳ್ಳು ಹೇಳುವುದಿಲ್ಲ."

"ನಿನ್ನ ಅಕ್ಕಂದಿರಿಗೂ ಅಣ್ಣಂದಿರಿಗೂ ಮದುವೆಯಾದ ಮೇಲೆ ತಾನೆ ನಿನ್ನ ಮದುವೆಯಾಗಬೇಕು? ನಿನಗೀಗಾಗಲೇ ಏನವಸರ?"

"ಇದು ಅವಸರದ ಪ್ರಶ್ನೆಯಲ್ಲ; ಬದುಕಿನ ಪ್ರಶ್ನೆ."

"ನೀನು ಇಷ್ಟು ಅವಸರಿಸಿ ಹೊಂಡ ಹಾರುವುದಕ್ಕಿಂತ ಎಲ್ಲರದೂ ಆಗುವವರೆಗೆ ತಾಳ್ಮೆಯಿಂದ ಕಾದಿದ್ದು ನಿಧಾನವಾಗಿ ಯೋಚಿಸಿ ಮದುವೆಯಾಗುವುದು ಒಳ್ಳಿತಲ್ಲವೇ?"

"ನಾನು ಹಾಗೆಂದುಕೊಳ್ಳುವುದಿಲ್ಲ ಸ್ವಾಮಿ! ಅಪ್ಪನ ವ್ಯವಹಾರ ತುಂಬಾ ನಿಧಾನ. ನಾಲ್ಕು ಜನರ ಮದುವೆಯಾಗುವವರೆಗೆ ಕಾಯುವುದೆಂದರೆ ಯಾವ ಕಾಲಕ್ಕೋ ...."

"ಎಷ್ಟು ನಿಧಾನಿಸಿದರೆ ಅಷ್ಟು ಒಳ್ಳೆಯದು."

"ನನ್ನ ಮಟ್ಟಿಗೆ ಅದು ವ್ಯತಿರಿಕ್ತ ...."

"ನೀನು ಎಲ್ಲಿಯತನಕ ಓದಿರುವೆ?"

"ಎಂಟನೆಯ ತರಗತಿಯವರೆಗೆ."

"ಅಷ್ಟು ಅಲ್ಪ ವಿದ್ಯೆಯಿಂದ ನೀನು ಖಂಡಿತ ನಿನ್ನ ಜೀವನವನ್ನು ನಿರ್ಣಯಿಸಲಾರೆ. ನಿನ್ನ ಹಿರಿಯರ ಮಾತಿನಂತೆ ನಡೆದುಕೊಂಡರೆ ತುಂಬ ಕ್ಷೇಮ."

"ಸ್ವಾಮಿ! ದಯವಿಟ್ಟು ಕ್ಷಮಿಸಿ!" ಎಂದು ಕಟಕಟೆಯಿಂದ ಇಳಿದು ಬಂದು ಬಿಟ್ಟಳು! ತನಗೆ ಎಲ್ಲವೂ ಅಭ್ಯಾಸವಾಗಿದ್ದಂತೆ ಸರಾಗವಾಗಿ ನಡೆದು ಕೊಂಡ ರೀತಿ ಅತ್ಯಾಶ್ಚರ್ಯಕರ.

ತಂದೆ ತಾಯಿಯ ಹೇಳಿಕೆಯ ಪ್ರಕಾರ .... ಅವಳಿಗೆ ಹದಿನೈದು ವರ್ಷ ಮೂರು ತಿಂಗಳು ಮಾತ್ರ. ಅವಳನ್ನು ಅಪಹರಿಸಿಕೊಂಡು ಹೋಗಿದ್ದಾಗ ಅವಳಿಗೆ ಈ ಎಲ್ಲಾ ವಿಷಯವನ್ನು ತಿಳಿ ಹೇಳಿ ಗಿಣಿ ಪಾಠ ಮಾಡಿಸಿದ್ದಾನೆ. ಹಿಂದಿನ ಇಬ್ಬರು ಹೆಂಡಿರನ್ನು ಕೊಂದಿದ್ದಾನೆ ವಾಸು. ಮುಂದೆ ಇವಳ ಗತಿಯೂ ಅದೇ ಆದೀತು! ಹುಡುಗಿ ಚಿಕ್ಕವಳು. ಅವರ ಬಣ್ಣನೆ ಮಾತಿಗೆ ಮರುಳಾಗಿದ್ದಾಳೆ, ಅಷ್ಟೆ. ಮುಂದಿನ ಕಷ್ಟದ ಅರಿವು ಈಗ ಹೇಗೆ ತಿಳಿದೀತು? ಇದೆಲ್ಲಾ ಸಾಧ್ಯವೇ ಇಲ್ಲ. ಇವಳಿಗೆ ಹದಿನೆಂಟು-ಇಪ್ಪತ್ತು ವರುಷ ತುಂಬುವ ವರೆಗೆ ಮದುವೆ ಮಾಡುವುದಿಲ್ಲ ಎಂಬುದೊಂದಾದರೆ ಇನ್ನೊಂದು ಅಕ್ಕಂದಿರಿಗೆ ಮದುವೆಯಾಗದೆ ಇವಳು ಹಸೆಮಣೆ ಹೆಣ್ಣಾಗುವುದು ಸಾಧ್ಯವೇ ಇಲ್ಲ ....

ಅದೇ ಪ್ರಕಾರ ಕಟಕಟೆಯನ್ನೇರಿ ಹೇಳಿಕೆಕೊಟ್ಟ ರಾಮಯ್ಯ.

ಆದರೆ, ಅವಳು ತಂದೆಯ ಹೇಳಿಕೆಯನ್ನು ಅಲ್ಲಗೆಳೆದಳು.

ಅನಂತರ ನನ್ನ ಸಾಕ್ಷ್ಯ. ಅಂದು, ಇವಳು ನನ್ನೊಂದಿಗೆ ಹದಿನೈದು ವರ್ಷವೆಂದುದನ್ನು ಒತ್ತಿಹೇಳಿ, ಅವಳನ್ನು ರಿಮ್ಯಾಂಡ್ ಹೋಮಿಗೆ ಕಳುಹಿಸಿದ ವಿಚಾರವನ್ನು ಸ್ಪಷ್ಟೀಕರಿಸಿದೆ, ಅವಳು ಅದನ್ನು ಪ್ರತಿಭಟಿಸಿ ತಾನಂದು ನನಗೆ ಹದಿನೆಂಟು ವರ್ಷ ಎಂದು ಹೇಳಿಕೊಂಡಿದ್ದರೂ ಇವರು ನನ್ನನ್ನು ಅನ್ಯಾಯವಾಗಿ ರಿಮ್ಯಾಂಡ್ ಹೋಮಿಗೆ ಸೇರಿಸಿದರು ಎಂದು ಹೇಳಿಕೆ ಕೊಟ್ಟಳು. ನಾನು ನಿಜಕ್ಕೂ ಆಶ್ಚರ್ಯಚಕಿತನಾದೆ. ವಿಚಾರಶೀಲ ಮನಸ್ಸು ಕೆರಳಿತು. ಆದರೂ, ವಿಧಿಯಿಲ್ಲ.

o o o o

ಇಂದು ಚಂದ್ರಿ ಮೊಕದ್ದಮೆಯ ತೀರ್ಪಿನ ದಿನ.

ನ್ಯಾಯಾಧೀಶರ ಕಣ್ಣುಗಳಲ್ಲಿ ಇಣುಕುತಿದ್ದ ಅಂತರ್ಯದ ಛಾಯೆ ಯಿಂದಲೇ ನಾನವರ ತೀರ್ಪನ್ನು ಅಳಿದುಬಿಟ್ಟೆ. ಅವರು ಮೇಜು ಕುಟ್ಟಿ

ತೀರ್ಪನ್ನು ಓದಿದರು.... ಮೂರು ನಾಲ್ಕು ಪುಟಗಳ ವಿಚಾರಧಾರೆ ಅಷ್ಟೆ. ಅದರಲ್ಲಿ ಚಂದ್ರಿಯ ವಯಸ್ಸು ಹದಿನೆಂಟು ಎಂಬುದನ್ನು ಸ್ಥಿರೀಕರಿಸಿ ಅವಳ ಮದುವೆಗೆ ಅಪ್ಪಣೆಯ ಮುದ್ರೆಯನ್ನು ಒತ್ತಿ ಅನುಮತಿ ನೀಡಿದರು. ಅವಳ ಮುಖಾವಲೋಕನದಿಂದಲೇ ಅವಳು ಹದಿನೈದರ ಮುಗುದೆ ಎಂಬುದನ್ನು ಎಂತಹ ಮೂರ್ಖನಾದರೂ ತಿಳಿದುಕೊಳ್ಳಬಹುದಾದ ಸತ್ಯದೃಶ್ಯವಿದ್ದಾಗಲೂ ಅವರ ತೀರ್ಪು ಎಲ್ಲರನ್ನೂ ಕೆರಳಿಸುವಂತಿತ್ತು.

ಬೃಹದ್ ನ್ಯಾಯಾಲಯ ಊರಿನ ಎರಡೂ ಬಣಗಳಿಂದ ತುಂಬಿ ಹೋಗಿತ್ತು.

ಆ ಬಿಸಿಯುಸಿರಿನ ವಾತಾವರಣ ನ್ಯಾಯಾಲಯದ ಶಾಂತಿಯನ್ನೇ ಕಲಕುವಷ್ಟು ಅಸಮಾಧಾನ-ಅಶಾಂತಿಗಳ ದಿವ್ಯ ರಂಗವೇ ಆಗಿತ್ತು. ಚಂದ್ರಿಯ ತಾಯಿ ಬಿಕ್ಕಿ ಬಿಕ್ಕಿ ಅಳುತಿದ್ದಳು. ರಾಮಯ್ಯನಿಗೆ ಮತಿಗೆಟ್ಟು ರುದ್ರಕೋಪದಿಂದ ಉರಿದೆದ್ದು ಚಪ್ಪಲಿಯನ್ನು ನ್ಯಾಯಾಧೀಶನತ್ತ ಒಗೆದು "ನಿನಗೆ ಎಡಗಾಲಿನ ಚಪ್ಪಲಿಯ ಮರ್ಯಾದೆಯೇ ಸೈ!" ಎಂದು ಕೂಗಿದ.

ಕ್ಷಣಾರ್ಧದಲ್ಲಿ ಆ ಘಟನೆ ನಡೆದು ಹೋಯಿತು.

ಆ ಕೂಡಲೇ ಪೋಲೀಸರು ಅವನತ್ತ ನುಗ್ಗಿ ತಮ್ಮವಶಕ್ಕೆ ತೆಗೆದು ಕೊಂಡು ಎಳೆದೊಯ್ದರು. ಆಗ ಚಂದ್ರಿಯ ಹುರುಪೇನು? ತಂದೆಯ ಕೋಪತಾಪ, ತಾಯಿಯ ದುಃಖ, ಪೋಲೀಸರ ಕಾರ್ಯಾಚರಣೆ ಒಂದನ್ನೂ ಲೆಕ್ಕಿಸದೆ ಹುರುಪು–ಆನಂದಗಳಿಂದ ಓಡಿ ಹೋಗಿ ವಾಸಣ್ಣನನ್ನು ತಬ್ಬಿ ಕೊಂಡಳು. ಅಲ್ಲೇ ಬಳಿಯಲ್ಲಿದ್ದ ಅವನ ಮಗಳೂ ಚಂದ್ರಿಯ ಗೆಳತಿಯೂ ಆದ ತರುಣಿಯೂ ಬಂದು ಚಂದ್ರಿಯನ್ನು ತಬ್ಬಿಕೊಂಡಳು.

ಆ ದೃಶ್ಯವನ್ನು ನನ್ನ ಕಣ್ಣುಗಳು ನೋಡಲಾರದೇ ನೋಡಿದುವು. ಅಲ್ಲಿದ್ದ ಊರಿನ ಹಿರಿಯರಿಗೆ ಚಂದ್ರಿಯ ತಾಯಿಯನ್ನು ಸಮಾಧಾನ ಪಡಿಸಿ ಮನೆಗೆ ಕರೆದೊಯ್ಯುವಂತೆ ಹೇಳಿ, ನಾನೂ ಸಾಂತ್ವನದ ಮಾತಾಡಿ ಹೊರ ನಡೆದೆ. ಮನಸ್ಸು ನೊಂದು ನೀರಾಗಿತ್ತು, ಅಂತರಂಗದ ಹಕ್ಕಿ ಚಡಪಸಿತು. ನಾನು ನಿಜವಾಗಿಯೂ ಸೋತುಹೋಗಿದ್ದೆ.

೦ ೦ ೦ ೦

ಬಹುಶಃ ಆರೇಳು ತಿಂಗಳು ಅಥವಾ ಎಂಟ್ಹತ್ತು ತಿಂಗಳುಗಳೆ ಮೊನೆ ಕಳೆದಿರಬಹುದು. ಚಂದ್ರಿಯ ಪ್ರಕರಣ ಮನಸ್ಸಿನಿಂದ ಮಾಯವಾಗಿ ಎಂದೋ. ಇಂತಿಂತಹ ಪ್ರಕರಣಗಳೇ ದಿನವೂ ಹತ್ತು ರೀತಿಯಲ್ಲಿ ಪ್ರಕಟಗೊಳ್ಳುವುದ ರಿಂದ ಹಳೆಯ ಪ್ರಕರಣಗಳಿಗೆ ಎಡೆಯೆಲ್ಲಿ? ಕಾಲಗತಿಯಲ್ಲಿ ಎಲ್ಲವೂ ಕೊಚ್ಚಿ ಹೋಗುತ್ತಲೇ ಇರುತ್ತವೆ, ತರಗೆಲೆಗಳನ್ನು ಕೊಚ್ಚಿಕೊಂಡು ಹೋಗುವಂತೆ.

ಬೆಳಗಿನ ವಾಯುಸೇವನೆಗಾಗಿ ಅಂಗಣದಲ್ಲಿ ಅಡ್ಡಾಡುತಿದ್ದೆ. ತಣ್ಣನ ಹವೆಯಲ್ಲಿ ಎಷ್ಟು ಪದಚಾರಣ ಮಾಡಿದರೂ ಹಿತವೇ. ತಂಗಾಳಿಯ ತಣ್ಣಂಪು, ಅರೆಯರಳಿದ ಹೂಗಳ ನರುಗಂಪು ಮನಕ್ಕೆ ಮುದವೂಡುತ್ತವೆ. ಪಕ್ಷಿಗೊರಳ ಉದಯರಾಗಾವಳಿಗೆ ಎದೆಯ ಹಕ್ಕಿ ದನಿಗೂಡಿಸುತಿದ್ದರೆ ಮನಃ ಪ್ರಾಣಗಳು ರಾಗಮಯವಾದುವು.

ಸೂರ್ಯ ಅದೇ ತಾನೇ ಮೇಲೇರುತಿದ್ದ. ಆಗಸ ನೀಲಿಗೆಂಪಾಗಿತ್ತು.

ಚಂದ್ರಿಯ ತಾಯಿ ಚಿನ್ನಮ್ಮ ಬೇರೆ ಯಾರೊಂದಿಗೋ ಆಗಮಿಸಿದಳು. ಇನ್ನೂ ಕಕ್ಷಿಗಾರರು ಬಂದಿರಲಿಲ್ಲವಾದುದರಿಂದ ನಿಶ್ಶಬ್ದಮಯ ಆಫೀಸಿನಲ್ಲಿ. ಅವರನ್ನು ಆಫೀಸಿಗೆ ಬರಮಾಡಿಕೊಂಡೆ. ಇಂದೂ ಆ ತಾಯಿ ಕುಳಿತುಕೊಂ ಡುದುದು ನೆಲದ ಮೇಲೆ. ನನ್ನ ವಿನಯಪೂರ್ವಕ ಹೇಳಿಕೆ–ಕೇಳಿಕೆಗೂ ಆಕೆ ಎದ್ದೇಳಲಿಲ್ಲ.

"ಏನು ತಾಯಿ ನಿನ್ನ ಮಗಳು ಚಂದ್ರಿ ಸುಖವಾಗಿದ್ದಾಳೆಯೇ?"

ಆ ಕರುಣಾಜನಕ ಮೂರ್ತಿಯ ಅಳುವೇ ಉತ್ತರವಾಯ್ತು.

ಆಗ ಯಜಮಾನ ಹೇಳಿದರು "ನಾನು ಚಂದ್ರಿಯ ದೊಡ್ಡಪ್ಪ! ಅಂದು ಅಷ್ಟು ಒಳ್ಳೆಯ ಮಾತಾಡಿ ಹುಡುಗಿಯನ್ನು ಒಲಿಸಿಕೊಂಡ ಅವನು ಅವ ಳನ್ನು ಬಾಳಿಸಿದ್ದು ಐದಾರು ತಿಂಗಳು ಮಾತ್ರ. ಹೇಗೆ ತೀರಿಕೊಂಡಳು ಎಂಬುದು ಯಾರಿಗೂ ತಿಳಿಯದು. ಹೆಣ ಸುಟ್ಟಮೇಲೆ ನಮಗೆ ಸುದ್ದಿ. ಅನಂತರ ಫಿರ್ಯಾದು ಕೊಟ್ಟಿದ್ದೇವೆ. ಹೆಣ ಹೂಳಿದ್ದರೆ ಕಿತ್ತು ನೋಡಬಹು

ದಿತ್ತು. ಆದರೆ ಅವನು ಸುಟ್ಟು ಇಲ್ಲವಾಗಿಸಿದ್ದಾನೆ. ಸರಿ, ಅದೊಂದು ಗೋಳಾದರೆ, ಅಂದು ನ್ಯಾಯಾಧೀಶರತ್ತ ಚಪ್ಪಲಿ ಒಗೆದನೆಂದು ಪೋಲೀಸರು ಎಳೆದೊಯ್ದ ನನ್ನ ತಮ್ಮನನ್ನು ಇದುವರೆಗೂ ಬಿಡುಗಡೆ ಮಾಡಲಿಲ್ಲ. ಕೆಲವು ದಿನ ಪೋಲೀಸ್ ಕಸ್ಟಡಿ ಮತ್ತೆ ಕೆಲವು ದಿನ ಜೇಲು ಹೀಗೆ ಅಲ್ಲಿಯೇ ಉಳಿದಿದ್ದ. ಈಗ ಕೇಳಿದರೆ ಅವನು ಅಲ್ಲಿಯೇ ತೀರಿಕೊಂಡು ಎಷ್ಟೋ ದಿನಗಳಾದುವೆಂದು ಸುದ್ದಿ. ಜೇಲಿನಲ್ಲಿ ವಿಚಾರಿಸಿದರೆ ಯಾವ ಸುದ್ದಿಯೂ ತಿಳಿಯುಲಿಲ್ಲ. ಕಳೆದ ತಿಂಗಳು ಕೆಲವು ಖೈದಿಗಳನ್ನು ಬಳ್ಳಾರಿಗೆ ಕಳುಹಿಸಲಾಗಿದೆ ಎನ್ನುತ್ತಾರೆ. ಹಾಗೆ ಇವನನ್ನು ಕಳುಹಿಸಿದ ಬಗ್ಗೆ ಯಾವ ದಾಖಲೆಯೂ ಇಲ್ಲ...."

ಆತನ ಗದ್ಗದ ಕಂಠ ಅಲ್ಲಿಗೆ ನಿಂತುಹೋಯಿತು.

ಈಗ ನ್ಯಾಯವಾದಿಯಾಗಿ ನನ್ನ ಪಾತ್ರ?

—o—

# ಆಸೆ-ನಿರಾಸೆ

೧

ಅರಕ್ಷಿತಂ ತಿಷ್ಠತಿ ದೈವ ರಕ್ಷತಿ

....ಪ್ರಾತಃಕಾಲೀನ ಶೀತಲ ವಾತಾವರಣ.

....ಮೂಡಣ ದಿಗ್ದೇಶದಲ್ಲಿ ಉಜ್ವಲ ರವಿ ಉತ್ಥಾನವಾದ ಸುಸಮಯ.

ಮೋಹಿನಿ ಮುಂಬಾಗಿಲನ್ನು ತೆರೆದು ಸ್ವಲ್ಪಹೊತ್ತು ಹಾದಿಯ ಕಡೆ ನೋಡಿದಳು. ಆ ಕೊನೆಯವರೆಗೂ ಕಂಡಿತು ಬರೀ ಹಾದಿ. 'ಬೆಳಗಿನ ರೈಲಿಗೆ ಶ್ಯಾಂ ಹೊರಟಿದ್ದರೆ ಇಷ್ಟರೊಳಗಾಗಿ ಬರಬೇಕಿತ್ತು. ಇಂದೂ ಬರಲಿಲ್ಲವಲ್ಲಾ' ಎಂದು ತನ್ನೊಳಗೇ ನೊಂದುಕೊಂಡಳು. ಮನಸ್ಸು ಮುದುಡಿತು. ಒಡಲಾಳದಲ್ಲಿ ಏನೋ ಒಂದು ಬಗೆಯ ತಳಮಳ. ಇನ್ನೇನೋ ಒಂದು ಬಗೆಯ ಕಸಿವಿಸಿ. ಮತ್ತೇನೋ ಒಂದು ಬಗೆಯ ಆತಂಕ. ತನಗರಿಯದಂತೆಯೆ ಬಿಸಿಯುಸಿರೊಂದು ತಪ್ಪಿಸಿಕೊಂಡಿತು ಕದ ಮುಚ್ಚಿಕೊಂಡು ಒಳಬಂದಳು ಮೋಹಿನಿ.

ಶ್ಯಾಂ ಉತ್ತರದತ್ತ ಇಬ್ಬರು ಪೋಲೀಸರೊಂದಿಗೆ ಧಾವಿಸಿ ಹದಿನೈದು ದಿನಗಳಾಗಿದ್ದುವು. ಅವನಿಂದ ಈವರೆಗೆ ಯಾವ ಸುದ್ದಿಯೂ ಬಂದಿರಲಿಲ್ಲ. ಇಂದು–ನಾಳೆ ಎಂದು ಪ್ರತೀಕ್ಷಿಸುತ್ತಿರುವಂತೆಯೇ ದಿನಗಳು ವಾರಗಳು ಕಳೆದುವು.

'ಈ ಸಲಿ ಹೆಚ್ಚು ದಿನಗಳಾಗದು. ನಾಲ್ಕಾರು ದಿನಗಳಲ್ಲಿಯೇ ಹಿಂದಿರುಗುವೆ. ಕಳ್ಳನ ಜಾಡು ಪತ್ತೆಯಾಗಿದೆ. ಇನ್ನು ಹಿಡಿಯುವುದೊಂದು ಬಾಕಿ'

ಎಂದು ಧೈರ್ಯದಿಂದ ಹೇಳಿದ್ದ ಶ್ಯಾಂ. ಅಂದಮೇಲೆ ಯಾಕಿಷ್ಟು ತಡವೋ ಅದೇ ಅರ್ಥವಾಗದ ವಿಷಯ....ಕೈಯಲ್ಲಿ ಕಾಸಿಲ್ಲ. ಕಾಳು ಕಡ್ಡಿಗಳು ಮುಗಿದಿವೆ. ಇಂದೂ ಬರದಿದ್ದರೆ ಏನು ಗತಿ. ಮಕ್ಕಳ ಗತಿಯೇನು? ಎಂದುಕೊಳ್ಳುತ್ತಲೇ ಒಳಬಂದಳು. ಕಣ್ಣುಗಳು ಕಂಬನಿಯಿಂದ ತುಂಬಿದುವು. ಹಾಸಿಗೆ ಮಡಿಚಿ ಮಕ್ಕಳಿಗೆ ಮುಖ ಮಜ್ಜನ ಮಾಡಿಸಿದಳು.

ಪಾತ್ರೆಯ ತಳದಲ್ಲಿದ್ದ ರಾತ್ರಿಯ ಒಂದಿಷ್ಟು ಅನ್ನ ಸಾರು ಅಗ್ನಿಸಾಕ್ಷಿಯಾಗಿ ನಾಲ್ಕು ಬಟ್ಟಲಿಗೆ ಹಂಚಿಕೆಯಾಯಿತು. ಊಟ ಸಾಲದೆಂದು ಮಕ್ಕಳಿಗೆ ಅಸಮಾಧಾನ. ಸಾಲಾಗಿ ಕುಳಿತ ಮೂವರು ಹೆಣ್ಣುಮಕ್ಕಳ ಕಣ್ಣುಗಳಲ್ಲಿ ನೀರು ಧಾರೆಧಾರೆಯಾಗಿಳಿಯಿತು. ಮೋಹಿನಿ ಒಡನೆಯೇ ತನ್ನ ತಟ್ಟೆಯಲ್ಲಿದ್ದ ಹಿಡಿ ಅನ್ನವನ್ನು ಎಲ್ಲರಿಗೂ ಅಷ್ಟಿಷ್ಟು ಹಂಚಿ ಹಾಕಿದಳು.

"ಈ ದಿನ ಮಧ್ಯಾಹ್ನವಾದರೂ ಅಪ್ಪ ಬರಬಹುದು. ಅನಂತರ ಕಾಳು ಕಡ್ಡಿ ತರೋಣ. ಈಗ ಇದ್ದಷ್ಟು ಊಟ ಮಾಡಿ" ಎಂದು ಮೂವರನ್ನೂ ಮುದ್ದಿಟ್ಟು ಸಂತೈಸಿದಳು ತಾಯಿ.

ಊಟ ಮುಗಿದು ಮಕ್ಕಳು ಕೈ ನೆಕ್ಕುತ್ತಿರುವಾಗಲೇ ಮುಂಬಾಗಿಲು ತಟ್ಟಿದ ಸದ್ದು ಕೇಳಿಸಿತು. ಮೋಹಿನಿ ಎದ್ದು ಹೋಗಿ ಕದ ತೆರೆದಳು. ಶ್ಯಾಂ ಮುಖದಲ್ಲಿ ಕಿರುನಗೆಯನ್ನು ತೇಲಿಸಿ "ಎಲ್ಲರೂ ಊಟ ಮುಗಿಸಿದ್ದೀರಿ. ನನಗೇನಾದರೂ ಉಂಟೇ ?" ಎಂದ.

ಮೂವರು ಮಕ್ಕಳು ಸುತ್ತುವರಿದು "ನಿನ್ನೆಯಿಂದಲೂ ಊಟವಿಲ್ಲ. ನೀವು ಬಂದಮೇಲೆ ಕಾಳು ತರಬಹುದು" ಎಂದಿದಾರೆ ಅಮ್ಮ. ದನಿಯಲ್ಲಿ ಉತ್ಸಾಹವಿತ್ತು, ತೋಷವಿತ್ತು.

ಎಲ್ಲರ ಹಸಿದ ಮೋರೆಗಳೂ ಕಂದಿ ಕುಂದಿವೆ. ಮಡದಿಯಂತೂ ಸಂತಾಪದ ಮೂಟೆಯೇ ಆಗಿದ್ದಾಳೆ. ಎಲ್ಲರ ಮುಖಭಾವವನ್ನು ಓದಿ "ಹಾಗೇನೂ .... ?" ಎಂದ ಶ್ಯಾಂ. ಕರುಳು ಚುರುಚುರು ಗುಟ್ಟಿತು. ಪುನಃ ಏನೋ ಒಂದು ರೀತಿಯ ಪರಿತಾಪ ಸಂಮಿಶ್ರಣವಾದ ದನಿ ಎದೆಯಾಳದಿಂದ

ಹೊರಬಿತ್ತು "ಇಂದು ನನ್ನ ಕೈಯಲ್ಲೂ ಕಾಸಿಲ್ಲ. ಆ ಕಳ್ಳ ಎಲ್ಲಿ ಅಡಗಿದನೋ? ಎಷ್ಟು ಹುಡುಕಿದರೂ ಸಿಕ್ಕಲಿಲ್ಲ. ಸಿಕ್ಕಿದ್ದಿದ್ದರೆ ಕೈತುಂಬ ಕಾಸು ಸಿಗುತಿತ್ತು. ಅದಕ್ಕೂ ಕಲ್ಲು ಬಿತ್ತು

ಶ್ಯಾಂ ಮುಖಮುಜ್ಜನ ಮಾಡಿ ಅಂಗಡಿಯಿಂದ ರೊಟ್ಟಿ ಕೊಂಡು ತಂದ. ಅದನ್ನೋಡುತ್ತಲೂ ಮಕ್ಕಳಿಗೆ ಸ್ವರ್ಗವೇ ಕೈಗೆಟುಕಿದಷ್ಟು ಸಂತಸ. ಮೂವರಿಗೂ ರೊಟ್ಟಿಯನ್ನು ತಾನೇ ಹಂಚಿ, ಅವು ತಿಂದನಂತರ ಕೈತೊಳೆಸಿ ಟವಲ್ಲಿಂದ ಒರಸಿ ಮಡದಿಗೆಂದ "ಭಗವಂತ ಮೂರು ಹೆಣ್ಣು ಮಕ್ಕಳನ್ನು ಕೊಡುವುದಕ್ಕಿಂತ ಒಂದು ಗಂಡು ಮಗು ಕೊಟ್ಟಿದ್ದಿದ್ದರೆ ಸಂಸಾರಕ್ಕೆ ದುಡಿಯುತಿದ್ದ. ನಮಗೆ ಅದೃಷ್ಟವಿಲ್ಲದೆ ಹೋಯಿತು."

"ಈಗೇನು? ಹೆಣ್ಣು ಮಕ್ಕಳೂ ದುಡಿಯುವ ಮಾರ್ಗ ಕಂಡುಕೊಂಡಿದ್ದಾರೆ. ಓದಿಸಿದರಾಯಿತು."

"ಅಮ್ಮಮ್ಮ, ಮೂವರನ್ನು ಓದಿಸುವುದೆಲ್ಲಿಂದ? ಒಂದು ಗಂಡುಮಗು ಇದ್ದಿದ್ದರೆ ಮೂವರಿಗೆ ಓದಿಸುವುದನ್ನು ಒಬ್ಬನಿಗೇ ಓದಿಸಬಹುದಾಗಿತ್ತು."

"ಅಯ್ಯೊ, ಬಿಡಿ. ಅದೊಂದು ಕುರುಡು ನಂಬಿಕೆ."

"ಹೆಣ್ಣು ಮಕ್ಕಳು ಮದುವೆಯಾಗುವತನಕ ಇಲ್ಲಿ. ಅನಂತರ ಇನ್ನೆಲ್ಲೋ...." ಭಾವನಾತ್ಮಕ ಶೈಲಿಯಲ್ಲಿ ನುಡಿದ ಶ್ಯಾಂ. ಸ್ವಲ್ಪ ಹೊತ್ತಿನ ನಂತರ ಮತ್ತೆಂದ "ಅವಳಿ ಹೆಣ್ಣು ಮಕ್ಕಳನ್ನು ಕೊಟ್ಟ ದೇವರಿಗೆ ಒಂದು ಗಂಡು ಮಗುವನ್ನು ಕೊಟ್ಟದ್ದರೆ ಏನು ನಷ್ಟವಾಗುತಿತ್ತೋ.... ಕಷ್ಟ ಕೊಟ್ಟವರಿಗೇ ಕಷ್ಟಕೊಡುತ್ತಿರುತ್ತಾನೆ ದೇವರು."

ಅವನ ಬಳಿಯೇ ಕುಳಿತ ಮಡದಿ ಆ ಮಕ್ಕಳನ್ನು ಸಲಹಿದ ಬವಣೆಯ ಮೇಲೆ ಮನವನ್ನು ಹರಿಯಬಿಟ್ಟಳು. ಏನೂ ಹೇಳಲಿಲ್ಲ. ಸಂತಾಪದ ಬಿಸಿಯುಸಿರು ಎದೆಯಲ್ಲಿ ಹರಿದಾಡಿತು ನರನಾಡಿಗಳನ್ನು ಶೀಳುವಂತೆ. ಮ್ಲಾನ ಮುಖಿಯಾದಳು ಮೋಹಿನಿ.

o o o o

ವಂಶೋದ್ಧಾರಕ ಸುಪುತ್ರನಿಗಾಗಿ ಆಶಿಸಿದ ದಂಪತಿಗಳು ಹೃತ್ ಕುಂಡದಲ್ಲಿ ಸ್ವರ್ಣ ಕಲಶವನ್ನು ತುಂಬಿದರು. ನೆರೆ ಹೊರೆಯುವರು "ಮೂರು ಹೆಣ್ಣಿನಮೇಲೆ ಒಂದು ಗಂಡು ಹುಟ್ಟಿದರೆ ತುಂಬಾ ಅದೃಷ್ಟತರುತ್ತಾನೆ" ಎಂದು ಶುಭ ಹಾರೈಸಿದರು. ಮೋಹಿನಿ ಬಹಳ ಜನರ ಬಾಯಿಯಿಂದ ಆ ಮಾತನ್ನು ಹಿಂದೆಯೂ ಕೇಳಿದ್ದಾಳೆ ಈ ಸಲ ಗಂಡುಮಗುವಾಗಿ ಅದೃಷ್ಟ ಕೂಡಿ ಬಂದರೆ ಸಾಕು ಎಂದು ಮತ್ತೆಮತ್ತೆ ಹಾರೈಸುತ್ತದೆ ಎದೆಯ ಪಕ್ಷಿ ದೂರದ ಭವ್ಯ ಭವಿತವ್ಯವನ್ನು ನೆನೆದು.

ಆದರೇನು ? ಮೋಹಿನಿಯ ದೈಹಿಕ ಯಷ್ಟಿ ಪುಷ್ಟಿಗೊಳ್ಳಲಿಲ್ಲ. ನಿಶ್ಯಕ್ತಿ ರಕ್ತಹೀನತೆ ಧಾಳಿಯಿಟ್ಟುವು. ಅನಾರೋಗ್ಯ ಕಾಡಹತ್ತಿತು. ಮನೆಗೆ ನೀರು ತುಂಬಿ ಮೂರು ಹೊತ್ತು ಊಟ ಹೊಂದಿಸಿಗೊಳ್ಳುವುದೇ ಕಠಿಣವಾಯಿತು ವಾರವಾರವೂ ಆಸ್ಪತ್ರೆಗೆ ಹೋಗುತಿದ್ದಾಳೆ ಔಷಧಿ ಕಷಾಯಗಳು ನಡೆಯು ತ್ತಿವೆ. ಆದರೂ ಮೈಹಿಡಿಯದಷ್ಟು ನಿಶ್ಯಕ್ತಿ – ನಿತ್ರಾಣ.

ಮೋಹಿನಿ ರುಗ್ಣ ಶಯ್ಯೆಯಲಿ ಹೊರಳುತ್ತ ಮಗಳನ್ನು ಕುರಿತು "ಸಕ್ಕೂ, ಹೋಗು ಮಗಳೇ ಚಿಕ್ಕಚಿಕ್ಕ ಮಕ್ಕಳು. ಹೊರಹೋದರೆ ಕಷ್ಟ. ಎಷ್ಟೋ ಮಂದಿಯ ಬಾಯಿಯಲ್ಲಿ ಮಕ್ಕಳು ಕಳೆದು ಹೋದ ವಿಷಯ ಕೇಳು ತ್ತಿರುತ್ತೇನೆ. ಮಕ್ಕಳನ್ನು ನೋಡಿಕೊ ಮಗಳೇ" ಎಂದಳು. ನಯನ ದ್ವಯಗಳು ಬಾಗಿಲ ಕಡೆಗೆ ನಿಟ್ಟಿಸಿದುವು.

ನಾಲ್ಕು ವಸಂತಗಳನ್ನು ಕಂಡ ಮಕ್ಕಳ ದೇಹ ದುರ್ಬಲವಾಗಿದ್ದರೂ ಚಟುವಟಿಕೆ ಕಡಿಮೆಯದಲ್ಲ. ಎಲ್ಲಾ ಮಕ್ಕಳಂತೆಯೇ ಬಾಲಲೀಲೆಯಲ್ಲಿ ಮುಂದೆ. ಕೈಗೆ ಸಿಕ್ಕಿದ್ದನ್ನೆಲ್ಲಾ ಎಳೆದು ಅತ್ತಿತ್ತ ತೂರಾಡುತ್ತಾರೆ. ಕೈಗೆ ಸಿಕ್ಕುವಂತೆ ಯಾವ ವಸ್ತುವನ್ನೂ ಕೆಳಗಡೆ ಇಡುವಂತಿಲ್ಲ. ಹಿಂಬಾಗಿಲು ತೆರೆ ದರೆ ಕೊಚ್ಚೆಯ ನೀರಾಟ. ಮುಂಬಾಗಿಲು ತೆರೆದರೆ ರಸ್ತೆಗೆ ಇಳಿಯುವ ಆಸೆ. ಎಳೆ ಮಕ್ಕಳನ್ನು ಸುಧಾರಿಸುವ ಕಷ್ಟ ದೇವರಿಗೇ ಗೊತ್ತು. ಸಕ್ಕೂಗೆ ರಜೆ ಬಂದುದರಿಂದ ಮನೆಯಲ್ಲಿದ್ದಾಳೆ. ಆದ್ದರಿಂದ ಜೀವಕ್ಕೆ ಸ್ವಲ್ಪ ಹಗುರ. ಮನಸ್ಸಿಗೂ ಎಷ್ಟೋ ಸಮಾಧಾನ.

ಆದರೆ .... ಸಕ್ಕೂಗೆ ಹಿಡಿಯಲಾಗದ ಕಷ್ಟ.

ಮಧ್ಯಾಹ್ನದ ಸುಡುಬಿಸಿಲು ರಣರಣಿಸುತ್ತದೆ. ಗಾಳಿ ಬೆಳಕುಗಳ ಅಭಾವ ಬೇರೆ. ಮೈಯೆಲ್ಲಾ ಉರಿ. ತಾಳಲಾಗದ ಸೆಕೆ. ಅಂದು ಗಂಡುಮಗು ಬಯಸಿದ ಜೀವ ಇಂದು ಹೊರಲಾರದ ಭಾರದಿಂದ ತಳಮಳಿಸುತ್ತಿದೆ, ದುಃಖ ಸಂಕಟಗಳು ಬಲಿಯುತ್ತಿವೆ.

ಸಕ್ಕೂ ಹೊರಹೋಗಿದ್ದ ಮಕ್ಕಳನ್ನು ಒಳ ಕರೆ ತಂದಾಗಲೇ ಶ್ಯಾಂ ಒಳಬಂದ. ಪೋಲೀಸ್ ಉಡುಪನ್ನು ಅಲ್ಲಿಂದಲ್ಲೇ ಕಳಚಿ ಮೋಹಿನಿಯ ಬಳಿಗೆ ಬಂದು "ಮೋಹಿನೀ" ಎಂದ. ಧ್ವನಿಯಲ್ಲಿ ಕರುಣ ಕಾತರತೆ ತುಂಬಿ ತುಳುಕುತಿತ್ತು.

ಅವಳು ಮನದಲ್ಲೇ ಯೋಚಿಸಿ ದಿನವೂ ಅವನಿಗೆ ಕೇಳಿದ್ದೇ ಕೇಳಿ ಬೇಸರ ಪಡಿಸುವುದಕ್ಕಿಂತ "ಈವೊತ್ತು ಪರವಾಯಿಲ್ಲ" ಎಂದಳು ಕಿಂಚಿತ್ ಸಂತಸ ಮೂಡುವ ಸಲುವಾಗಿ. ಆದರೆ ಮುಖಭಾವ ಹೇಳುವ ರೀತಿಯೇ ಬೇರೆ. ಕಣ್ಣು ಗಳ ತೋರಿಕೆಯೇ ಬೇರೆ.

ಶ್ಯಾಂ ಮಕ್ಕಳಿಗೆ ಊಟ ಬಡಿಸಿದ. ನೀನಾ, ಮಿಾನರವರಿಗೆ ಅಚ್ಚುಕಟ್ಟಾಗಿ ಊಟಮಾಡಲು ಸಹಾಯ ಮಾಡಿದಳು ಸಕ್ಕೂ. ಶ್ಯಾಂ ಮಡದಿಯೊಂದಿಗೆ ಊಟ ಮಾಡಿದ. ಮನಸ್ಸೆಲ್ಲಾ ಮುಜುಗರ. ಒಮ್ಮೆ ಈ ಸಂಕಟದಿಂದ ಪಾರಾಗಿ ತಾಯಿ ಮಗು ಸುಖವಾಗಿದ್ದರೆ ಸಾಕು ಎಂದು ಎದೆಯ ಹಕ್ಕಿ ದೇವರಿಗೆ ಹರಸಿಕೊಂಡಿತು. ಶ್ಯಾಂ ಮಡದಿಯ ಕೈ ಹಿಡಿದುಕೊಂಡು ಅವಳ ಬಿಳಿಚಿಕೊಂಡ ಮುಖವನ್ನು ನೋಡುತ್ತ ನುಡಿದ "ಮೋಹಿನೀ, ಇಂದು ಮದರಾಸಿಗೆ ಹೋಗಬೇಕಾಗಿದೆ. ಇನ್ಸ್‌ಪೆಕ್ಟರಿಗೆ ಬಹಳವಾಗಿ ಕೇಳಿಕೊಂಡೆ. ನಿನ್ನ ಪರಿಸ್ಥಿತಿಯನ್ನು ವಿವರಿಸಿ ಹೇಳಿದೆ. ಆದರೂ ಮನಸ್ಸಿಗೆ ಹಾಕಿಕೊಳ್ಳಲಿಲ್ಲ. ರಾತ್ರಿ ರೈಲಿಗೆ ಹೊರಡದೆ ವಿಧಿಯಿಲ್ಲ. ನೀನೇನೂ ಬೇಸರಿಸಬೇಡ. ದೇವರು ಬೇಡಿದವರ ಕಡೆಗೆ. ಅವನನ್ನೇ ಬೇಡುತ್ತಿರು. ಕಡೆಹಾಯಿಸುವವನು ಅವನೇ. ನನಗೆ ಮೂರುದಿನ ಕಳೆಯುವುದು ಮೂರುವಾರ ಕಳೆದಷ್ಟು ಕಷ್ಟ. ನಾಳೆ ಡಾಕ್ಟರ ಕಡೆಗೆ ಹೋಗಿ ಬಾ. ನನಗೆ ಸದಾ ನಿನ್ನ ಯೋಚನೆಯೇ. ಎಷ್ಟೋ

ಸಲ ಮನಸ್ಸುಗೆಟ್ಟು ಹಿಡಿದ ಕೆಲಸ ಕೆಡುವುದುಂಟು. ಅನಂತರ ಎಲ್ಲರ ಮುಂದೆ ಛೀಮಾರಿ ಹಾಕಿಸಿಕೊಳ್ಳುವ ಪಾಡು .... ತಪ್ಪಿದ್ದಲ್ಲ."

ಅವನು ಹೇಳುವುದನ್ನೆಲ್ಲಾ ಹೇಳಿಯೇ ಹೇಳಿದ. ಅದರಲ್ಲಿ ಎಷ್ಟು ಕಿವಿಗೆ ಬಿತ್ತೋ ಬೀಳಲಿಲ್ಲವೋ ಅವಳು ಸುಮ್ಮನೆ ಸಹಜವಾಗಿ 'ಹೂಂ' ಎನ್ನುತ್ತಿದ್ದಳು.

೦ ೦ ೦

ಸಕ್ಕೂ ಅಲ್ಲಲ್ಲಿ ಬಿದ್ದಿದ್ದ ದುಂಡನೆಯ ಸಣ್ಣಸಣ್ಣ ಕಲ್ಲುಗಳನಾಯ್ದು ತಂದು ತಂಗಿಯರ ಮುಂದೆ ರಾಶಿ ಹಾಕಿ "ನೀವು ಇಲ್ಲೇ ಆಟ ಆಡಿದರೆ ಸೈ. ದೂರ ಹೋದರೆ ಕಳ್ಳ ಎತ್ತಿಕೊಂಡು ಹೋಗುತ್ತಾನೆ ಗೊತ್ತಾ ? ಎಲ್ಲಕಡೆ ಕಳ್ಳರ ಕಾಟ ಇದೆ."

ಆ ಕೊನೆಯ ವಾಕ್ಯ....ಎಲ್ಲ ಕಡೆ ಕಳ್ಳರ ಕಾಟ ಇದೆ. ಕಿವಿಯಲ್ಲಿ ಮೊರೆಯುತ್ತಲೂ ಮಿಾನಾ ಅರ್ಥಪೂರ್ಣ ಭಾವದಿಂದ ನೋಡುತ್ತ ಬಾಲಭಾಷೆಯಲ್ಲಿ ನೀನಾ–ಳನ್ನು ಕುರಿತು "ಕೇಳಿದೆಯಾ ಸಕ್ಕು ಹೇಳಿದ ಮಾತು? ಎಲ್ಲಾ ಕಡೆ ಕಳ್ಳರಿದ್ದಾರಂತೆ."

"ಏನು........ಏನು?"

"ನೀನು ಯಾವಾಗಲೂ ದೂರದೂರ ಹೋಗುತ್ತಿ. ಕಳ್ಳ ಬರ್ತಾನಂತೆ. ಹೊರ ಹೋಗಬೇಡ ಆಯಿತಾ?"

"ಎಲ್ಲಿದ್ದಾನೆ ಕಳ್ಳ?"

ಸಕ್ಕು ನಡುವೆ ಬಾಯಿ ಹಾಕಿದಳು "ಕಳ್ಳ ಎಲ್ಲಿರೋಲ್ಲ ? ಎಲ್ಲ ಕಡೆಯೂ ಇರುತ್ತಾನೆ. ದೂರ ಹೋದರೆ ಹಿಡಿದುಕೊಂಡು ಹೋಗುತ್ತಾನೆ"

"ಹೌದಾ .... "

ಆ ಮಕ್ಕಳನ್ನು ನೋಡಿಕೊಳ್ಳುವ ಭಂಗ ಬವಣೆಯನ್ನು ತಾಳಲಾರದೆ ಕಳ್ಳನ ಭಯವನ್ನು ಹುಟ್ಟಿಸುವುದು ನಿತ್ಯಕ್ರಮ ಸಕ್ಕೂಗೆ. ಒಂದು ಮಗು ತಡೆದರೆ ಇನ್ನೊಂದು ಎಲ್ಲೋ ಓಡಿರುತ್ತೆ. ಹಿಡಿದೂ ಹಿಡಿದೂ ಸಾಕಾಗಿ ಬೇಸರ

ಗೊಳ್ಳುತ್ತಾಳೆ. ಈಚೆಗೆ ನೆರೆಮನೆಯ ಸಾವಿತ್ರಿ ಸಕ್ಕೂವನ್ನು ಕುರಿತು "ನಿಮ್ಮ ಮನೆಗೆ ಇನ್ನೊಂದು ಮಗು ಬರುತ್ತೆ! ನಿನಗೊತ್ತಾ?" ಎಂದಳು.

"ಹೌದಾ ?"

"ನೀನೀಗ ಎರಡು ಮಕ್ಕಳನ್ನು ನೋಡಿಕೊಳ್ಳುತ್ತಿ ಅನಂತರ ಮೂರು."

"ಅಯ್ಯೋ, ಸಾಕಾಗಿದೆ ನನಗೆ. ಶಾಲೆ ಶುರುವಾಯಿತೆಂದರೆ ನಾನು ಶಾಲೆಯಲ್ಲಿ. ಮಕ್ಕಳು ಮನೆಯಲ್ಲಿ."

ಸಾವಿತ್ರಿ ನಕ್ಕು ಬಿಟ್ಟಳು. ಎರಡೂ ಕೆನ್ನೆಗಳಲ್ಲಿ ಗುಳಿಗಳು ಮೂಡಿದುವು. ಸಾವಿತ್ರಿಗೂ ಸಕ್ಕೂ-ವಿನ ವಯಸ್ಸೇ. ಮನೆಯಲ್ಲಿ ತಾಯಿ ಹೇಳಿದ ವಿಷಯ ವನ್ನು ಸಕ್ಕೂ-ಕಿವಿಗೆ ಹಾಕಿದ್ದಳು. ಸಕ್ಕೂ ಅವಳ ಕೈಯನ್ನು ಬಿಗಿಯಾಗಿ ಹಿಡಿದುಕೊಂಡು "ನನಗಿಲ್ಲಿ ಬೇಸರವಾಗಿದೆ. ಸ್ವಲ್ಪಹೊತ್ತು ಇಲ್ಲೇ ಇದ್ದು ಬಿಡು" ಎಂದಳು ತುಟಿಗಳಲ್ಲಿ ಎಳೆನಗುವನ್ನು ಸೂಸಿ.

ಸಾವಿತ್ರಿ ಗೆಳತಿಯೊಂದಿಗೆ ಆಟದ ಕೂಟದಲ್ಲಿ ಕೂಡಿದಳು. ಅವರಿಬ್ಬರೂ ಕೈಕೈ ಹಿಡಿದು ಗಿರಿಗಿರಿ ಸುತ್ತುವ ಆಟ ಆಡಿದರೆ ಮಿನಾ - ನೀನಾ ಕೇಕೆ ಹಾಕಿ ನಗುತ್ತಾ ಕೈಚಪ್ಪಾಳೆ ತಟ್ಟಿದರು. ಧಿಮಿಧಿಮಿ ಕುಣಿದಾಡಿದರು. ಮಕ್ಕಳ ಕೂಟ ಆನಂದರಸ ಸೂಸಿತು.

೦ ೦ ೦ ೦

ಮೋಹಿನಿಯ ಶರೀರ ಸ್ಥಿತಿ ದಿನೇದಿನೇ ಕ್ಷೀಣಿಸತೊಡಗಿತು. ಔಷಧೋ ಪಚಾರ ಹಾಗೂ ಪೂಜೆ ಪುರಸ್ಕಾರಗಳನ್ನು ಲೆಕ್ಕಿಸದಾಯ್ತು ರೋಗಬಾಧೆ. ಸಂಪೂರ್ಣ ವಿಶ್ರಾಂತಿ-ಪೌಷ್ಟಿಕ ಆಹಾರಗಳ ಅಗತ್ಯ ಶಕ್ತಿಮಿರಿತು. ಪೋಲೀಸ್ ಇಲಾಖೆ ಔಷಧೋಪಚಾರಕ್ಕೆ ಸಹಾಯಹಸ್ತ ನೀಡುವಷ್ಟು ಉದಾರ. ಆದರೂ ಕೈಗೂಡಿಬಾರದ ಆರೋಗ್ಯದಿಂದ ದುಃಖದುಗುಡಗಳು ಹೃದಯದಲ್ಲಿ ತುಂಬಿ ದಟ್ಟಣಿಸಿದುವು. ಭರಿಸಲಾರದ ಚಿಂತೆ. ತಾಳಲಾರದ ಸಂಕಟ. ಗಂಡುಮಗುವಿಗಾಗಿ ಪಟ್ಟ ಆಸೆ ಕೊರಳಿಗೆ ಉರುಳಾಯಿತೇ ಎಂಬ ಯೋಚನೆ. ಏನೋ ಒಂದು ಬಗೆಯ ಗ್ಲಾನಿ ....ಇನ್ನೇನೋ ಒಂದು ಬಗೆಯ

ನಿರಾಸೆ.... ಮತ್ತೇನೋ ಒಂದು ಬಗೆಯ ತಾತ್ಸಾರ. ಇಡೀ ಶರೀರ ಸಿಡಿದೊಡೆ ಯಲಿರುವ ದಡಾಕಿಯನ್ನು ಮೀರಿದಷ್ಟು ಕಠಿಣಾತಿಕಠಿಣ ಸಿಡಿಭಾವನೆಗಳ ಒಕ್ಕೂಟದಿಂದ.

ಶ್ಯಾಂ ಮಡದಿಯನ್ನು ಆಸ್ಪತ್ರೆಗೆ ಕರೆದೊಯ್ದ. ವೈದ್ಯಕೀಯ ಪರೀಕ್ಷೆಯ ನಂತರ ಅವಳನ್ನು ಆಸ್ಪತ್ರೆಗೆ ಸೇರಿಸುವುದು ಅನಿವಾರ್ಯವಾಯಿತು. ಶ್ಯಾಂ ಮನೆ ಮತ್ತು ಮಕ್ಕಳ ಭಾರ ನಿರ್ವಹಿಸಿದ. ಮೋಹಿನಿ ಮೂವರು ಹೆಣ್ಣು ಮಕ್ಕಳನ್ನು ನೆನೆನೆನೆದು ತನ್ನ ಜೀವಕ್ಕೆ ಗಂಡವೊದಗಿದರೆ ಮಕ್ಕಳ ಗತಿಯೇನು? ಎಂಬ ಚಿಂತೆಯ ವಾರ್ಧಿಯಲಿ ಮುಳುಗಿ ಹೋದಳು. ಒಡಲಾಳದ ದುಃಖ ವೈರೋಮರೋಮವನ್ನೂ ಸುಡುತ್ತದೆ. ಹೊದ್ದಿಕೆಯ ಮರೆಯಲ್ಲಿ ಕಣ್ಣುಗಳು ಮತ್ತೆಮತ್ತೆ ತೊಯ್ಯುತ್ತವೆ. ಶ್ಯಾಂ ಎದುರಿಗೆ ಧೈರ್ಯ ಪ್ರದರ್ಶನ ಮಾಡಿದರೂ ಒಳಗೊಳಗೇ ಚಿಂತೆಯಿಂದ ತಳಮಳಿಸಿದ. ಗಂಡುಮಗುವಿಗಾಗಿ ಆಕರಿಸಿ ಜೀವನವನ್ನೇ ಕಳೆದುಕೊಂಬುವಂಥ ದುರ್ಗತಿ ಪಡೆದುದು ವಿಧಿವತ್ತಾಗಿಯೋ ಅಥವಾ ಜನ್ಮಾಂತರ ಕರ್ಮವೋ ದೇವರಿಗೇ ಗೊತ್ತು.... ಏನಾದರಿರಲಿ, ಒಮ್ಮೆ ಈ ಗಂಡಾಂತರದಿಂದ ಪಾರಾದರೆ ಸಾಕು, ಎಂದು ತನ್ನಲ್ಲೇ ಪ್ರಾರ್ಥಿಸಿಕೊಂಡ ಶ್ಯಾಂ. ವೈದ್ಯಕೀಯ ಖರ್ಚುವೆಚ್ಚಗಳು ಭುಗಿಲೇಳುತ್ತಿವೆ ಪೋಲೀಸ್ ಇಲಾಖೆಯ ಸಹಾಯ ಹಸ್ತವನ್ನು ಮೀರಿ.

ಶ್ಯಾಂ ದುಃಖಾರ್ತನಾಗಿ ಆಸ್ಪತ್ರೆಯಿಂದ ಹೊರಡುತ್ತ ಅಂದ 'ಮೋಹಿನೀ, ಸಧ್ಯ ಮಕ್ಕಳನ್ನು ಸಕ್ಕೂ ನೋಡಿಕೊಳ್ಳುತ್ತಾಳೆ. ನೀನು ವಿಶ್ರಾಂತಿ ತೆಗೆದುಕೋ.'

ಮೋಹಿನಿ ನುಡಿಯಲಾರದೆ ನುಡಿದಳು "ಆಗಲಿ."

ನೆತ್ತರಾರಿದ ಮುಖ ಬೆಳ್ಳನೆ ಬಿಳಿಚಿಕೊಂಡು ಹಳದಿ ಬಣ್ಣಕ್ಕೆ ತಿರುಗುತಿತ್ತು. ಯಾರಿಗಾದರೂ ಮನ ಕರಗುವಂತಹ ಕರುಣಾಜನಕ ದೃಶ್ಯ. ಶ್ಯಾಂ ಭಾರವಾದ ಹೃದಯುವನ್ನು ಹೊರಲಾರದೆ ಹೊತ್ತು ಮೆಟ್ಟಿಲಿನ ಬಳಿ ಆಡುತಿದ್ದ ಅವಳ ಮಕ್ಕಳನ್ನು ಮುದ್ದಿಸಿ ಆಫೀಸಿನ ಹಾದಿ ಹಿಡಿದ.

"ಅಮ್ಮಾ ಸೋಮವಾರದಿಂದ ಶಾಲೆ. ನಾನೇ ವೀನಾ-ಮೀನಾರವ ರನ್ನು ಶಾಲೆಗೆ ಬಿಟ್ಟು ಹೋಗುವೆ. ಮಧ್ಯಾಹ್ನ ಸಾವಿತ್ರಿ ಮನೆಗೆ ಕರೆತರುತ್ತಾಳೆ."

"ಆಗಲಿ, ಸಕ್ಕೂ...."

"ನಿಮ್ಮದು ತುಂಬಾ ಉದಾಸೀನ ಪ್ರವೃತ್ತಿ. ಔಷಧಿ ಕ್ರಮವತ್ತಾಗಿ ತೆಗೆದುಕೊಂಡಿದ್ದಿದ್ದರೆ ಇಷ್ಟರೊಳಗಾಗಿ ಗುಣವಾಗುತಿತ್ತು ಅನಿಸುತ್ತೆ ನನಗೆ."

"ಇನ್ನು ಹಾಗೆ ಮಾಡುವಂತಿಲ್ಲ ಮಗಳೇ. ಔಷಧವನ್ನು ದಾದಿಯರೇ ಕೊಡುತ್ತಾರೆ."

ಸಕ್ಕೂ ಸುಮ್ಮನಾದಳು. ನೀನಾ–ಮೀನಾ ಚೆಂಡಾಟದಲ್ಲಿ ನಿಮಗ್ನ ರಾಗಿದ್ದರು. ಜೊತೆಗೆ ನೆರೆ ಪಾರ್ಶ್ವದ ಒಂದೆರಡು ಮಕ್ಕಳೂ ಕೂಡಿವೆ.

ಸಕ್ಕೂ ಕೇಳಿದಳು "ಅಮ್ಮಾ ನಮ್ಮನೆಗೆ ಇನ್ನೊಂದು ಪಾಪ ಬರುತ್ತಂತೆ, ಹೌದೇ?"

"ಯಾರು ಹೇಳಿದರು ನಿನಗೆ?"

"ಸಾವಿತ್ರಿ ಹೇಳಿದಳು."

"ಮೋಹಿನಿ ಹೇಳಲಾರದೇ ಹೇಳಿದಳು. "ಏನೋ ದೇವರಿಗೇ ಗೊತ್ತು."

ಎದೆಯಾಳದಲ್ಲಿ ಬಿಸುಸುಯ್ಲು ಸದ್ದಿಲ್ಲದೆ ಹರಿದಾಡಿತು.

ಂ ಂ ಂ ಂ

ಮೋಹಿನಿ ಪಲ್ಲಂಕದ ಮೇಲೆ ಬಳಲಿ ತೊಟ್ಟು ಕಳೆದ ಹೂವಿನಂತೆ ಸೊಪ್ಪಾಗಿ ಮಲಗಿದ್ದಾಳೆ. ಅವಳ ಕಣ್ಣೆದುರಿಗೇ ಅನೇಕ ಮಹಿಳೆಯರು ಹೆತ್ತು ಕೈಕೂಸಿನೊಂದಿಗೆ ಸುಖವಾಗಿ ನಗುನಗುತ್ತ ಮನೆಗೆ ಹಿಂದಿರುಗಿದ್ದಾರೆ. ತಾನಲ್ಲಿ ಸೇರ್ಪಡೆಯಾಗಿ ಮೂರು ವಾರಗಳೇ ಸಂದುವು. ದೈಹಿಕ ಸ್ಥಿತಿಯಲ್ಲಿ ಕಿಂಚಿತ್ ಸುಧಾರಿಸಲಿಲ್ಲ. ಡಾಕ್ಟರ ಆದೇಶದಂತೆಯೇ ಪಥ್ಯಪಾನ ನಡೆದರೂ ಪ್ರಗತಿಯ ಲಕ್ಷಣವಿಲ್ಲ.

ಡಾ|| ರಾಗಿಣಿಯು ಅತ್ಯಂತ ಕರುಣೆ–ಆಸ್ಥೆಗಳಿಂದ ಚಿಕಿತ್ಸೆ ನೀಡುತಿದ್ದಾಳೆ. ಶ್ಯಾಂ ಪ್ರೀತಿ–ದಯೆ–ಪರಿತಾಪಗಳಿಂದ ಕರಗುತಿದ್ದಾನೆ. ಅನೇಕ

ದೇವರಿಗೆ ಹರಕೆ ಸಲ್ಲುತ್ತಿದೆ. ಆದರೂ ಬಗೆಹರಿಯದ ಸಮಸ್ಯೆಯಾಗಿದೆ ದೈಹಿಕ ಪರಿಸ್ಥಿತಿ....ಮೋಹಿನಿ ತನ್ನಲ್ಲೇ ಎಲ್ಲವನ್ನೂ ಮೆಲುಕು ಹಾಕುತ್ತ ಚಿಂತಿಸಿದಳು, ಎದೆಯಾಳದಲ್ಲಿ ದುಃಖ ಮಡುಗಟ್ಟಿತು.

ಮೀನಾ–ನೀನಾ ಇದ್ದೆಡೆ ಇರುವವರಲ್ಲ. ಚೆಲ್ಲಾಟ-ಪುಂಡಾಟಗಳಲ್ಲಿ ತೊಡಗಿದ್ದರೆ ಸಾವರಿಸುವುದೇ ಕಷ್ಟ. ಸಕ್ಕೂಗೆ ಶಾಲೆಗೆ ರಜೆ ಇದ್ದುದರಿಂದ ತಂಗಿಯರನ್ನು ಅಲ್ಪಸ್ವಲ್ಪ ಸುಧಾರಿಸುತ್ತಾಳೆ. ಇಬ್ಬರನ್ನು ಸುಧಾರಿಸುವುದು ಆ ಪುಟ್ಟ ಹುಡುಗಿಗೆ ಸಾಕಾಗಿ ಹೋಗಿದೆ.

ಡಾ|| ರಾಗಿಣಿ ಒಳ ಹೆಜ್ಜೆಯಿಟ್ಟವಳೇ ಸಕ್ಕೂ ಭಂಗವನ್ನು ನೋಡಿ ಮನದಲ್ಲೇ ಮರುಗಿ ಕೇಳಿದಳು "ಮಕ್ಕಳನ್ನು ನರ್ಸರಿ ಶಾಲೆಗೆ ಸೇರಿಸಿಲ್ಲವೇ?"

"ಸೇರಿಸಿರುವೆ, ಈಗ ರಜೆಯಾದ್ದರಿಂದ ಹಿಡಿಯುವುದೇ ಕಷ್ಟ."

ಡಾ|| ರಾಗಿಣಿ ಮನದಲ್ಲೇ ಮರುಗಿದಳು. ದಂಪತಿಗಳ ಅನುರಾಗಮಯ ಜೀವನ ಮತ್ತು ಸುಸಂಸ್ಕೃತಿಯ ಮೆರಗು ಹೃದಯವನ್ನು ಆಕರ್ಷಿಸಿತು. ರೂಪ ಲಾವಣ್ಯ ಯಾವುದನ್ನು ತೆಗೆದುಕೊಂಡರೂ ಅತ್ಯುತ್ತಮ ಮಾನವೀಯತೆಗೆ ಪೂರಕ....ಪಾಪ. ಕಷ್ಟಕ್ಕೆ ಸಿಕ್ಕಿದ್ದಾರೆ.

ವಿಷಯವನ್ನು ತನ್ನಲ್ಲೇ ಮೆಲುಕು ಹಾಕಿ ನುಡಿದಳು,

"ಕೇಳಮ್ಮ, ಮೋಹಿನಿ, ಈಗ ನಿನ್ನ ಆರೋಗ್ಯ ಸುಧಾರಿಸಿಕೊಳ್ಳಬೇಕೆಂದರೆ ನೀನು ಪೌಷ್ಟಿಕಾಹಾರವನ್ನು ಸಾಕಷ್ಟು ತೆಗೆದುಕೊಳ್ಳಬೇಕು. ಹೀಗೆಯೇ ಇದ್ದರೆ ಸುಧಾರಿಸುವುದು ಕಷ್ಟವೇ. ಆದ್ದರಿಂದ ನೀನು ಕ್ಷಿಪ್ರದಲ್ಲಿ ಗುಣವಾಗಲು ಪೌಷ್ಟಿಕಾಹಾರ ಸೇವನೆಯಿಂದ ಮಾತ್ರ ಸಾಧ್ಯ. ಇಲ್ಲದಿದ್ದರೆ ಸಾಧ್ಯವೇ ಇಲ್ಲ...." ಎಂದಬಳಿಕ ಸ್ವಲ್ಪ ಹೊತ್ತು ತನ್ನೊಳಗೇ ಪರ್ಯಾಲೋಚಿಸಿ ಮತ್ತೆ ನುಡಿದಳು "ಇದಕ್ಕೆ ಏನಾದರೊಂದು ಪರಿಹಾರ ಹುಡುಕೋಣ."

ಮೋಹಿನಿ ಮಾತಾಡಲಿಲ್ಲ. ಕಣ್ಣುಗಳ ಛಾಯೆಯೇ ಕೂಗಿ ಹೇಳಿತು ಆಂತರಿಕ ಭಾವವನ್ನು.

"ನೀನೇನೂ ಧೈರ್ಯಗೆಡಬೇಡ. ಹೇಗಾದರೂ ಒಂದು ಪರಿಹಾರ ಹುಡುಕೋಣ. ದೇವರು ದೊಡ್ಡವನು. ದೀನರನ್ನು ಪಾರು ಮಾಡುತ್ತಾನೆ."

"ನಾನು ಬೇಡುವುದೂ ಅವನನ್ನೇ...."

o o o o

ಬೆಳಗಿನ ಸರ್ವಾಂಗ ಸುಂದರ ಸಮಯ.

ಹೊತ್ತು ಒಂಭತ್ತರ ಅಂಚನ್ನು ಮುಟ್ಟಿ ಜೀವನ ರಂಗದಲ್ಲಿ ಅತೀವ ಚಟುವಟಿಕೆ ಮೂಡಿದೆ.

ಮೋಹಿನಿಯ ಸ್ಥಿತಿಗತಿ ಏನೇನೂ ಸುಧಾರಿಸಲಿಲ್ಲ. ಮಂಚದ ಬಳಿಯ ಕಿಟಕಿಯಲ್ಲಿ ದೃಷ್ಟಿಯನ್ನಿಟ್ಟು ಸಪ್ಪೆ ಮೋರೆಯಿಂದ ಕುಳಿತಿದ್ದಾಳೆ. ನಯನ ದ್ವಯಗಳಲ್ಲಿ ಸಣ್ಣಗೆ ನೀರಾಡುತ್ತಿದೆ. ಜೀವ ಸೋತು ಸುಣ್ಣವಾಗಿ ಕುಸಿಯುವಂತಿದೆ. ದೇವರು ಕಡೆಹಾಯಿಸುತ್ತಾನೋ ಇಲ್ಲವೋ....ಮೂವರು ಹೆಣ್ಣು ಮಕ್ಕಳ ತಾಯಾಗಿ ತಪ್ಪು ಮಾಡಿರುವೆ....ಎಂದು ತನ್ನಲ್ಲೇ ಮರುಗಿದಳು ಮೋಹಿನಿ. ದುಃಖಸಂಕಟ ಒಡಲಾಳವನ್ನು ಸುಡುತ್ತಿದೆ. ಮುಖದ ಮೇಲೆ ತುಂತುರುತುಂತರಾಗಿ ಸ್ವೇದ ಬಿಂದುಗಳು ಮೂಡಿದುವು.

ಶ್ಯಾಂ ಮಕ್ಕಳೊಡನೆ ಒಳಬಂದ.

"ಇಂದು ಶಾಲೆಗೆ ಹೋಗಲಿಲ್ಲವೇ?" ಕೇಳಿದಳು ಮೋಹಿನಿ.

"ಈ ಹೊತ್ತು ಶಿವರಾತ್ರಿಯಲ್ಲವೇ?"

"ನಾನಿರುವ ಸ್ಥಿತಿಗತಿಯಲ್ಲಿ ಹಬ್ಬಗಳು ನೆನಪಾದರಷ್ಟೆ?" ತುಟಿಗಳಲ್ಲಿ ನೀರಸವಾದ ಶುಷ್ಕ ನಗೆ ಅರಳಿತು, ಜಾಹಿರಾತಿಗೆ ನೀಡುವ ಕೃತಕ ನಗೆಯಂತೆ. ಮಕ್ಕಳು ಸ್ವಲ್ಪ ಹೊತ್ತು ಅಲ್ಲಿದ್ದು ಅನಂತರ ಇತರ ಮಕ್ಕಳನ್ನು ಹುಡುಕಿಕೊಂಡು ಹೊರಟರು, ವರಾಂಡದ ಕಡೆಗೆ.

ಶ್ಯಾಂ ಶಯ್ಯಾಪ್ರಾಂತ್ಯದಲ್ಲಿ ಕುಳಿತು ಮಡದಿಗೆಂದ,

"ನೀನು ಮನದಲ್ಲೇ ಕೊರಗುತ್ತಿ ಎಂದು ತೋರುತ್ತೆ. ನಿತ್ಯ ಉಂಡ ಅನ್ನ, ತೆಗೆದುಕೊಂಡ ಔಷಧಿಗಳು ಮೈ ಹತ್ತುತ್ತಲೇ ಇಲ್ಲ. ನೀನು ಚಿಂತೆ

ಬಿಟ್ಟು ಧೈರ್ಯವಾಗಿರು. ಈ ಸಲಿ ಹೆಣ್ಣೇ ಆಗಲಿ, ಗಂಡೇ ಆಗಲಿ ಅಧ್ಯಾಯ ವನ್ನು ಮುಗಿಸಿಬಿಡೋಣ. ನನ್ನ ಕೆಲಸ ಅಪಾಯಕರ. ಪೋಲೀಸ್ ಎಂದ ಮೇಲೆ ಯಾವ ಗಳಿಗೆಯಲ್ಲಾದರೂ ಜೀವಕ್ಕೆ ಅಥವಾ ಕೈಕಾಲಿಗೆ ಗಂಡಾಂತರ ಒದಗಬಹುದು. ಒಂದುವೇಳೆ ಬದುಕು ಅಲ್ಪಾವಧಿಗೇ ಮುಗಿದು ಹೋದರೆ ಮಗನಿಂದ ಮನೆ ನಡೆಯಬಹುದು ಎಂಬ ನಂಬಿಕೆಯಿಂದ ಮಗನಿಗಾಗಿ ಆಸೆ ಪಟ್ಟದ್ದೇ ಹೊರತು ಇನ್ನೇನಿಲ್ಲ. ದೇವರು ಮಾಡಿಸಿದಂತಾಗುತ್ತೆ. ಅವನ ಮೇಲೆ ಭಾರ ಹಾಕೋಣ."

"ನನಗೀಗ ಅನಿಸುತ್ತೆ, ಇದರೊಂದಿಗೆ ನಾನು ಹೋಗುವವಳೇ ಅಂತ."

"ಛಿಃ! ಅಶುಭ ನುಡಿಯ ಬೇಡ." ಅವಳ ಬಾಯಿ ಮುಚ್ಚಿ ಹಿಡಿದ ಶಾಂ.

"ದಾದಿಗಳಾಗಲೀ, ನರ್ಸ್‌ಗಳಾಗಲೀ ಈ ಬಳಿಯಲ್ಲಿ ಸುಳಿಯುವುದೇ ಇಲ್ಲ. ಕಾಸು-ಕಾಂಚನಗಳ ಮೇಲಿರುವಷ್ಟು ಆಸೆ ಆರೈಕೆಯ ಮೇಲಿದ್ದಿದ್ದರೆ ಆಸ್ಪತ್ರೆ ಸ್ವರ್ಗಮಯವಾಗುತಿತ್ತು. ಎಲ್ಲರೂ ಎಲ್ಲೆಲ್ಲೋ ಹರಟೆ ಹೊಡೆಯು ತ್ತಿರುತ್ತಾರೆ. ನೀವು ಹೊರಬಿದ್ದರೆ ಕೇಳುವವರೇ ಇರುವುದಿಲ್ಲ. ಡಾಕ್ಟರು ಬಂದಾಗ ಅವರ ಹಿಂದೆ ಬರುತ್ತಾರೆ ಅಷ್ಟೆ."

ಶ್ಯಾಂ ಪರಿಸ್ಥಿತಿಯನ್ನು ಅವಲೋಕಿಸಿದ. ಜಗತ್ತೇ ಹಾಗೆ. ಸರ್ವೇ ಗುಣಾಃ ಕಾಂಚನಮಾಶ್ರಯಂತೀ. ಏನು ಮಾಡೋಣ? ಈ ಜನ ಸುಧಾರಿಸ ಬೇಕಾದರೆ ನೂರಾರು ಮಹಾತ್ಮರುಗಳು ಹುಟ್ಟಿ ಬರಬೇಕು....ಆದರೂ ಆಗುತ್ತೋ ಇಲ್ಲವೋ ಅದೂ ಅನುಮಾನ.

ಆಲೋಚನೆಯಾಳಕ್ಕೆ ಮುಳುಗಿದಾಗಲೇ ಕಪ್ಪನೆಯ ಬೆಂಜ್ ಕಾರೊಂದು ಸರ್ರನೆ ಬಂದು ಮೆಟ್ಟಿಲಿನ ಬಳಿ ನಿಂತಿತು. ಅದರಿಂದ ಶ್ವೇತವಸನ ಧಾರಿಣಿಯಾದ ಪ್ರೌಢ ಸ್ತ್ರೀಯೊಬ್ಬಳು ಇಳಿದಳು. ಹಿಂದೆಯೇ ಡ್ಯೂಟಿಯಲ್ಲಿ ಲ್ಲದ ಡಾ|| ರಾಗಿಣಿಯೂ ಇಳಿದಳು. ಇಬ್ಬರೂ ನೇರವಾಗಿ ಮಂಚದ ಬಳಿಗೆ ಬಂದರು. "ಇವರೇ...." ಎಂದು ಡಾಕ್ಟರ್ ಆ ಪ್ರೌಢ ಸ್ತ್ರೀಗೆ ತೋರಿಸಿದಾಗ ದಂಪತಿಗಳಿಗೆ ಆಶ್ಚರ್ಯವಾಯಿತು.

ಡಾ|| ರಾಗಿಣಿಯು ಶ್ರೀಮಂತಿನಿಯನ್ನು ಪರಿಚಯಿಸುತ್ತ ವಿವರಣೆ ನೀಡಿದಳು "ಇವರು ಕಲಿಕತ್ತೆಯ ಉದ್ದಿಮೆದಾರರು, ದುರದೃಷ್ಟವಶಾತ್

ಮಕ್ಕಳಿಲ್ಲ. ನೀವು ತುಂಬಾ ಕಷ್ಟದಲ್ಲಿದ್ದೀರಿ. ನಿಮಗೆ ಹುಟ್ಟುವ ಮಗು ವನ್ನು ನೀವು ಸಂತೋಷದಿಂದ ನೀಡಬಲ್ಲಿರಾದರೆ ಇವರು ಸಾಕಿ ಸಲಹಿ ಓದಿಸಿ ಹೊಟ್ಟೆಯ ಮಗುವನ್ನಾಗಿ ಮಾಡಿಕೊಳ್ಳಬಲ್ಲರು. ಅಲ್ಲದೆ ಈಗಿನಿಂದ ಮೋಹಿ ನಿಯ ಪೌಷ್ಟಿಕಾಹಾರ ಮತ್ತು ಎಲ್ಲ ಖರ್ಚನ್ನೂ ತಾನೇ ನಿರ್ವಹಿಸಬಲ್ಲರು. ಇವರು ವರ್ಷದಲ್ಲಿ ಬಹುಭಾಗ ಇಲ್ಲಿಯೇ ಇರುತ್ತಾರೆ, ಅಲ್ಲಿಗೂ ಇಲ್ಲಿಗೂ ಓಡಾಡುತ್ತಿರುತ್ತಾರೆ. ನೀವು ನಿಮ್ಮ ಮಗುವನ್ನು ನೋಡಲು ಕಲಿಕತ್ತೆಗೆ ಹೋಗಬೇಕಾಗಿಲ್ಲ....."

ಶ್ಯಾಂ ಮಡದಿಯ ಮುಖ ನೋಡಿದ, ತುಟಿಗಳು ಬಿರಿಯಲಿಲ್ಲ.

ಮೋಹಿನಿ ವಿಷಯವನ್ನು ಸ್ವಾಗತಿಸಿದರೂ ಬಾಯಿ ಬಿಡುವ ಮುನ್ನ ಆಲೋಚನೆಯ ಖಡ್ಗದ ಮೇಲೆ ಹರಿದಾಡಿತು ಮನಸ್ಸು.

"ಏನು ಹೇಳುತ್ತಿ ಮೋಹಿನೀ?" ಶ್ಯಾಂ ಕೇಳಿದ.

ಆಗ ಡಾಕ್ಟರ್ ಹೇಳಿದಳು "ಗರ್ಭಿಣಿಯ ದೇಹಸ್ಥಿತಿ ತೀರಾ ಕ್ಷೀಣಿಸಿರು ವುದರಿಂದ ಈಗಿನಿಂದಲೇ ಅತ್ಯುತ್ತಮ ಪೋಷಣೆ ನೀಡಬೇಕು, ಇಲ್ಲದಿದ್ದರೆ ತಾಯಿ ಮಗುವಿನ ಜೀವಕ್ಕೆ ಅಪಾಯವಿದೆ, ನೀವು ಒಪ್ಪಿಕೊಂಡರೆ ಸಂತೋಷ."

ಶ್ಯಾಂ 'ಆಗಬಹುದು' ಎಂದ, ಮನಸ್ಸು ಡೋಲಾಯಮಾನವಾಗಿ ದ್ದರೂ ಚಿತ್ತ ದೃಢವಾಗಿತ್ತು, ಮೋಹಿನಿಯ ಮೌನವೇ ಸಮ್ಮತಿ ಸೂಚಿಸಿತು, ಶ್ರೀಮಂತಿನಿಯ ಮುಖ ಪ್ರಸನ್ನವಾಯಿತು. ಮೋಹಿನಿಯ ಬೆನ್ನನ್ನು ನಲ್ಮೆಯಿಂದ ನೇವರಿಸಿ "ದೇವರು ಒಳ್ಳೆಯದನ್ನು ಮಾಡುತ್ತಾನೆ ಚಿಂತಿಸ ಬಾರದು" ಎಂದಳು, ಹಾಲ್ಸಕ್ಕರೆ ಪಸರುವ ದನಿಯಲ್ಲಿ.

ೊ ೊ ೊ ೊ

ಮೋಹಿನಿ ಸಂಕಟಪೂರ್ಣ ದನಿಯಲ್ಲಿ ನುಡಿದಳು "ನೀವು ಕೆಲವು ದಿನ ರಜೆ ತೆಗೆದುಕೊಂಡಿದ್ದರೆ ಒಳ್ಳೆಯದಿತ್ತು, ಒಂದು ಗಳಿಗೆ ಕುಳಿತುಕೊಳ್ಳಲೂ ತ್ರಾಣವಿಲ್ಲದ ನಾನು ಈ ಮಕ್ಕಳನ್ನು ಹೇಗೆ ಸುಧಾರಿಸಲಿ? ಸ್ವಲ್ಪ ಹೊತ್ತೂ ಇದ್ದೆಡೆ ಇರುವುದಿಲ್ಲ, ಅಳು ಗೋಳು ಇದ್ದದ್ದೇ, ಎಲ್ಲಾದರೂ ಹೋಗಿ

ಅಪಾಯ ತಂದುಕೊಂಡರೇನು ಗತಿ? ಸಕ್ಕೂ ಸಹ ಹಿಡಿದು ಸಾಕಾಗಿದ್ದಾಳೆ ಪಾಪ."

ಅದೇ ವೇಳೆಗೆ ಕಪ್ಪು ಬೆಂಜ್ ಕಾರು ಬಂದು ಬಾಗಿಲ ಬಳಿ ನಿಂತಿತು.

ಅದರಿಂದ ಶ್ರೀಮಂತಿನಿ ಇಳಿದಳು. ಡಾಕ್ಟರ ಪಟ್ಟಿಯ ಪ್ರಕಾರ ಎಲ್ಲಾ ಬಗೆಯ ಪೌಷ್ಟಿಕಮಯ ಪಾನೀಯ ಮತ್ತು ಆಹಾರ ಔಷಧಗಳನ್ನು ಒಂದು ಬುಟ್ಟಿಯಲ್ಲಿಯೂ ಹಣ್ಣು ಹಂಪಲುಗಳನ್ನು ಇನ್ನೊಂದು ಬುಟ್ಟಿಯಲ್ಲಿಯೂ ತುಂಬಿಕೊಂಡು ತಂದು ವಾರ್ಡಿನಲ್ಲಿಟ್ಟು ತಾನೇ ಅವನ್ನು ಅನುಕ್ರಮವಾಗಿ ತೆಗೆದುಕೊಳ್ಳುವುದನ್ನು ವಿವರವಾಗಿ ತಿಳಿಸಿದಳು. ಶ್ಯಾಂ ಕೃತಜ್ಞತೆಯಿಂದ ಅಭಿನಂದಿಸಿ ಆಡಲು ಹೊರಹೋಗಿದ್ದ ನೀನಾ-ಮೀನಾ-ರನ್ನು ಕರೆತಂದ. ನೋಡಿದ ಪ್ರಥಮ ನೋಟಕ್ಕೇ ಮಾರುಹೋಗುವಂತಹ ಮುದ್ದುಮುದ್ದಾದ ಮಕ್ಕಳು. ದುಂಬಿ ಕಣ್ಣುಗಳ ಅನುಪಮ ಶೋಭೆಯಂತೂ ಬಲು ಆಕರ್ಷಣೀಯ.

ಶ್ರೀಮಂತಿನಿ ಇಬ್ಬರನ್ನೂ ಬಳಿಗೆ ಬರಮಾಡಿಕೊಂಡು ಮುದ್ದುಮಾಡಿ ಹಣ್ಣುಗಳನ್ನು ಸುಲಿದು ಕೊಟ್ಟು ತಿನ್ನಿಸಿದಳು. ಸೇಬು ಹಣ್ಣುಗಳನ್ನು ಸಿಪ್ಪೆ ಹೆರೆದುಕೊಟ್ಟು ಮುದ್ದಾಡಿ ಹೇಳಿದಳು "ನನ್ನ ಜೊತೆ ಬಂದರೆ ನಿಮಗೆ ಚಾಕಲೇಲ್-ಪೆಪ್ಪರ್‌ಮೆಂಟ್ ಎಲ್ಲಾ ಕೊಡಿಸುವೆ."

ಅವಳು ಅಷ್ಟೆಂದುದೇ ತಡ ನೀನಾ-ಮೀನಾ ಅವಳೊಂದಿಗೆ ಹೊರಡಲು ತಯಾರು. ಸ್ವಲ್ಪವೂ ಸಂಕೋಚವಿಲ್ಲದ ಮಕ್ಕಳು. ನಿಗಿನಿಗಿ ನಲಿಯುತಿದ್ದರೆ ಮತ್ತೂ ಮೋಹಕ-ರಾಮಣೀಯಕ ಎಲ್ಲಾ.

"ಮೋಹಿನೀ, ನೀನೇನೂ ಚಿಂತೆ ಮಾಡಬೇಡ. ಇವರಿಗೆ ಚಾಕಲೆಟ್ ಕೊಡಿಸಿ ಕರೆತರುವೆ." ಎಂದವಳೇ ಕಾರಿನಲ್ಲಿ ಕೂಡಿಸಿಕೊಂಡುಹೊರಟೇ ಹೋದಳು ಶ್ರೀಮಂತಿನಿ. ಸ್ವಲ್ಪ ಹೊತ್ತಿನ ನಂತರ ಕಾರು ಬಂದು ಮೆಟ್ಟಿಲಿನ ಬಳಿ ನಿಂತಿತು. ಅಲ್ಲಿಯವರೆವಿಗೂ ಕುತೂಹಲಕ್ಕೊಳಗಾಗಿದ್ದ ತಂದೆ ತಾಯಿಯರ ಕಣ್ಣು ಆಶ್ಚರ್ಯದಿಂದ ಕುಕ್ಕುವಂತೆ ಮಕ್ಕಳು ಕಾರಿನಿಂದ

ಇಳಿದರು. ಸ್ನಾನಮಾಡಿ ಹೊಸಬಟ್ಟೆ ತೊಟ್ಟು ಕೈತುಂಬ ಚಾಕಲೆಟ್ ಬಿಸ್ಕತ್ತುಗಳ ಪೊಟ್ಟಣಗಳನ್ನು ಹಿಡಿದುಕೊಂಡು ನಗೆಯ ಹೊನಲನ್ನು ಹರಿಸುತ್ತ ಬಂದ ಮಕ್ಕಳಲ್ಲಿ ಸ್ವರ್ಗವೇ ಧರೆಗಿಳಿದಷ್ಟು ಸಂತಸ ಉಕ್ಕುತ್ತಿದೆ.

"ಅಮ್ಮಾ! ಇಷ್ಟೆಲ್ಲಾ ಏಕೆ ತೊಂದರೆ ತೆಗೆದುಕೊಂಡಿರಿ?" ಎಂದು ಅತೀ ದೈನ್ಯಭಾವದಿಂದ ನುಡಿದಳು ಮೋಹಿನೀ. ಶ್ಯಾಂ ಸಹ ಹಾಗೇ ಅಂದ. ಆದರೆ ಅದಕ್ಕೆಲ್ಲಾ ಮನಗೊಡುವವಳೇ ಅಲ್ಲ ಅವಳು. ಒಡಲ ಆನಂದರಸ ಮುಖಬಿಂಬದಲ್ಲಿ ಚೆಲ್ಲಿ ಸೂಸಿತು.

ಹಗಲಿರುಳೂ ಪಕ್ಕದಲ್ಲಿದ್ದು ಮೋಹಿನಿಯನ್ನು ಚೆನ್ನಾಗಿ ನೋಡಿಕೊಳ್ಳು ವಂತಹ ಒಳ್ಳೆ ಮನಸ್ಸಿನ ನಿವೃತ್ತ ದಾದಿಯನ್ನು ನೇಮಿಸಿರಿ. ನಾನವಳಿಗೆ ಸಂಬಳ ಕೊಡುವೆ. ನೀವೇನೂ ಸಂಕೋಚ ಪಡಬೇಡಿರಿ" ಎಂದಳು ಶ್ರೀಮಂತಿನಿ, ಪ್ರಸನ್ನ ಮುಖದಿಂದ.

ಅವಳ ಉದಾರತೆಗೆ ಎಣೆಯೇ ಇಲ್ಲದುದನ್ನು ಕಂಡು ದಂಪತಿಗಳು ಮಾರುಹೋದರು. ಡಾ|| ರಾಗಿಣಿಯು ಅಲ್ಲಿಗೆ ಬಂದು ನೀನು ಏನು ಹೇಳುತ್ತಿ ಮೋಹಿನೀ ? ಮನದಲ್ಲಿ ಏನೂ ಸಂಕೋಚವಿಲ್ಲವಷ್ಟೇ ?" ಎಂದಳು.

"ಇಲ್ಲಮ್ಮಾ ತುಂಬಾ ಉಪಕಾರವಾಯಿತು," ಎಂದು ಕೈಗಳನ್ನು ಜೋಡಿಸಿದಳು ಮೋಹಿನಿ.

ಡಾ||ರಾಗಿಣಿ ಮಕ್ಕಳ ಕೆನ್ನೆಯನ್ನು ಮುದ್ದಿಸಿ "ಎಷ್ಟು ಸುಂದರವಾದ ಮಕ್ಕಳು !" ಎಂದಳು.

"ನಾನು ಆಗಾಗ ಬರುತ್ತಿರುವೆ. ಇಂದೇ ದಾದಿಯನ್ನು ನೇಮಿಸಿರಿ. ಏನು ಬೇಕಿದ್ದರೂ ಡಾಕ್ಟರು ಹೇಳುವ ಪ್ರಕಾರ ಎಲ್ಲಾ ಔಷಧಿ ವಗೈರೆಗಳನ್ನು ನಾನು ತಂದು ಕೊಡುವೆ."

ಶ್ರೀಮಂತಿನಿ ಮೋಹಿನಿಯ ತಲೆಯನ್ನು ನಲ್ಮೆಯಿಂದ ನೇವರಿಸಿ "ಚಿಂತಿಸಬೇಡ,, ತಂಗೀ ! ದೇವರು ಮಂಗಳವನ್ನುಂಟುಮಾಡುತ್ತಾನೆ.

ಮನದಲ್ಲಿ ಯಾವ ಕಳವಳವನ್ನೂ ಇಟ್ಟುಕೊಳ್ಳದೆ ಮುಂದಿನ ಸುದಿನಗಳನ್ನು ಶ್ರದ್ಧೆಯಿಂದ ಎದುರು ನೋಡು, ತಿಳಿಯಿತೇ ? ಸದಾ ನೀನು ಸಂತೋಷವಾಗಿ ರಬೇಕು. ಆತ್ಮ ಸಂತೋಷ ಆರೋಗ್ಯಕ್ಕೆ ಪೂರಕ."

"ನೀವೇ ನನ್ನ ಭಾಗದ ಭಾಗ್ಯದೇವತೆ ಎಂದರೆ ತಪ್ಪಾಗದು."

"ಅದ್ಹೇಗಾಗುತ್ತೆ? ಭಾಗ್ಯ ದೇವತೆ ದೇವರು ಮಾತ್ರ."

ಶ್ರೀಮಂತಿನಿ ಹೊರಟಳು. ಸಂತಸವಾರ್ಧಿಯ ಅಲೆಯೊಂದು ನುಗ್ಗಿ ಬಂದು ಹಿಂಜರಿದಂತಾಯಿತು. ನೀನಾ-ಮೀನಾ ಆಶಾ ದೃಷ್ಟಿಯನ್ನು ಅತ್ತಲೇ ನೆಟ್ಟರು.

o o o o

ಶ್ರೀಮಂತಿನಿ ಮತ್ತೆಮತ್ತೆ ಮೇಲಿಂದ ಮೇಲೆ ಬರುತ್ತಲೇ ಇರುತ್ತಾಳೆ. ಅವಳು ಬಂದಾಗಲೆಲ್ಲ ನೀನಾ-ಮೀನಾ ಅಂಟಿಕೊಳ್ಳುತ್ತಾರೆ. ಮಕ್ಕಳನ್ನು ಕರೆದೊಯ್ದು ಬೇಕು ಬೇಕಾದುದನ್ನು ಕೊಡಿಸಿ ಕರೆತಂದರೆ ಅವಳ ನಿರಿಯನ್ನು ಬಿಡಲೇ ಒಲ್ಲವು. ಶ್ರೀಮಂತಿನಿ ವಿಧಿಯಿಲ್ಲದೆ ಇಬ್ಬರನ್ನೂ ಮನೆಗೆ ಕರೆದೊಯ್ಯುತ್ತಾಳೆ. ದೊಡ್ಡಮನೆ, ದೊಡ್ಡ ಅಂಗಳ, ಕೈ ತುಂಬಾ ಆಟಿಕೆ. ಹಾಗೂ ತಿಂಡಿ ತಿನಿಸುಗಳಿದ್ದರೆ ಯಾರಿಗೆ ಬೇಡ? ನೀನಾ-ಮೀನಾ ಅವಳಲ್ಲಿ ತಾಯಿಗಿಂತ ಹೆಚ್ಚಿನ ಪ್ರೇಮಾದರವನ್ನು ಕಂಡುಕೊಂಡರು. ಆಸ್ಪತ್ರೆಗೆ ಕರೆತಂದರೆ ಎಲ್ಲಿ ಬಿಟ್ಟುಹೋಗುವಳೋ ಎಂದು ಮೊದಲೇ ಕಾರು ಹತ್ತಿ ಕಾಯುತ್ತಾರೆ. ತಂದೆ ತಾಯಿಯರಿಗೆ ಸಂಕೋಚವೆನಿಸಿದರೂ ಮಕ್ಕಳು ಅಷ್ಟೇ ನಿರಾಳ. ಆ ತಾಯಿಗೂ ಬಿಟ್ಟಿರಲಾಗದಷ್ಟು ಅನುಕಂಪ, ಅನುಪಮ ಪ್ರೀತಿ, ಆತ್ಮಾದರ.

ಕೊನೆಗೊಮ್ಮೆ ಶ್ರೀಮಂತಿನಿ ಮೋಹಿನಿಯನ್ನು ಕುರಿತು ನುಡಿದಳು "ಮೋಹಿನೀ, ನಿನ್ನ ಮಕ್ಕಳು ನನಗೆ ತೀರಾ ಹೊಂದಿಕೊಂಡಿವೆ. ಇರಲಿ, ನಿನಗೀಗ ಮಕ್ಕಳನ್ನು ನೋಡಿಕೊಳ್ಳುವುದೂ ಕಷ್ಟವೇ. ಸಧ್ಯಕ್ಕೆ ನಮ್ಮಲ್ಲೇ ಇರಲಿ. ಪಕ್ಕದಲ್ಲೇ ನರ್ಸರಿ ಸ್ಕೂಲಿದೆ. ಅಲ್ಲಿಗೆ ಕಳುಹಿಸುವೆ. ಇಬ್ಬರು ದಾದಿಯರಿದ್ದಾರೆ, ನೋಡಿಕೊಳ್ಳುತ್ತಾರೆ. ನಾನಿಲ್ಲಿಗೆ ಬರುವಾಗ ಕರೆತರುವೆ. ನೀನು ಚಿಂತೆ ಬಿಟ್ಟು ಹಾಯಾಗಿರು. ಆಯಿತೇ ?"

ಆಯಿತೇ? ಕೊನೆಯ ವಾಕ್ಯ ಹಾಲ್ಸಕ್ಕರೆಯ ಸವಿಯನ್ನು ಸ್ಫುರಿಸಿತು, ನೆಟ್ಟ ನಿಟ್ಟಾಲಿಗಳು ಅವಳನ್ನೆ ಕಾತರದಿಂದ ನಿಟ್ಟಿಸಿದುವು. ಹೃದಯ ಬನದ ಕೋಗಿಲೆ ರಾಗಭಾವದಿಂದ ಪ್ರತ್ಯುತ್ತರವನ್ನು ನಿರೀಕ್ಷಿಸಿತು.

ದಂಪತಿಗಳಿಗೆ ಕೊಡುವುದಂತೂ ಹೇಗೂ ಇದ್ದಷ್ಟೇ. ಈ ಮಕ್ಕಳೂ ಅವಳಿಗಂಟಿಕೊಂಡು ತೊಂದರೆ ಕೊಡುತ್ತಾರಲ್ಲವೇ ಎಂಬ ಸಂಕಟದಿಂದ ಕೊರಗಿದರು. ಆದರೇನು? ಮಕ್ಕಳು ದಾರಿಗೆ ಬರಲೊಲ್ಲವು. ನಿಗಿನಿಗಿ ನಲಿಯುತ್ತಲೇ ಕಾರು ಹತ್ತಿ ಹೋಗಿ ಬಿಡುತ್ತವೆ.

ಟಾಟಾ! ಎನ್ನುವುದರಲ್ಲೇ ಅವರಿಗೆ ಸಂತೃಪ್ತಿ. ಶ್ರೀಮಂತಿನಿ ಸಕ್ಕುವಿಗೂ ಬೇಕು ಬೇಕಾದುದನ್ನೆಲ್ಲಾ ತಂದುಕೊಡುತ್ತಾಳೆ.

ದಿನದಿನಕ್ಕೂ ಪೌಷ್ಟಿಕಾಹಾರದಿಂದ ಮೋಹಿನಿ ಮೈದುಂಬಿದಳು. ನರನಾಡಿಗಳಲ್ಲಿ ಬಿಸಿನೆತ್ತರು ಹರಿದಾಡಿತು. ಮುಖಬಿಂಬದಲ್ಲಿ ಜೀವಕಳೆ ಬೆಳಗಿ ನವಮಾಸ ತುಂಬಿದುವು. ಶ್ರೀಮಂತಿನಿಯ ಸಹವಾಸದಲ್ಲಿ ನೀನಾ-ಮೀನಾ ಹಾರುವ ಗುಬ್ಬಿಮರಿಗಳಾದರು.

ಮೋಹಿನಿ ಜನ್ಮ ನೀಡಿದುದು ಗಂಡುಮಗುವಿಗೆ. ತಾಯಿಯ ರೂಪವನ್ನೆ ಹೊತ್ತ ಮಗು ತಾಯಿಯಂತೆಯೇ ಸುಸುಂದರವಾಗಿ ಪುಷ್ಟಿಕರವಾಗಿ ಇದ್ದುದರಿಂದ ಶ್ರೀಮಂತಿನಿಗೆ ಸಂತೋಷವೇ ಸಂತೋಷ. ಮಗುವನ್ನೆತ್ತಿ ಮುದ್ದಾಡುತ್ತ ಮೋಹಿನಿಗೆಂದಳು ಶ್ರೀಮಂತಿನಿ "ಮೋಹಿನಿ, ನಾನು ಬಯಸಿದ್ದು ಒಂದು ಮಗು. ಭಗವಂತ ಮೂರು ಮಕ್ಕಳನ್ನು ಅನುಗ್ರಹಿಸಿದ್ದಾನೆ. ನೀನು ಯಾವಾಗಬೇಕಾದರೂ ಮನೆಗೆ ಬರಬಹುದು. ಸದಾ ತೆರೆದ ಬಾಗಿಲು ನಿಮಗೆ ಸ್ವಾಗತ ನೀಡುತ್ತದೆ. ನಿಮ್ಮ ಮಕ್ಕಳಿಗೆ ಏನೆಲ್ಲ ಸೌಕರ್ಯ ಬೇಕೋ ಅದನ್ನೆಲ್ಲಾ ಒದಗಿಸುವೆ. ಭಗವಂತ ನನಗೆ ಸಾಕಷ್ಟು ಐಶ್ವರ್ಯ ನೀಡಿದ್ದಾನೆ. ಅದರ ಸದ್ವಿನಿಯೋಗ ಆಯಿತು ಅಷ್ಟೆ. ಭಗವಂತನಿಗೆ ನಾನೆಷ್ಟು ಋಣಿಯಾಗಿದ್ದರೂ ಸಾಲದು. ನಿಮಗೆ ಸಕ್ಕೂ ಒಬ್ಬಳೇ ಮಗಳು ಸಾಕು. ಮುದ್ದಾಗಿ ನೋಡಿಕೊ. ದೇವರ ಅನುಗ್ರಹ ನಿನ್ನ ಮೇಲಿರಲಿ."

ಧ್ವನಿ ಎದೆಯಾಳದಿಂದ ಹರಿದು ಬಂತು.

ಶ್ಯಾಂ ದಂಪತಿಗಳ ಮುಖಬಿಂಬದಲ್ಲಿ ಆನಂದಪ್ರಸನ್ನತೆ ಬೆಳಗಿತು.

— o —

# ಅಣು ವಿಕಿರಣ

೪

ನಾಸತೋ ವಿದ್ಯತೇ ಭಾವೋ
ನಾಭಾವೋ ವಿದ್ಯತೇ ಸತಃ ।

ಮಧ್ಯರಾತ್ರಿ ಕಳೆಯಿತು. ಬ್ರಾಹ್ಮೀ ಮುಹೂರ್ತ ಅಡರುತ್ತಿದೆ.

ಆದರೇನು? ನಿದ್ದೆಯ ಸುಳಿವೇ ಇಲ್ಲ. ತಾಳಲಾಗದ ಸೆಕೆ. ನೀರಿನ ಹೂಜಿ ಖಾಲಿಯಾದರೂ ಒಡಲ ದಾಹ ಹಿಂಗದು ಒಳಕೊಠಡಿಗೆ ಹೋಗಿ ಹೂಜಿಯನ್ನು ಸದ್ದಿಲ್ಲದಂತೆ ತಂದ ಡಾ|| ಶೈನಿ. ಮಲಗಿ ನಿದ್ರಿಸಿದ ಮಡದಿಗೆ ಎಚ್ಚರವಾಗದಿರಲೆಂದು ತಾನೆ ಕಾರ್ಯಭಾರ ನಿರ್ವಹಿಸಿ ಪಕ್ಕದ ಪ್ರಯೋಗ ಶಾಲೆಗೆ ಹೋದ. ತಲೆಯಲ್ಲಿ ಹಲವಾರು ಮಹದ್ಭಾವನೆಗಳನ್ನು ತುಂಬಿಕೊಂಡು ಅಲ್ಲಿಂದಲ್ಲೇ ಪದಚಾರಣೆ ಮಾಡಿದ. ಹೊತ್ತು ಉರುಳುತ್ತಲೇ ಇತ್ತು ಗಡಿ ಯಾರದ ಟಿಕ್ ಟಾಕ್ ಸದ್ದಿನೊಂದಿಗೆ ಸ್ಪರ್ಧೆ ಹೂಡಿದಂತೆ.

ಇಂದು, ಭಾರತ ರಾಷ್ಟ್ರಕ್ಕೆ ಅಣುಸ್ಥಾವರ ಬೇಕೆ? ಎಂಬ ಪ್ರಶ್ನೆಯು ಭೂತಾಕಾರವಾಗಿ ನಿಮಿರಿ ನಿಂತಿತ್ತು ಚಿತ್ತಭಿತ್ತಿಯಲ್ಲಿ.

ಅಣುಸ್ಥಾವರ ಅಗ್ಗ ಹಾಗೂ ಅನುಕೂಲಕರ ; ವಿದ್ಯುತ್ ಕೊರತೆ ಯನ್ನು ಅದರಿಂದ ನೀಗಬಹುದು. ಅದರ ಉತ್ಪಾದನೆ ಖಂಡಿತ ಅನಿವಾರ್ಯ.... ಎಂಬುದು ಕೆಲವು ವಿಜ್ಞಾನಿಗಳ ಖಂಡತುಂಡ ವಾದ.

ಆದರೆ....

ಇಂದೂ, ಈಗಲೂ ಅಪಘಾತಗಳು ಸಂಭವಿಸದಂತಹ ಸುರಕ್ಷಿತ ಅಣು ಸ್ಥಾವರಗಳನ್ನು ನಿರ್ಮಿಸುವುದು ಸಾಧ್ಯವಾಗಿಲ್ಲ. ಅಣುಸ್ಥಾವರಗಳು ಆಧು

ನಿಕ ಭಸ್ಮಾಸುರನಂತೆ. ಎಲ್ಲಿ, ಯಾವಾಗ, ಯಾವೆಡೆಗಳಲ್ಲಿ ಸಾವುನೋವು ಗಳನ್ನುಂಟುಮಾಡುತ್ತದೆಯೋ, ಹೇಳುವುದು ಕಷ್ಟ. ಅಂದಮೇಲೆ, ನಾವು ದುರ್ದೆಸೆಯನ್ನು ಎದುರಿಸಲು ಸದಾ ಸಿದ್ಧರಿರಲೇಬೇಕು. ಅದು ಖಂಡಿತ. ಪರಿಸ್ಥಿತಿ ಹೀಗಿರುವಾಗ ನಮಗೆ ಅಣುಸ್ಥಾವರ ಬೇಕೆ? ಎಂಬುದು ನಮ್ಮ ಮುಂದಿರುವ ಉದ್ದಂಡ ಪ್ರಶ್ನೆ.

ಡಾ|| ಶೈನಿ ವಿಷಯವನ್ನು ಮನದಲ್ಲೇ ಮೆಲುಕು ಹಾಕಿದ. ಯೋಚಿಸಿದಷ್ಟೂ ಮನಸ್ಸು ಬಗ್ಗಡವಾಯಿತು.

**Man is born to conqur nature, not to follow it.**

ಡಾ|| ಶೈನಿ ಪ್ರಯೋಗ ಶಾಲೆಯಲ್ಲಿ ಕಾರ್ಯಮಗ್ನನಾಗಿದ್ದಾಗ ಬಾಗಿಲ ಬಳಿ ಪಾದಸಪ್ಪಳ ಕೇಳಿಬಂತು. ಹಿಂದೆಯೇ ಬಾಗಿಲು ಮಿಡಿದ ಸಣ್ಣ ಸದ್ದು. ಕಟ, ಕಟ, ಕಟ, ಕಟ.

**'Yes please.'**

ಬಂದವನು ಡಾ|| ವ್ಯಾಸ್. ಪ್ರಸನ್ನ ಮುಖದಲ್ಲಿ ಮುಗುಳುನಗೆ ಹರಿಸಿದ.

"ನಿನ್ನನ್ನು ನೋಡದೆ ಬಹಳ ದಿನಗಳಾಗಿದ್ದುವು ವ್ಯಾಸ್. ಈಚೆಗೆ ಕಾಣಿಸಲೇ ಇಲ್ಲವಲ್ಲಾ, ಬಾ, ಕುಳಿತುಕೊ."

ಇಬ್ಬರೂ ಅಕ್ಕಪಕ್ಕದಲ್ಲಿ ಸೋಫದ ಮೇಲೆ ಕುಳಿತುಕೊಂಡರು.

"ಏನಪ್ಪಾ, ವಿಶೇಷ? ವ್ಯಾಸ್ ಮಹಾಶಯಾ!"

"ನೀನೇ ಹೇಳಬೇಕು, ಶೈನಿ. ನೀನು ಏನು ಹೇಳಿದರೂ ಕೇಳುವೆ."

"ಭಾರತದಲ್ಲಿ ಅಣುಸ್ಥಾವರವಿರಬೇಕೆ? ಎಂಬ ಪ್ರಶ್ನೆಯೆದ್ದಾಗ ಬೇಕು ಎನ್ನುವವರೂ ಇದ್ದಾರೆ, ಬೇಡ ಎನ್ನುವವರೂ ಇದ್ದಾರೆ. ಯೋಚಿಸಿ ನೋಡಿದರೆ ಅಣುಸ್ಥಾವರದಿಂದ ಸುಖ–ದುಃಖಗಳೆರಡೂ ಇರುವುದು ಸತ್ಯ. ನೀನು ಏನು ಹೇಳುವೆ, ಬೇಕೆ? ಬೇಡವೆ?"

"ನಮ್ಮಲ್ಲಿ ಇದು ತೀರಾ ಅನಿವಾರ್ಯ ಎಂಬುದರಲ್ಲಿ ಅರ್ಥವಿದೆ. ಆದರೆ....ಸುರಕ್ಷಿತವಲ್ಲ ಎಂಬುದರಲ್ಲೂ ಅನುಮಾನವಿಲ್ಲ, ನಮ್ಮ ಸಂಶೋಧನೆ ಮುಂದುವರಿಯಬೇಕಾದುದು ಈ ದಿಶೆಯಲ್ಲಿ."

"ಸಂಶೋಧನೆ ಕೈಗೂಡುವುದು ಯಾವ ಕಾಲಕ್ಕೋ........ಅಲ್ಲಿಯ ವರೆಗೆ?"

"ದೇವರೇ ಕಾಪಾಡಬೇಕು."

ಸ್ವಲ್ಪಹೊತ್ತು ರುದ್ರಮೌನ ರಾಜ್ಯವಾಳಿತು.

"ವಿಜ್ಞಾನಿಗಳ ಸಭೆಯಲ್ಲಿ ವಿಷಯ ಇತ್ಯರ್ಥವಾಗಬೇಕು."

"ಭಾರತೀಯರು ಶಾಂತಿಪ್ರಿಯರು. ಶಾಂತಿಗಾಗಿಯೇ ಅಣುಸ್ಥಾವರ ವಿನಿಯೋಗಿಸಲ್ಪಡುವುದಾದರೆ ಒಳ್ಳಿತು. ಆದರೆ ಸಮಯ–ಸನ್ನಿವೇಶಗಳು ಯಾವಯಾವ ರೀತಿಯಲ್ಲಿ ಸಂಭವಿಸುವುವೋ ಯಾರಿಗೆ ಗೊತ್ತು?"

"ಅದು ನಿಜ. ಮನಸ್ಸು ಚಂಚಲ. ಬುದ್ಧಿಯೂ ಚಂಚಲ."

"ಅಪಾಯ ಒದಗಿತೆಂದರೆ ಸಾವಿರಾರು ಮಂದಿಯ ಪ್ರಾಣಕ್ಕೆ ಕುತ್ತು. ಅಂಗವಿಕಲತೆಯ ವಿಚಾರವಂತೂ ತುಂಬಾ ಹೆಚ್ಚುವ ಸಾಧ್ಯತೆ ಇದೆ. ಭಾರತ ದಲ್ಲಿ ಮೊದಲೇ ಅಂಗವಿಕಲತೆಯ ಗೋಳು ಹೇಳಿ ಮಾಡಿಸಿದಷ್ಟು ಅಗಾಧ. ಇದು ಇನ್ನೂ ಹೆಚ್ಚುವುದೆಂದರೆ ಹೇಗಿರಬೇಡ? ಯೋಚಿಸಿ ನೋಡು...."

"ಶೈನಿ, ಇಲ್ಲಿ ಕೇಳು! ಇಂತಿಂಥ ವಿಚಾರಗಳನ್ನು ನಾವು ಮತ್ತೆಮತ್ತೆ ಯೋಚಿಸಬೇಕಾದುದು ನ್ಯಾಯವೇ....ಈ ದೇಶ ಸಂಪದ್ಭರಿತವಾದ ಬೃಹದ್ ದೇಶ. ಇದರ ನಾನಾ ನ್ಯೂನತೆಗಳನ್ನು ತೊಡೆದು ಸಂಪೂರ್ಣ ಶುದ್ಧೀಕರಣ ಗೊಳಿಸಬೇಕಾದರೆ ಒಂದು ಶತಮಾನವೂ ಸಾಲದು. ಅದಕ್ಕನುಗುಣವಾಗಿ ಸಾಮಾಜಿಕರು ಚಿತ್ರವಿಚಿತ್ರವಾದ ಬಲೆಯಲ್ಲಿ ಸಿಕ್ಕಿಕೊಂಡಿದ್ದಾರೆ. ಇದೆಂದಿಗೂ ಬಗೆಹರಿಯಲಾರದಷ್ಟು ಗಹನ. ಅಂದಮೇಲೆ ವಿಚಾರ ವಿಶ್ಲೇಷಣೆ ತುಂಬಾ ಅಗತ್ಯ."

"ಕೈಬಿಡುವಿದ್ದಾಗಲೆಲ್ಲ ನಾನು ಯೋಚಿಸುವುದು ಇದನ್ನೇ...."

"ನಿಜ, ನಿಜ....ಎಲ್ಲರೂ ಗಮನಿಸಬೇಕಾದ ಅಂಶ" ನುಡಿ ಗಂಭೀರ ಭಾವದಿಂದ ಹೊರಬಿತ್ತು.

"ವಿದೇಶೀ ರಾಷ್ಟ್ರಗಳು ರಣಾಗ್ರಣಿಗಳಿಗಾಗಿ ಅಣುಸ್ಥಾವರ ಸ್ಥಾಪಿಸಿರು ವುದು ಸಹಜ. ಈಗ ನಾವೂ ಅದೇ ಸಾಲಿಗೆ ನಿಲ್ಲುವುದೆಂದರೆ ಯೋಚಿಸಬೇಕಾ ದದ್ದೇ."

"ಹಿರಿಯ ರಾಷ್ಟ್ರಗಳ ನಾಯಕರು ಸಿದ್ಧಹಸ್ತರಿದ್ದು ಮೂರನೆಯ ಪ್ರಪಂಚ ಯುದ್ಧ ಹೂಡಿ ಗೆಲ್ಲುವ ಧೈರ್ಯೋತ್ಸಾಹಗಳಿಂದ ಕೂಡಿರುವಾಗ ಹಿರಿಯ ರಾಷ್ಟ್ರಗಳ ಸಾಲಿನಲ್ಲಿರುವ ನಾವು ಇನ್ನೂ ಮೀನಾಮೇಶ ನೋಡುವುದೂ ಸಹ ಬಾಲಿಶವಾಗುತ್ತದೆ. ಇದೆಲ್ಲಾ ಸಾಮಾನ್ಯ ವಿಷಯವಲ್ಲ."

"ಸರಕಾರದ ಒಲವು ಅಣುಸ್ಥಾವರದತ್ತ ಇರುವುದು ಎಲ್ಲರಿಗೂ ತಿಳಿದ ಅಂಶ. ಈಗ ನಮ್ಮ ಮುಂದಿರುವುದು ಸುರಕ್ಷತೆಯ ವಿಷಯ. ಅದನ್ನು ಅಭಿ ವೃದ್ಧಿಪಡಿಸುವುದು ಅಷ್ಟು ಸುಲಭವಲ್ಲ, ಪ್ರತಿ ಹಂತಹಂತದಲ್ಲೂ ಅಣುವಿಕಿರಣ ಗಳು ಸೋರುತ್ತಲೇ ಇರುತ್ತವೆ. ಅದರ ದುಷ್ಪರಿಣಾಮ ಹೀಗೇ ಎಂದು ಹೇಳುವಂತಿಲ್ಲ. ಹೇಗೆ, ಯಾವಾಗ ತಲೆದೋರುತ್ತೆ ಎಂಬುದು ಸಹ ತಿಳಿಯ ದಷ್ಟು ಸೂಕ್ಷ್ಮ....ಗಂಭೀರ. ಸಂದರ್ಭ ಒದಗಿದಾಗ ಅಧಿಕಾರ ಪೀಠಸ್ಥರ ಮನಸ್ಸು ಯಾವ ರೀತಿ ಇರುತ್ತೋ ಅದೇ ರೀತಿಯ ಪ್ರಯೋಗ. . ಉತ್ಪತ್ತಿ ಮಾಡುವವರು–ಪ್ರಯೋಗಶೀಲರು–ಜಾಗತಿಕ ಸತ್ಯವನ್ನು ಕುರಿತು ಯೋಚಿಸ ಬೇಕಾದವರು ಒಮ್ಮನಸ್ಕರಾಗುವುದು ಕಷ್ಟವೇ."

"ಈ ವಿಚಾರ ಚರ್ಚಿಸಲು ನಾವು ವಿಜ್ಞಾನಿಗಳ ಸಭೆ ಕರೆಯಬೇಕು."

"ಖಂಡಿತ...."

"ಒಗ್ಗಟ್ಟಿದ್ದರೆ ಸಾಧನೆ ಸುಲಭ ಮತ್ತು ಸರಾಗ, ಅಲ್ಲಿಗೆ ವಿಶೇಷ ನಿರ್ಣ ಯವೂ ಆದೀತು.

o o o o

ಡಾ|| ಶೈನಿ ಮನೆ ಮೆಟ್ಟಲೇರಿದಾಗ ಮಡದಿ-ರಾಣಿ ವರಾಂಡದಲ್ಲಿ ಕುಳಿತು ಪತ್ರಿಕಾವಲೋಕನದಲ್ಲಿ ಮನವಿಟ್ಟಿದ್ದಳು. ಅವನು ಕಾರಿನ ಕೀ ಚೈನನ್ನು ಕಿಣಿಕಿಣಿ ಸದ್ದು ಮಾಡುತ್ತಾ ಒಳಬಂದಾಗ ರಾಣಿ ಹಿಂಬಾಲಿಸಿದಳು. ಅವಳ ಮುಖದಲ್ಲಿ ಗೆಲುವು ಇಲ್ಲವೇ ಇಲ್ಲ, ಕಣ್ಣುಗಳ ಕೆಳಗೆ ಸಣ್ಣ ಊತ. ಬಿಳಿಚಿಕೊಂಡ ಮುಖದಲ್ಲಿ ರಕ್ತಹೀನತೆಯ ಮುದ್ರೆ, ದೇಹಶುಕ್ತಿ ನಿಶ್ಶಕ್ತಿಯಿಂದ ತೇಲುವಷ್ಟು ಹಗುರ....

"ಇಂದು ಡಾಕ್ಟರ ಬಳಿಗೆ ಹೋಗಿದ್ದೆಯಾ ರಾಣಿ?"

"ನಿನ್ನೆ ಹೋಗಿದ್ದೆನಲ್ಲಾ, ನಾಳೆ ಅವರೇ ಈ ಕಡೆ ಬರಲಿದ್ದಾರೆ."

"ಓ, ಹಾಗೋ?"

ಇಬ್ಬರೂ ಸೋಪಾದ ಮೇಲೆ ಅಕ್ಕಪಕ್ಕದಲ್ಲಿ ಸುಖಾಸೀನರಾದರು.

ಆಯಾ ಸೂಪು ತುಂಬಿದ ಬಟ್ಟಲುಗಳಿದ್ದ ಟ್ರೇಯನ್ನು ತಂದು ಮುಂದಿಟ್ಟಳು.

ರಾಣಿ ಏನೋ ಒಂದು ಬಗೆಯ ಜುಗುಪ್ಸೆಯಿಂದ ನುಡಿದಳು "ನನಗೆ ಈಚೀಚೆಗೆ ಆಹಾರವೆಂದರೇ ಬೇಸರ....ನಾಲಿಗೆ ಒಗರು, ತಿನ್ನಬೇಕು; ತಿನ್ನಲಾರೆ, ಹಾಗಾಗಿದೆ."

"ಹಾಗೆಂದರೆ ಹೇಗೆ ರಾಣಿ? ಈಗಲೇ ತುಂಬಾ ನಿಶ್ಶಕ್ತಿಯಾಗಿದ್ದಿ. ಪ್ರಯತ್ನಪೂರ್ವಕವಾಗಿ ತೆಗೆದುಕೋ. ಅಷ್ಟು ದೃಢಭಾವ ಇಲ್ಲದಿದ್ದರೆ ಸೋಲೊಪ್ಪಿಕೊಂಡಂತೆ ಅಲ್ಲವೆ? ನಿನ್ನಂತಹ ಧೀಮಂತೆ ಹೀಗಾದರೆ ಹೇಗೆ?"

"ಬಲಾತ್ಕಾರವಾಗಿ ನುಂಗಿದರೆ ವಾಂತಿಯಾಗುತ್ತೆ...."

"ಹಾಗೆನ್ನಬೇಡ ಡಾರ್ಲಿಂಗ್, 'ವಾಂತಿ ಮಾಡುವುದಿಲ್ಲ' ಎಂಬ ಧೀರ ನಿರ್ಣಯದಿಂದ ತೆಗೆದುಕೊ. ವಾಂತಿಯಾಗುತ್ತದೆ ಎಂಬ ಭಯ ಅಳುಕು ಇದ್ದರೆ ಆಗುವುದೇ ಹಾಗೆ."

"ಇಲ್ಲಪ್ಪಾ, ನಾನು ಅಷ್ಟೊಂದು ಪುಕ್ಕಲು ಅಲ್ಲ, ಶರೀರ ಪ್ರಕೃತಿಯೇ

ಹಾಗಾಗಿದೆ. ನಾನೇನು ಮಾಡಲಿ? ಡಾಕ್ಟರ ಹೇಳಿಕೆ ಪ್ರಕಾರ ಔಷಧಿ–ಪಥ್ಯ ಗಳನ್ನು ಚಾಚೂ ತಪ್ಪದೆ ನಡೆಸುತ್ತಿರುವೆ. ಯಾಕೋ ಸರಿಹೋಗುತ್ತಿಲ್ಲ."

"ಒಟ್ಟಿನಲ್ಲಿ ದೃಢ ಮನಸ್ಸಿರಬೇಕು. ಬಹುಶಃ ನಿನಗೆ ಅದೇ ಇಲ್ಲ."

"ನನ್ನ ಗ್ರಹಚಾರ....ಸರಿಯಿಲ್ಲವೇನೋ...."ದನಿಯಲ್ಲಿ ಉದಾಸೀನವೇ ಹರಿದು ಬಂತು.

ಡಾ|| ಶೈನಿ ಅವಳ ಬಸಿಯನ್ನು ಕೈಲಿಡುತ್ತ "ಈಗ ಕುಡಿ ನೋಡೋಣ, ಖಂಡಿತ ವಾಂತಿಯಾಗಲಾರದು. ಸಂತಸದಿಂದ ಕುಡಿ ಜುಗುಪ್ಸೆಯಿಂದ ಕುಡಿ ಯಬೇಡ."

ಡಾ|| ಶೈನಿ ತಾನೊಂದು ಬಟ್ಟಲು ತೆಗೆದುಕೊಂಡ. ಇಬ್ಬರೂ ಸ್ವಲ್ಪ ಸ್ವಲ್ಪವಾಗಿ ಹೀರತೊಡಗಿದರು.

"ಕೇಳು ರಾಣಿ; ಸೈನ್ಸ್ ಬಹಳ ಮುಂದೆ ಹೋಗಿದೆ. ಇನ್ನು ಮುಂ ದೆಯೂ ಹೋಗುತ್ತಲೇ ಇರುತ್ತದೆ. ಈ ಬಾಳಿನ ಸಣ್ಣಸಣ್ಣ ನ್ಯೂನತೆ ಗಳನ್ನು ತುಂಬುವುದು ಕಷ್ಟವಲ್ಲ. ಆ ಧೈರ್ಯದಿಂದ ಇಂದಿನ ಸಂಕಷ್ಟಗಳನ್ನು ಎದುರಿಸುವುದರಲ್ಲಿ ಶ್ರದ್ಧೆ ವಹಿಸಬೇಕು, ನೀನೇನೂ ತಿಳಿಯದವಳಲ್ಲ...."

"ನಾನು ಈವರೆವಿಗೆ ಹೀಗಿದ್ದುದುಂಟೇ? ಈಗ ಏನೇನೋ ಕೊರತೆ.... ಅರ್ಥವಾಗದ ದುಗುಡ. ಸಹಿಸಲಾಗದ ಹಿಂಸೆ. ಏನೋ ಒಂದು ಬಗೆಯ ಕುಂದು ಅಥವಾ ನ್ಯೂನತೆಯ ಚಿಂತೆ ಮನವನ್ನು ಹಿಂಡುತ್ತಿದೆ....ಏನೆಂಬುದೇ ಅರ್ಥವಾಗುತ್ತಿಲ್ಲ."

ಮಾತು ಮುಗಿಯುವುದರೊಳಗಾಗಿ ಕಂಠ ಗದ್ಗದಿತವಾಯಿತು.

"ಛಿಃ! ಏನಂತಹ ಭಯ?" ತಲೆಯನ್ನು ನೇವರಿಸಿ ನಲ್ಮೆಯಿಂದ ನುಡಿದ ಡಾ|| ಶೈನಿ "ನೋಡು ಇಷ್ಟು ದಿನ ಮಕ್ಕಳಿಲ್ಲ ಎಂದು ಹಂಬಲ. ಈಗ ಸಂತೋಷ ದಿಂದ ಸ್ವಾಗತಿಸುವ ಕಾಲ. ಐದು ತಿಂಗಳು ಕಳೆಯಿತು- ಇನ್ನು ನಾಲ್ಕು ತಿಂಗ ಳಷ್ಟೆ? ನಾಲ್ಕು ತಿಂಗಳು ಎಂಬುದು ನಾಲ್ಕು ವಾರಗಳಷ್ಟು ಸರಾಗದಲ್ಲಿ ಕಳೆ

ಯುತ್ತೆ. ಈಗ ಕಾಲ ಬಲು ಬೇಗನೆ ಓಡುತ್ತೆ. ಕಾಲವನ್ನು ಬೆನ್ನಟ್ಟುವ ಧೈರ್ಯ ನಮ್ಮಲ್ಲಿರಬೇಕು, ಅಂದರೆ ಜೀವನ ಸರಾಗ...."

ಅವನು ಹೇಳುತ್ತಲೇ ಇದ್ದಾನೆ. ಸೂಪಿನ ಬಟ್ಟಲುಗಳು ಬರಿದಾಗುವ ವರೆಗೂ ವ್ಯಾಖ್ಯಾನ ನಡೆದೇ ನಡೆಯಿತು.

ಅವಳೆಷ್ಟು ಮನಗಂಡಳೋ ಬಿಟ್ಟಳೋ ಅದನ್ನು ಅವನು ಅರಿಯ.

o o o o

"ಪರಮಾಣು ಸ್ಥಾವರಗಳಿಂದ ವಿದ್ಯುತ್ ತಯಾರಿಸುವುದಕ್ಕಾಗಿ ಗಣಿಗಳಿಂದ ಯುರೇನಿಯಂ ಅದುರು ತೆಗೆದು ಶುದ್ಧೀಕರಣ ನಡೆಸುವಾಗ, ಪರಮಾಣು ಕಾಲುವೆಗಳಲ್ಲಿ ಯುರೇನಿಯಂ ಪರಮಾಣುಗಳನ್ನು ಒಡೆದಾಗ ಅದರಲ್ಲಿ ಮೂಡುವ ವಿಕಿರಣ ವಸ್ತುಗಳು ಸೋರುವುದು ಸಹಜ. ವಿಕಿರಣ ವಸ್ತುಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಬದಲಾಯಿಸುವಾಗ ಮತ್ತು ಇವು ಸೋರಿ ಪರಿಸರಕ್ಕೆ ಅಪಾಯವಾಗದಂತೆ ಶೇಖರಿಸುವಾಗ ನಾವು ಸಂಪೂರ್ಣ ವಿಜಯಶಾಲಿಗಳಾಗುತ್ತೇವೆ ಎಂಬುದು ಸತ್ಯಕ್ಕೆ ದೂರವೇ....... ಅಂದಮೇಲೆ ಈ ಪರಿಸ್ಥಿತಿಯಲ್ಲಿ ಅಣು ಸ್ಥಾವರಗಳು ನಮಗೆ ಬೇಕೇಬೇಕೆ ಎಂಬುದು ಗುರುತರ ಪ್ರಶ್ನೆ."

ಡಾ|| ಶೈನಿ ದೃಢಕಂಠದಿಂದ ಬಿತ್ತರಿಸಿದ.

"ಅದನ್ನು ಹೀಗಳೆಯಲಾರೆ. ಯಾವೊಂದರಲ್ಲೂ ನೂರಕ್ಕೆ ನೂರರಷ್ಟು ಉತ್ತೀರ್ಣರಾಗುತ್ತೇವೆ ಎಂಬ ಭರವಸೆ ಯಾವ ಕ್ಷೇತ್ರದಲ್ಲೂ ಮೂಡುವುದು ಸಾಧ್ಯವೇ ಇಲ್ಲ. ಸೋಲು–ಗೆಲುವು ಎಲ್ಲ ಕ್ಷೇತ್ರಗಳಲ್ಲೂ ಹೆಚ್ಚುಕಡಿಮೆ ಇದ್ದೇ ಇರುತ್ತದೆ. ನಾವು ಎಲ್ಲಕ್ಕೂ ಸಿದ್ಧರಿದ್ದರೇನೇ ಉತ್ಪಾದನೆ ಸರಾಗ. ಅದಕ್ಕಾಗಿ...." ಎಂದ ಡಾ|| ಗೋಪಿ.

"ಪ್ರತಿ ಹಂತಗಳಲ್ಲೂ ಮತ್ತು ಆಗಾಗ್ಗೆ ನಡೆದ ಆಕಸ್ಮಿಕಗಳಿಂದಲೂ ಅತ್ಯಂತ ವಿಷಪ್ರಾಯವಾದ ವಿಕಿರಣ ವಸ್ತುಗಳು ಸೋರಿ ಜೀವ ಜಂತುಗಳಲ್ಲಿ (ಚಕ್ರದಲ್ಲಿ) ಸೇರಿ ಕೆಲವು ಬಗೆಯ ಪ್ರಾಣಿಗಳಲ್ಲಿ ದೊಡ್ಡ ದೊಡ್ಡ ಪ್ರಮಾಣದಲ್ಲಿ

ಬೆಳೆಯುತ್ತವೆ. ಅಲ್ಲದೆ ನೀರು, ಗಾಳಿ, ಭೂಮಿ ಮತ್ತು ಆಹಾರ ಪದಾರ್ಥಗಳ ಮೂಲಕ ಮಾನವದೇಹದೊಳಗೆ ಸೇರುವುದು ದಿಟ. ಈ ಪ್ರಕಾರಗಳಿಂದ ನಮ್ಮ ಕಾಲಮೇಲೆ ನಾವೇ ಕಲ್ಲು ಹಾಕಿಕೊಳ್ಳುವ ಸಿದ್ಧತೆಯಲ್ಲಿದ್ದೇವೆ ಎನ್ನದೆ ಗತಿಯಿಲ್ಲ.

"ಆಲ್ಫಾ, ಬೀಟಾ, ನ್ಯೂಟ್ರಾನ್, ಗ್ಯಾಮಕಿರಣಗಳು ಎಲ್ಲಿ, ಯಾವಾಗ ಸೋರುತ್ತವೆ ಎಂಬುದನ್ನು ಊಹಿಸುವುದು ಕಷ್ಟ. ಈ ಎಲ್ಲಾ ಜಾತಿಯ ವಿಕಿರಣಗಳು ಜೀವಕೋಶಗಳಲ್ಲಿ ಸೇರಿ ಮುಂಬೆಳೆದಾಗ ಜೀವಕೋಶಗಳ ವ್ಯವಸ್ಥೆಯನ್ನು ಚೆಲ್ಲಾಪಿಲ್ಲಿ ಮಾಡಿ ಅವುಗಳಿಗೆ ಸಾವು ನೋವುಗಳನ್ನುಂಟು ಮಾಡುತ್ತವೆ. ಈಗಾಗಲೇ ನಮ್ಮ ದೇಹ ಪ್ರಕೃತಿಯಲ್ಲಿ ಏನೇನು ಹಾನಿಯಾಗಿದೆಯೋ ಯಾರಿಗೆ ಗೊತ್ತು ?"

"ಅದು ನಿಜ ...." ತಲೆದೂಗಿದ ಡಾ|| ಗೋಪಿ.

"ಕಳೆದ ವರ್ಷ ಅಣುವಿಕಿರಣಗಳು ಹೆಚ್ಚಿನ ಪ್ರಮಾಣದಲ್ಲಿ ಸೋರಿ ಜನ-ದನಗಳಿಗೆ ವಾಂತಿ-ಭೇದಿ ರಕ್ತಸ್ರಾವ ಹುಣ್ಣುಗಳು ವ್ಯಾಪಕವಾಗಿ ಕಾಣಿಸಿಕೊಳ್ಳಲಿಲ್ಲವೇ ? ಆಗ ಜನ ತಿಳಿದುದು ಸಾಂಕ್ರಾಮಿಕ ಎಂದು. ಕೆಲವರಿಗೆ ಕೂದಲು ದುರುವಿಕೆ ಮತ್ತು ಮೂಳೆಗಳ ಒಳಕೋಶಗಳ ಸಾವು ಕಂಡುಬಂದಾಗ ನಾವು ವಿಕಿರಣಗಳ ಹಾವಳಿ ಇದು ಎಂಬುದನ್ನು ಅರಿತುದು .... ಇಂತಿಂತಹ ತೊಂದರೆಗಳನ್ನು ಕಣ್ಣಿಂದ ಕಂಡರಿತು, ಅನುಭವಿಸಿಯೂ ಅಣುಸ್ಥಾವರವನ್ನು ನಮ್ಮಲ್ಲಿ ಮುಂಬೆಳೆಸುವ ಬಯಕೆ ಮೂರ್ಖತನ ಎನಿಸುತ್ತೆ ನನಗೆ. ಅಂಗವಿಕಲತೆ ಸಮಾಜದಲ್ಲಿ ಹೆಚ್ಚುತ್ತಲಿದ್ದರೆ ಹೇಗೆ ? ಈ ದೇಶ ಇನ್ನೂ ಕಣ್ಣು ಬಿಡುವುದರಲ್ಲಿದೆ. ನಾವು ಅಗತ್ಯವಾಗಿ ಖರ್ಚು ಮಾಡಲೇಬೇಕಾದ ಕಡೆ ಹಣದ ವಿನಿಯೋಗ ಸರಿಯಾದ ರೀತಿಯಲ್ಲಿ ಆಗುತ್ತಲೇ ಇಲ್ಲ. ಈ ದಿಶೆಯಲ್ಲಿ ರಾಷ್ಟ್ರದ ಅರ್ಥಕೋಶವನ್ನು ಕೊಳ್ಳೆಹೊಡೆದು ರೋಗ ರುಜಿನಗಳನ್ನು ಪಡೆಯುವುದೆಂದರೆ ದುರದೃಷ್ಟವಲ್ಲದೆ ಮತ್ತೇನಲ್ಲ." ವಿಷಾದ ವಾಣಿಯಲ್ಲಿ ನುಡಿದ ಡಾ|| ಶೈನಿ.

ಅಣುವಿಕಿರಣ ವಿಚಾರವಾಹಿನಿ ಈರ್ವರ ಹೃದಯಗಳನ್ನೂ ಮೌನದಿಂದ ಮಿಡಿಸಿತು.

o o o o

ಬೆಳಗಿನ ಶಾಂತಪ್ರಶಾಂತ ವಾತಾವರಣದಲ್ಲಿ ಬಾಲರವಿ ಪ್ರಜ್ವಲಿಸುತ್ತ ಬೆಣ್ಣೆಮುಗಿಲ ದಿಣ್ಣೆಯನ್ನು ಏರುತಿದ್ದಾನೆ. ಮನೆಯ ಮುಂದಿನ ಸುಂದರ ಉದ್ಯಾನದಲ್ಲಿ ವರ್ಣವರ್ಣಾಂತ ಹೂಗಳ ಹಿಲಾಲುಗಳನ್ನು ಹೊತ್ತು ತಂಗಾಳಿಯ ಆಮೋದಕತೆಗೊಲಿದು ತಲೆದೂಗುವ ಗಿಡಗಳ ರಾಶಿರಾಶಿ. ಗುಡಿಸುವವರು ದಿನವೂ ಗುಡಿಸುತ್ತಾರೆ. ಆದರೂ ಅಲ್ಲಲ್ಲಿ ವಿಗಲಿತ ದಲುಗೆಲೆಗಳ ಶೇಷಾವಶೇಷ. ಆಗಲೇ ಕುಂಟುಗಾಲಿನ ಮಾಲಿ ಕುಂಟುತ್ತ ಗಿಡಗಳಿಗೆ ನೀರೆರೆಯುತಿದ್ದ. ಹೊಂಬಿಸಿಲಿನ ಪ್ರತಿಫಲನದಿಂದ ಎಲೆ ಎಲೆಗಳ ಮೇಲಿನ ನೀರಿನ ಹನಿಗಳು ಉರಿಕಿಡಿಗಳಂತೆ ಹೊಳೆಯುತ್ತಿವೆ. ಉದ್ಯಾನದ ಸೌಂದರ್ಯ ಸಮೀಕ್ಷೆಯಲ್ಲಿ ಮನವಿಟ್ಟು ಅಲ್ಲಲ್ಲೆ ವಿಚರಿಸುತ್ತ ತನುಮನಗಳಿಗೆ ಆನಂದಭೋಗವನ್ನುಣಿಸುತಿದ್ದ ರಾಣಿಗೆ ಮಾಲಿಯ ಕುಂಟುಗಾಲಿನ ಕಡೆ ದೃಷ್ಟಿ ಹೊರಳಿಸಬಾರದೆಂಬ ಯೋಚನೆ. ಆದರೆ ಕಣ್ಣುಗಳು ಮಣಿಯುವುದಿರಲಿ ಮತ್ತೆಮತ್ತೆ ವಂಚಿಸುತ್ತವೆ. ತನ್ನ ಪ್ರಯತ್ನವು ಸೋತು ಹೋದಾಗ ರಾಣಿ ಒಳಗಡೆ ಬಂದಳು. ಬೆಳಗಿನ ವಾಯು ವಿಹಾರಕ್ಕೂ ಕಲ್ಲು ಬಿತ್ತು. ಮನಸ್ಸಿಗೂ ನೆಮ್ಮದಿ ಉಳಿಯಲಿಲ್ಲ.

ಆಸ್ಪತ್ರೆಗೆ ಹೋಗುವ ಹಾದಿಯಲ್ಲಿ ರಾಣಿಯನ್ನು ನೋಡಿ ಹೋಗುವ ಸಲುವಾಗಿ ಹೀಗೆಯೇ ಬಂದಳು ಲೇಡಿ ಡಾ|| ಕೃಪಾಲಿ.

"ಬೆಳಗಿನ ವಾತಾವರಣ ಎಷ್ಟೊಂದು ಸೊಗಸಾಗಿದೆ? ನೀನು ಹೊರಗಡೆ ಅಡ್ಡಾಡಿ ಗಾಳಿಸೇವನೆ ಮಾಡಬಾರದೇ?" ಮೊಟ್ಟಮೊದಲ ಪ್ರಶ್ನೆ ಡಾಕ್ಟರದು.

"ಹೊರಗಡೆ ಹೋಗಿದ್ದೆ ಡಾಕ್ಟರ್. ಆದರೆ, ಏನೇನೋ ಅಡ್ಡಿ ಆತಂಕಗಳು..." ತುಟಿ ಕಚ್ಚಿದಳು ರಾಣಿ.

"ಏನು ಹಾಗೆಂದರೆ...?"

"ನಾನು ಎಷ್ಟೆಷ್ಟೋ ಪ್ರಯತ್ನಿಸುವೆ ವಿಕೃತ ರೂಪುಗಳನ್ನು ನೋಡಬಾರದೆಂದು. ಆದರೆ ಅದೇನು ಗ್ರಹಚಾರವೋ ವಿಧಿವತ್ತಾಗಿ ನೋಡಿಯೇ ನೋಡುವುದು ಕರ್ಮಬದ್ಧವಾಗಿದೆ. ಆಗಲೇ ಹೊರಗಡೆ ಹೋಗಿದ್ದೆ. ಕುಂಟು

ಗಾಲಿನ ಮಾಲಿ ಕಣ್ಣಿಗೆ ಬಿದ್ದ. ಹಾಗೆಯೇ ಹಿಂದಿರುಗಿ ಬಂದೆ. ಮನಸ್ಸಿಗೆ ಏನೋ ಒಂದು ರೀತಿಯ ಕಸಿವಿಸಿ."

"ಅರರೆ! ಅದಕ್ಕೆಲ್ಲಾ ಏಕೆ ಪ್ರಾಧಾನ್ಯತೆ ಕೊಡಬೇಕು? ಇದು ಮಿಾನಿಂಗ್‌ಲೆಸ್."

"ಕೇಳಿ ಡಾಕ್ಟರ್. ನಾನು ಮೊದಲೆಲ್ಲಾ ಹೀಗಿರಲೇ ಇಲ್ಲ. ಈಗೀಗ, ಗರ್ಭಿಣಿ ಆದನಂತರ ಮನಸ್ಸಿನ ಮೇಲೆ ಏನೇನೋ ಪರಿಣಾಮಗಳು. ಪುಸ್ತಕ-ಪತ್ರಿಕೆಗಳನ್ನು ತೆರೆದರೆ ಸಾಕು, ಯಾವುದಾದರೊಂದು ವಿಕೃತ ರೂಪು ಬಿದ್ದೇ ಬೀಳುತ್ತದೆ ಕಣ್ಣಿಗೆ. ಆದ್ದರಿಂದ ಓದುವುದೇ ಬೇಡ ಎನಿಸುತ್ತದೆ."

"ಸರಿಹೋಯ್ತು. ಅಂದರೆ ನೀನು ಸುಮ್ಮನೆ ಕುಳಿತು ಮಲಗಿ ಕಾಲಹರಣ ಮಾಡುತಿದ್ದಿ?"

ಅತ್ಯಾಶ್ಚರ್ಯ ವಿಸ್ತೃತ ನಯನಗಳಿಂದ ನಿಟ್ಟಿಸಿದಳು ಡಾ|| ಕೃಪಾಲಿ. ಅವಳ ಮುಖದಲ್ಲಿ ಸಂತೋಷದ ಹಾವಭಾವಗಳ ಬದಲಾಗಿ ಕಳವಳ ಚಿಂತೆಗಳ ಮುದ್ರೆಯೇ ಪ್ರಧಾನವಾಗಿತ್ತು. ಅಪ್ರಬುದ್ಧರಂತೆ, ಮುಗ್ಧದುಗ್ಧರಂತೆ, ಅಭಿಭೂತರಂತೆ ದೈನ್ಯಮೂರ್ತಿಯಾಗಿ ಕಣ್ಗೆಸೆಯುತಿದ್ದರೆ ಏನೆನ್ನಬೇಕೋ ತಿಳಿಯದಾಯ್ತು. ಮನನೊಂದು ಚಿಂತಾಮಗ್ನಳಾಗಿ, ಸ್ವಲ್ಪ ಅಸಮಾನದಿಂದ ನುಡಿದಳು ಡಾ|| ಕೃಪಾಲಿ–"ಇದು ಖಂಡಿತ ಸರಿಯಲ್ಲ."

"ಹೌದು, ಏನು ಮಾಡಲಿ ಹೇಳಿ? ನನಗೆ ಏಕೆ ಹೀಗಾಗುತ್ತಿದೆಯೋ ದೇವರಿಗೇ ಗೊತ್ತು."

"ಇರಲಿ, ಅದಕ್ಕೆ ತಲೆ ಕೆಡಿಸಿಕೊಳ್ಳುವುದೇಕೆ? ಪುಕ್ಕಲುತನವಿರಬಾರದು. ಹೀಗೆ ಗಾಳಿ ಬೆಳಕಿಗೆ ದೂರವಾಗಿ ಮೂಲೆ ಗುಂಪಾದರೆ ನಿನ್ನ ಗತಿಯೇನು? ಮಗುವನ್ನು ಹೆತ್ತು ಸಾಕುವುದಾದರೂ ಹೇಗೆ? ಪ್ರಪಂಚದಲ್ಲಿ ಎಷ್ಟು ಜನ ಹೆತ್ತು ಸಾಕುತ್ತಿಲ್ಲ? ಅವರಿಗೆಲ್ಲ ಏನಾಗಿದೆ? ನೀನು ವೃಥಾ ಚಿಂತೆ ಹಚ್ಚಿಕೊಂಡಿದ್ದಿ .... ದೃಢ ಮನಸ್ಸು ಮಾಡು. ಎಲ್ಲಾ ಸರಿಹೋಗುತ್ತೆ."

ಲೇಡಿ ಡಾಕ್ಟರು ಬೆನ್ನನ್ನು ನೇವರಿಸಿ ನೊಂದ ಮನಸ್ಸಿಗೆ ಸಾಂತ್ವನ ನೀಡುವಂತೆ ಮೃದು ವಚನಗಳಿಂದ ಪುನಃ ನುಡಿದಳು "ನೀನು ವಿದ್ಯಾ ವಂತೆ. ನಿನಗೆ ಹೇಳುವುದೇನಿದೆ? ನೀನು ತುಂಬ ಸೂಕ್ಷ್ಮ ಅಥವಾ ಸಂಕುಚಿತ ಅಥವಾ ಪುಕ್ಕಲು ಎಂದು ಹೇಳುವುದಕ್ಕೂ ಬಾಯಿ ಬರುವುದಿಲ್ಲ. ಯೋಚಿಸಿ ನೋಡು, ನೀನೀಗ ಹೇಗಿರಬೇಕು, ಹೇಗಿದ್ದಿ ಎರಡನ್ನೂ ನೀನೇ ತುಲನೆ ಮಾಡು. ನಿನ್ನನ್ನು ನೀನೇ ಸರಿಪಡಿಸುವುದಲ್ಲದೆ ಇನ್ನೊಬ್ಬರಿಂದ ಸಾಧ್ಯವಿಲ್ಲ, ರಾಣಿ! ನಿನ್ನ ಮಾನಸಿಕ ಕಳವಳ-ತಳಮಳವನ್ನು ಭಗವಂತನಿಗೊಪ್ಪಿಸಿ ಕೊಂಡು ನಿಶ್ಚಿಂತೆಯಿಂದಿರು. ದೇವರು ಖಂಡಿತ ನಿನ್ನ ಕಡೆಗಿರುತ್ತಾನೆ."

ರಾಣಿ ಅಶ್ರುಪೂರ್ಣ ಲೋಚನಗಳಿಂದ ನೋಡಿದಳು. ತುಟಿಗಳು ಪ್ರಯ ತ್ನಿಸಿದರೂ ಬಿರಿಯಲಿಲ್ಲ. ಚಿತ್ತಾಲೋಕವೆಲ್ಲ ಕಲಕಲವಾಯಿ.

೦ ೦ ೦ ೦

ಡಾ|| ಶೈನಿ ಪ್ರಯೋಗಶಾಲೆಯನ್ನು ಮುಚ್ಚಿ ಹೊರಬಂದಾಗಲೇ ಡಾ|| ಶಿವು ಆಗಮಿಸಿದ.

ಇಬ್ಬರೂ ಪರಸ್ಪರ ಸಂಧ್ಯಾವಂದನೆಯನ್ನು ವಿನಿಮಯಗೊಳಿಸಿದ ಬಳಿಕ ಪ್ರಸನ್ನ ಮುಖದಿಂದ ಹಾರ್ದಿಕವಾಗಿ ಹಸ್ತಲಾಘವ ಪಡೆದುಕೊಂಡರು.

"ನೀನು ಈಚೀಚೆಗೆ ಬಹಳ ಅಪರೂಪ...."

"ಮುಂಬೈ ದೆಹಲಿ ಪ್ರವಾಸಗಳು ಇದ್ದೇ ಇರುತ್ತವೆ. ಕಳೆದವಾರ ಹೈದರಾಬಾದಿಗೆ ಹೋಗಿದ್ದೆ. ಹೀಗೆ ಸಮಯ ಕಳೆದುದೇ ತಿಳಿಯದಂತೆ ಓಡುತ್ತದೆ ಕಾಲವಾಹಿ. ಇರಲಿ, ಹೇಗಿದೆ ನಿನ್ನ ರೀಸರ್ಚ್? ನಿನ್ನ ಶ್ರೀಮತಿಗೂ ಆರೋಗ್ಯವಿಲ್ಲ ಎಂದು ಬೇರೆ ತಿಳಿಯಿತು. ಈಗ ಹೇಗಿದ್ದಾರೆ ರಾಣಿ? ಯಾರು ನೋಡುತಿದ್ದಾರೆ?"

"ಇಷ್ಟು ಕಾಲವೆಲ್ಲ ಅವಳಿಗೆ ಮಕ್ಕಳಿಲ್ಲದ ಹಂಬಲ. ಈಗ ಕೆಟ್ಟ ಸ್ವಪ್ನ.... ಕೆಟ್ಟ ಶಕುನಗಳನ್ನು ನಂಬಿ ಕೊರಗುತ್ತಾಳೆ. ಮನಸ್ಸಿಗೆ ನೆಮ್ಮದಿಯಿಲ್ಲದೆ ದೇಹಾರೋಗ್ಯವೂ ಇಲ್ಲವಾಗಿದೆ. ನನಗೂ ಅದೇ ಚಿಂತೆ. ಏನೋ ಒಂದು ರೀತಿಯ ಪುಕ್ಕಲು ಅಥವಾ ಟಿಮಿಡ್ ಆಗಿ ಬಿಟ್ಟಿದ್ದಾಳೆ. ನಾನು ಸಾಧ್ಯ

ವಾದಷ್ಟು ಅವಳಿಗೆ ಧೈರ್ಯ ಹೇಳಿ ಮನಸ್ಸಿಗೆ ನೆಮ್ಮದಿ ಊಡಿಸುವೆ. ಆದರೂ ಒಳಗಿಂದೊಳಗೇ ಕೊರಗು..."

"ಕಾರಣ....?"

"ಇದು ವಿಜ್ಞಾನ ಯುಗ. ಅಣುವಿಕಿರಣಗಳು ವ್ಯಾಪಿಸೇರಿ ಜನಿಸುವ ಶಿಶುವಿಗೆ ಮಾರಕವಾಗಬಹುದು. ಗರ್ಭಸ್ರಾವ ಅಥವಾ ಹುಟ್ಟಿ ಸಾಯುವಿಕೆ ಅಥವಾ ಅಂಗವಿಕಲತೆ ಅಥವಾ ಬುದ್ಧಿಭ್ರಮಣೆ ಇಂತಿಂತಹ ಅನಾಹುತಕ್ಕೊಳಗಾಗಬಹುದು ಗರ್ಭಸ್ಥ ಶಿಶು ಎಂಬ ತಳಮಳ ಅವಳಿಗೆ. ಆಗಾಗ ಅಂತಹ ಕನಸುಗಳನ್ನು ಕಾಣುವುದರಿಂದ ಆ ಶಕುನ ಈ ಶಕುನಗಳನ್ನು ಪೂರಾ ನಂಬಿ ಮನ ಸೋತಿದ್ದಾಳೆ. ಧೈರ್ಯ–ಗೆಲುವು–ಸಂತೋಷಗಳು ಇಲ್ಲವೇ ಇಲ್ಲ. ಈ ಭಯ ಭೀತಿ ಹೇಗೆ ತಲೆಯನ್ನು ಹೊಕ್ಕಿತೋ ದೇವರಿಗೇ ಗೊತ್ತು. ಈಗದು ಭೂತಾಕಾರವಾಗಿ ಬೆಳೆದಿದೆ. ಹತ್ತು ವರ್ಷಗಳ ಆತ್ಮೀಯ ಒಡನಾಟವಿದ್ದರೂ ಇದುವರೆಗೆ ಅವಳಲ್ಲಿ ಇಷ್ಟು ದೌರ್ಬಲ್ಯವನ್ನು ನಾನು ಕಂಡುಕೊಂಡಿರಲಿಲ್ಲ."

"ಈಗೇನು ಮಾಡುತ್ತಿ ?"

"ಹೇಗಾದರೂ ಹೆರಿಗೆಯಾಗುವವರೆಗೆ ಸುಧಾರಿಸಿಕೊಳ್ಳಬೇಕು. ಅವಳಿಗಾಗಿ ದಿನವೂ ಪ್ರಾರ್ಥಿಸಿಕೊಳ್ಳುತ್ತೇನೆ. ಅದು ವಿನಾ ನಾನಿನ್ನೇನೂ ಮಾಡಲಾರೆ. ಚಿಕಿತ್ಸೆ ನಡೆಯುತ್ತಿದೆ. ಡಾಕ್ಟರು ಯಾವ ಗಳಿಗೆಯಲ್ಲಾದರೂ ತಕ್ಷಣ ಒದಗುತ್ತಾರೆ ಸೌಕರ್ಯಕ್ಕೆ ಕೊರತೆಯಿಲ್ಲ. ಮುಂದಿನ ಭಾರ ಭಗವಂತನಿಗೆ ಸೇರಿದ್ದು."

ನಿರಾಶೆಯ ನಿಟ್ಟುಸಿರು ಬಿಟ್ಟ ಡಾ|| ಶೈನಿ.

"ನೀನೀಗ ಎಲ್ಲಿಗೆ ಹೊರಟದ್ದೀ ಮನೆಗೆ ತಾನೆ ?"

"ಹೌದು...ಮನೆಗೆ..."

"ನಡೆ, ನಾನೂ ಬರುವೆ, ಅವರನ್ನು ನೋಡದೆ ತುಂಬಾ ದಿನಗಳಾದುವು. ಒಮ್ಮೆ ನೋಡಿಕೊಂಡು ಹೋಗುವೆ."

"ಒಳ್ಳೆಯದು...ಅವಳ ಪುಕ್ಕಲು ಮನಸ್ಸಿಗೆ ಧೈರ್ಯ ತುಂಬಬೇಕು. ನೀನೂ ನಾಲ್ಕು ಮಾತು ಹೇಳಿ ನೋಡು. ಅವಳಿಗೆ ಸಾವು ನೋವುಗಳ ವಿಷಯ

ಕೇಳುವುದೇ ಬೇಡವಾಗಿದೆ. ಟಿ. ವಿ- ಸಮಾಚಾರ ಕೇಳುವುದಿಲ್ಲ. ಪತ್ರಿಕೆ–ಮ್ಯಾಗಜಿನ್ ಓದುವುದಿಲ್ಲ. ಹೊರಗಡೆಯೂ ಹೋಗವುದಿಲ್ಲ. ಅಲ್ಲದೆ, ಕಣ್ಣು ಮುಚ್ಚಿದರೆ ಕೆಟ್ಟ ಸ್ವಪ್ನ ಬೀಳುತ್ತೆ. ಹಾಗೆಂದು ನಿದ್ದೆ ಮಾಡುವುದೂ ಬೇಡ ವಾಗಿದೆ ಎಂದರೆ ಏನು ಹೇಳಲಿ ? ನನಗೂ ತುಂಬಾ ಚಿಂತೆ. ಒಮ್ಮೆ ಸಮಸ್ಯೆ ಬಗೆ ಹರಿದರೆ ಸಾಕಾಗಿದೆ."

"ದೇವರು ದೊಡ್ಡವನು ಕಡೆ ಹಾಯಿಸುತ್ತಾನೆ."

ಡಾ|| ಶಿವು ಗೆಳೆಯನ ಮನಃಸ್ಥಿತಿಗಾಗಿ ಮರುಗಿದ. ಇಬ್ಬರೂ ಮನೆಯ ಕಡೆ ಹೊರಟರು.

೦ ೦ ೦ ೦

ರಾಣಿ ವರಾಂಡದಲ್ಲಿ ಕುಳಿತು ಪರಿಸರದ ಪ್ರಕೃತಿಯ ಮೇಲೆ ದೃಷ್ಟಿ ಯನ್ನು ನೆಟ್ಟು ಭಾವನಾ ಪ್ರಪಂಚದಲ್ಲಿ ಮುಳುಗಿ ತೀವ್ರ ಆಲೋಚನಾಮಗ್ನ ಳಾಗಿದ್ದಾಳೆ. ಇತ್ತೀಚಿನ ತನ್ನ ಮಾನಸಿಕ ತುಮುಲವನ್ನು ಎಷ್ಟೇ ಪ್ರಯತ್ನಿ ಸಿದರೂ ಹತ್ತಿಕ್ಕಲಾಗದಿರಲು ಕಾರಣವೇನು ಎಂಬುದು ಜಿಹಾಸೆಗೆ ಕಾರಣ. ತನ್ನ ಮೂವತ್ತುನಾಲ್ಕು ವರುಷಗಳ ಜೀವಮಾನದಲ್ಲಿ ಎಂದೂ ಅನುಭವಿಸ ದಿದ್ದ ವಿಚಿತ್ರ ಅನುಭವ. ಅಗಾಧವಾದ ಮಾನಸಿಕ ಹಿಂಸೆ ಹುಟ್ಟಿದುದಾದರೂ ಹೇಗೆ ? ಅಂದಿಂದಿಗೂ ತಾನು ಪಡೆದುಕೊಂಡಿದ್ದ ಧೈರ್ಯ-ಉತ್ಸಾಹಗಳು ಲುಪ್ತವಾಗಲು ಕಾರಣವಾದರೂ ಏನು ಎಂಬುದು ಊಹಾತೀತ. ಇದೇಕೆ ಹೀಗೆ ? ಎಂಬುದು ತನ್ನ ಮುಂದಿನ ಬಹು ದೊಡ್ಡ ಪ್ರಶ್ನೆ.

ಡಾ|| ಕೃಪಾಲಿ ಮೆಟ್ಟಿಲೇರಿ ಬಳಿಗೆ ಬಂದಾಗಲೂ ಮಾನಸಿಕ ವಿವಶತೆ ಯಿಂದ ಕುಳಿತಿದ್ದುದನ್ನು ಕಂಡು ದಿಗ್ಭ್ರಮೆಯಿಂದ ನಿಂತುಬಿಟ್ಟಳು ಅವಳು. ಆಶ್ಚರ್ಯವಿಸ್ತೃತ ನೋಟ ಎವೆಯಿಕ್ಕದೆ ನೋಡಿತು. ಕೆಲವು ಕ್ಷಣಗಳು ಸದ್ದಿಲ್ಲದೆ ಉರುಳಿದುವು. ರಾಣಿ ನಿದ್ದೆಯಿಂದ ಎಚ್ಚೆತ್ತವಳಂತೆ ಡಾಕ್ಟರ ಕಡೆ ದೃಷ್ಟಿಯನ್ನು ಹೊರಳಿಸಿ ಕೇಳಿದಳು "ಏಕೆ ಡಾಕ್ಟರ್, ಹಾಗೆ ನಿಂತುಬಿಟ್ಟೆರಿ ?"

ಕೇಳಲಾರದೆ ಕೇಳಿದ್ದಳು ರಾಣಿ ; ಗಂಟಲ ಹಸಿ ಒಣಗಿದಷ್ಟು ಭಾರ ವಾದ ದನಿಯಲ್ಲಿ.

"ಏನಾಯಿತು ರಾಣಿ ? ಏಕೆ ಹೀಗೆ ಬೆಪ್ಪರಂತೆ ಕುಳಿತಿದ್ದಿ ? ಕೈಗೊಂದು ುಸ್ತಕವನ್ನಾದರೂ ತೆಗೆದುಕೊಳ್ಳಬಾರದೇ ? Idle mind ನಾನಾ ಚಿಂತೆ ಳಿಗೆ ಕಾರಣ. ನೀನು ತಲೆಗೆ ಏನೇನೋ ಹಚ್ಚಿಕೊಂಡಿದ್ದಿ ? ಹೀಗಾದರೆ ರೋಗ್ಯ ದಿನದಿನ ಕೆಡುವುದು ಖಂಡಿತ. ಅಪರೂಪದ ಗರ್ಭ ಧರಿಸಿದ್ದಿ... ಾಯಿಯಾಗಲಿರುವ ನೀನು ಎಷ್ಟು ಉಲ್ಲಾಸದಿಂದ ಇರಬೇಕು ? ? ಹತ್ತು ರ್ಷಗಳ ನಂತರ ಬರುವ ಮಗುವಿಗೆ ಸಂತಸದಿಂದ ಸ್ವಾಗತ ನೀಡಬೇಡವೇ ? ನ್ನ attitude ಏನೇನೂ ಸರಿಯಿಲ್ಲ." ಧ್ವನಿ ಖಡಾಖಂಡಿತವಾಗಿ ಹೊರ ುತ್ತು. ಅಸಮಾಧಾನದಿಂದ ನುಡಿದಳು ಡಾ॥ ಕೃಪಾಲಿ.

"ಹೀಗೆ ಬನ್ನಿ ಡಾಕ್ಟರ್. ನೀವು ನಿಂತೇ ಮಾತಾಡುತ್ತಿದ್ದೀರಿ. ಬನ್ನಿ, ಬನ್ನಿ."

ರಾಣಿ ತಡವರಿಸುತ್ತ ಡಾಕ್ಟರನ್ನು ಬರಮಾಡಿಕೊಂಡ ಬಳಿಕ ನುಡಿದಳು,

"ಸಧ್ಯ, ನನ್ನ ಗ್ರಹಚಾರವೇ ಸರಿಯಿಲ್ಲವೇನೋ....ಅಥವಾ ಯಾವ ುಮಗಂಡ ಒದಗಲಿದೆಯೋ....ಅಂತೂ ಮಾನಸಿಕವಾಗಿ ನಾನು ಸೋತು ಹೋಗಿರುವುದು ಖಂಡಿತ. ಏನೋ ಒಂದು ಬಗೆಯ ಯೋಚಿಸಿದರೂ ಅರ್ಥ ಾಗದ ಹಿಂಸೆ ಜೀವಕ್ಕೆ. ಏನು ಕಾರಣವೋ ಅರಿತುಕೊಳ್ಳಲಾರೆ. ಡಾಕ್ಟರಾದ ೀವೇ ಅರ್ಥೈಸಿ ಚಿಕಿತ್ಸೆ ನೀಡಬೇಕು. ಅದಕ್ಕಿಂತ ಹೆಚ್ಚಿಗೇನನ್ನೂ ಹೇಳ ಾರೆ."

"ನೋಡು ರಾಣಿ, ನೀನು ಮಾನಸಿಕ ತುಮುಲದಿಂದ ನರಳುತಿದ್ದಿ. ಮಾನಸಿಕ ಶೈಥಿಲ್ಯಕ್ಕೆ ಸ್ವಲ್ಪವೂ ಅವಕಾಶ ಕೊಡದಂತೆ ವಿವಿಧ ಕಾರ್ಯಕ್ರಮ ಳನ್ನು ಹೊಮ್ಮಿಕೊ. ಅದರಿಂದ ನಿನಗೆ ಎಷ್ಟೋ ಸಹಾಯವಾಗುತ್ತದೆ. ೀಗೆ, ಚಿಂತಿಸುತ್ತಾ ಕುಳಿತುಕೊಂಡರೆ ಅದಕ್ಕೆ ಕೊನೆಯೇ ಇಲ್ಲ. ಇದರಿಂದ ೀಡೆ ಹೊರತು ಪರಿಹಾರವಿಲ್ಲ."

ತಲೆಯಾಡಿಸುತ್ತ ಗಂಭೀರವಾಗಿ ನುಡಿದಳು ಡಾ॥ ಕೃಪಾಲಿ.

o o o o

ಪ್ರಯೋಗಶಾಲೆಯ ಕಿಟಕಿಗಳು ಹರವಾಗಿ ತೆರೆದಿದ್ದುವು. ಮೇಜಿನ ಮುಂದೆ ಕುಳಿತ ಡಾ॥ ಶೈನಿ ತೀವ್ರ ಆಲೋಚನಾಮಗ್ನನಾಗಿದ್ದಾನೆ, ತಲೆ

ಯಲ್ಲಿ ವೈಜ್ಞಾನಿಕ ವಿಶೇಷವೇ....

ಪ್ರಸ್ತುತ, ನಾಗರಿಕತೆ–ನವನವೀನ ವೈಜ್ಞಾನಿಕತೆ ಪೂರ್ವಸಿದ್ಧತೆಯ ಆಲೇಖ್ಯಾನುಸಾರ ನಡೆಯಬೇಕು ಅಥವಾ ನಡೆಸಲ್ಪಡುತ್ತದೆ ಎಂದೇನಿಲ್ಲ. ಹೆಜ್ಜೆ ಹೆಜ್ಜೆಗೂ ತನ್ನದೇ ಆದ ವಿಶಿಷ್ಟ ಪ್ರಗತಿಯು ಹೊಸ ಹೊಸ ಪ್ರಕೃತಿ ಮೂಡುತ್ತದೆ ಜಾಗತಿಕ ಮನೋವಿಕಾಸದಿಂದ. ಆದ್ದರಿಂದ ಮುಂದೆ ಭವ್ಯ ಭವಿತವ್ಯದಲ್ಲಿ ಏನೇನು ಸಂಭವಿಸುತ್ತದೆ ಅಥವಾ ಸಂಭವಿಸಲಿದೆ ಎಂಬುದಂತೂ ಇಂದು ಊಹಾತೀತ. ಮುಂದಿನ ನಾಗರಿಕ ಸೃಷ್ಟಿಯನ್ನು ಸ್ವತಃ ವಿಜ್ಞಾನಿಗಳೂ ಓದಲಾರರು ಹಾಗೂ ಊಹಿಸಲಾರರು ಕೂಡ. ಯಾದೃಚ್ಛಿಕತೆಯ ಸಂತೆಯಲ್ಲಿ ಯಾವುದೇ ಖಚಿತತೆಗೆ ಎಡೆಯಿರುವುದಿಲ್ಲ. ಅಂದಮೇಲೆ, ಪ್ರಾಚೀನ ಪ್ರವಚನಗಳು ಧರ್ಮ ಜೀವನದ ಮೌಲಿಕಗಳ ಹೊರತಾಗಿ ಅರ್ವಾಚೀನ ಬದುಕಿಗೆ ಪ್ರಸ್ತುತವಾಗುವುದು ಹೇಗೆ? ದಿವ್ಯ ನಂಬಿಕೆಯು ಸರ್ವಜ್ಞತೆ ಸತ್ಪಾತ್ರ ವಹಿಸಬಲ್ಲುದೇ ಇಂದು ? 'ನನ್ನನ್ನು ಸರ್ವಾರ್ಪಣ ಮನೋಭಾವದಿಂದ ನಂಬು' ಎಂಬುದು ಧಾರ್ಮಿಕ ಮುಖಂಡರ ಸಂತತ ಪಲ್ಲವಿ.

ಆದರೆ...

ಪ್ರಭುತ್ವ–ಧರ್ಮ–ವಿಜ್ಞಾನ–ನಾಗರಿಕತೆಗಳಲ್ಲಿ ಆಂತರಿಕ ಸಂಬಂಧಗಳು ಹೇಗಿರುತ್ತವೆ ? ನಾಗರಿಕ ಇತಿಹಾಸಾವಲೋಕನದಿಂದ ಸ್ಪಷ್ಟವಾಗುವ ಸಂಗತಿಯೆಂದರೆ, ಪ್ರಭುತ್ವ ಧರ್ಮದ ಸಹಕಾರದಿಂದ ವಿಜ್ಞಾನವನ್ನು ಅಸ್ತ್ರವಾಗಿ ಬಳಸಿಕೊಂಡಿರುವ ಸತ್ಯ........ಪ್ರಾಚೀನ ಕಾಲಮಾನದಿಂದ ನಡೆದ ಧರ್ಮಯುದ್ಧಗಳು ಮತೀಯ ಕಲಹಗಳು ಇವುಗಳೇ ಜ್ವಲಂತ ನಿದರ್ಶನಗಳು ಎನ್ನಬಹುದು ವಿಜ್ಞಾನದ ಸವಾಲಿಗೆ. ಪ್ರಭುತ್ವವೂ ವಿಜ್ಞಾನವೂ ಸಹಕರಿಸಿ ಧರ್ಮವನ್ನು ಸದೆಬಡಿದ ನಿದರ್ಶನಕ್ಕೂ ಕೊರತೆಯಿಲ್ಲ, ಎರಡನೆಯ ಮಹಾಯುದ್ಧದ ಒಂದು ಮುಖ್ಯ ಸ್ಫೋಟಕಾರಕವೆಂದರೆ ಜರ್ಮನ್ ಪ್ರಭುಗಳಿಗೆ ಯಹೂದ್ಯರ ವಿರುದ್ಧ ಧಗಧಗಿಸುತಿದ್ದ ದ್ವೇಷ.

ಪರಂತು, ಧರ್ಮ ಮತ್ತು ವಿಜ್ಞಾನಗಳು ಸಹಕರಿಸಿ ಪ್ರಭುತ್ವವನ್ನು ಎದುರಿಸಿದ್ದಾಗಲೀ ಅಥವಾ ಬೆಂಬಲಿಸಿದ್ದಾಗಲೀ ಎಲ್ಲಿಯೂ ಕಂಡುಬರುವುದಿಲ್ಲ. ಜ್ಞಾನನಿಷ್ಠತೆ–ಜ್ಞೇಯನಿಷ್ಠತೆಗಳ ಮಧ್ಯೆ ಹೇಗೆ ತಾನೇ ಸಾಮರಸ್ಯ ನೆಲೆಸೀತು ? ಅದು ಬಹು ಮುಖ್ಯ ಪ್ರಶ್ನೆ.

ಮನುಕುಲದಲ್ಲಿ ವಿವಿಧ ಇಂದ್ರಿಯಗಳು ಉತ್ಪಾದಿಸುವ ಆಂತರಿಕ ಪ್ರೇರಣೆಗಳ ಜೊತೆಗೆ ಅತ್ಯಂತ ಬಲಿಷ್ಠ ಸಾರ್ವತ್ರಿಕ ಬಲಗಳು ಇಲ್ಲಿವೆ. ಧಾರ್ಮಿಕ ಅಂತರ್ಬೋಧಗಳಿಂದ (Intutions) ಸಂಜನಿಸುವ ಬಲ ಮತ್ತು ನಿಖರ ವೀಕ್ಷಣೆಯನ್ನೂ ತಾರ್ಕಿಕ ನಿಗಮವನ್ನೂ (deduction) ಮಾಡುವಂತೆ ಪ್ರೇರಣೆ ನೀಡುವ ಅಂತರಿಕ ಬಲ...

ಮನದೋಟ ಓಡುತ್ತಲೇ ಇತ್ತು. ಡಾ॥ ಶೈನಿ ಎಡಗೈದಳದ ಮೇಲೆ ಶಿರೋಭಾರವನ್ನಿಳುಹಿದ್ದಾನೆ. ಮನಃಚಿತ್ತಗಳ ತರ್ಕವಿತರ್ಕವನ್ನು ಅವಲೋಕಿಸಿದ.

ವಿಜ್ಞಾನ ನಾಗರಿಕ ಜಗತ್ತಿಗೆ ನೀಡುತ್ತಿರುವ ತಾಂತ್ರಿಕ ಜ್ಞಾನ ಸಾಮಾನ್ಯವೇನೂ ಅಲ್ಲ. ಆದರೆ....

ಡಾ॥ ಶೈಲಿ ನೀಳವಾದ ಬಿಸಿಯುಸಿರು ಹೊರ ಹಾಕಿದ.

o o o o

ಮಧ್ಯರಾತ್ರಿ ಕಳೆಯಿತು. ಇಂದ್ರ ಮುಹೂರ್ತ ಅಡರುತ್ತಿದೆ.

ನಿದ್ದೆಯ ಮಂಪರದಲ್ಲಿ ಕನಸಿನ ಲೋಕ.

ರಾಣಿ ಪ್ರಾಂಗಣದ ಸುಂದರ ಉದ್ಯಾನದಲ್ಲಿ ಸಾನಂದದಿಂದ ಅಡ್ಡಾಡುತಿದ್ದಾಳೆ. ವರ್ಣವರ್ಣಾಂತ ಹೂವುಗಳ ಹೇರಾಶಿಯು ಮಧ್ಯೆ ಮನಃಚಿತ್ತಗಳು ಸುಖಾನಂದಮಯದಿಂದ ಮಿಡಿಯುತ್ತಿವೆ. ಭಾವನಾವೇಶದಿಂದ ಮೈಮರೆತು ಜಗ ಮರೆತು ಪದಚಾರಣ ಮಾಡಿದಳು ರಾಣಿ- ಕುಂಟುಗಾಲಿನ ಮಾಲಿ ನೀರೆರೆಯಲು ಬಿಂದಿಗೆಯ ಸಹಿತ ಎದುರಾದ. ಅವನ ಕಾಲಿನ ಕಡೆ ನೋಡಬಾರದೆಂದು ಇತ್ತ ದೃಷ್ಟಿ ಹೊರಳಿಸಿದರೆ ಅಲ್ಲೊಂದು ಕುಂಟುನಾಯಿ...!

"ಛಿಃ !" ಎಂದು ಒದರಿದಳು ರಾಣಿ.

ಒಡನೆ ಎಚ್ಚರವಾಗಿ ಕನಸೊಡೆಯಿತು. ಕಣ್ಣು ಬಿಟ್ಟು ನೋಡುತ್ತಾಳೆ. ಅಕ್ಷಿಪಟಲದ ಮೇಲೆ ಅದೇ ಚಿತ್ರ ಘನೀಕರಿಸಿದೆ. ಆ ಕುಂಟುನಾಯಿ, ಆ ಕುಂಟು ಮನುಷ್ಯ ಬೇಡವೆಂದರೂ ಮನೋಭಿತ್ತಿಯಿಂದ ಅಳಿಸಿ ಹೋಗಲೊಲ್ಲವು. ನಾನು ತೋಟದ ಚಿತ್ರವನ್ನು ಮಲಗುವ ಮುನ್ನ ಜ್ಞಾಪಿಸಿ

ಕೊಂಡುದುದು ತಪ್ಪಾಯ್ತು....ಎಂದು ಹಳಹಳಿಸಿತು ಮನಸ್ಸು. ಆಯ ತಪ್ಪಿ ಮಿಡಿಯ ಹತ್ತಿತು ಹೃದಯ. ಅವನು ಕುಂಟನೇ ಇರಲಿ, ಕುರುಡನೇ ಇರಲಿ ನನ್ನ ಮನಸ್ಸಿಗೇಕೆ ಅಂಟಿಕೊಳ್ಳಬೇಕು ? ಎಂಬುದು ಯೋಚನಾತೀತ...... ಯಾಕೋ ಏನೋ ಈಚೀಚೆಗೆ ಇಂಥ ಸಣ್ಣ ಸಣ್ಣ ವಿಚಾರಗಳೆಲ್ಲಾ ಬೃಹದಾಕಾರವಾಗಿ ಬೆಳೆದು ಮನಃಚಿತ್ತಗಳನ್ನು ಆಕ್ರಮಿಸಿ ರುದ್ರ ಭೀಷಣ ಧಾಳಿ ಎಬ್ಬಿಸಿಬಿಡುತ್ತವೆ. ಅದಕ್ಕೆ ಕೊನೆ ಮೊದಲೇ ಇಲ್ಲ. ಕಾರಿನಲ್ಲಿ ವಾಯು ವಿಹಾರ ಹೊರಟರೂ ಅಷ್ಟೆ. ಮೊಟ್ಟಮೊದಲು ಕಣ್ಗೆಸೆವ ಚಿತ್ರ ವಿಕಾರ ರೂಪಿನದು, ಮ್ಯಾಗಜಿನ್ ತೆರೆದರೆ ಸಾಕು...ಕಣ್ಣಿಗೆ ಬೀಳುವುದು ವಕ್ರ ಚಿತ್ರವೇ. ಅವನ್ನು ನೋಡಬಾರದೆಂದು ಪ್ರಯತ್ನಿಸಿದರೂ ಕಣ್ಣುಗಳು ವಂಚಿಸುತ್ತವೆ....ಒಡಲಲ್ಲಿ ಏನೋ ಒಂದು ಬಗೆಯ ಸಂಕಟ. ಇನ್ನೇನೋ ಒಂದು ತರದ ಕಳವಳ. ಮತ್ತೇನೋ ಒಂದು ರೀತಿಯ ಜುಗುಪ್ಸೆ. ಎಲ್ಲವೂ ಮನಃ ಪ್ರಾಣಗಳನ್ನು ತಲ್ಲಣಗೊಳಿಸುತ್ತವೆ. ರಾಣಿ ಚಿಂತಾಕ್ರಾಂತಳಾಗುತ್ತಾಳೆ. ದೈಹಿಕ ಶಕ್ತಿಯೆಲ್ಲಾ ಸೋರಿ ಹೋದಂತೆ ಮೈಕೈ ಸೋಲು-ಸುಸ್ತು-ಸಂಕಟ.

ರಾಣಿ ಇಂಥ ಸಂದರ್ಭಗಳಲ್ಲಿ ಮ್ಲಾನಮುಖಿಯಾಗಿ ಪಲ್ಲಂಕದ ಮೇಲೆ ಅಡ್ಡಾಗುವಳು. ತಾಸುಗಳು ಉರುಳಿ ಹೋಗುವುದೇ ತಿಳಿಯದಷ್ಟು ದುಗುಡ ಮನಸ್ಸಿಗೆ.

ಂ ಂ ಂ ಂ

ಡಾ|| ಶೈನಿ ಪ್ರಯೋಗ ಶಾಲೆಯ ಆಫೀಸಿನಲ್ಲಿ ಮೇಜಿನ ಮುಂದೆ ಮಂಡಿಸಿದ್ದಾನೆ. ಕಾಗದ ಲೇಖನಿ ಸಜ್ಜಾಗಿವೆ. ಸ್ವಲ್ಪ ಹೊತ್ತು ಶಿರೋಭಾರವನ್ನು ಎಡಗೈದಳದಮೇಲೆ ಇಳುಹಿ ಆಲೋಚನಾ ಶೀಲನಾದ. ಮನಃಪಕ್ಷಿ ವಿಶ್ವ ಜಗತ್ತಿನಗಲ ಹಾರಾಡಿತು. ವಿಜ್ಞಾನಯುಗೀಯ ನಾಗರಿಕತೆ ಚಿತ್ರವತ್ತಾಗಿ ಮೂಡಿ ನಿಂತಿತು ಚಿತ್ತಭಿತ್ತಿಯಲ್ಲಿ. ಸ್ವಲ್ಪ ಹೊತ್ತು ಸದ್ದಿಲ್ಲದೆ ಉರುಳಿ ಹೋಯಿತು.

ಡಾ|| ಶೈನಿ ಲೇಖನಿಯನ್ನು ಕೈಕೊಂಡ. ಬಿಳಿಯ ಹಾಳೆಯ ಮೇಲೆ ಕರಿಯ ಮಸಿಯೊರತೆ ಹರಿಯತೊಡಗಿತು, ಸುಲಲಿತವಾಗಿ. ಪರಮಾಣು ವಿಕಿರಣ ವಸ್ತುಗಳನ್ನು ಕುರಿತು.........

# ಪರಮಾಣು ವಿಕಿರಣ ವಸ್ತುಗಳು

....ಪರಮಾಣು ವಿಕಿರಣ ವಸ್ತುಗಳು ಎಲ್ಲಾ ಹಂತಗಳಲ್ಲಿಯೂ ಸೋರುವಿಕೆ ಇದ್ದೇ ಇರುತ್ತದೆ. ಆಗಾಗ್ಗೆ ನಡೆವ ಅಪಘಾತಗಳಿಗಿಂತಲೂ ವಿಷಪ್ರಾಯ ಎಂದರೆ ತಪ್ಪಲ್ಲ. ಗಾಳಿ, ನೀರು, ಆಹಾರ ಪದಾರ್ಥಗಳ ಮುಖೇನ ಜೀವಕೋಟಿಯ ದೇಹಗಳಿಗೆ ಸೇರುತ್ತಿವೆ.

....ಪರಮಾಣು ಸ್ಥಾವರಗಳಲ್ಲಿ ವಿದ್ಯುತ್ ಉತ್ಪಾದನೆಯಲ್ಲಿ ಯುರೇನಿಯಂ ಅಥವಾ ಪ್ಲುಟೋನಿಯಂ ಒಡೆದಾಗ ವಿದ್ಯುತ್ ತಯಾರಿಸುವ ಸಂದರ್ಭದಲ್ಲಿ ಭಾರಿ ಪ್ರಮಾಣದಲ್ಲಿ ಮುವತ್ತಾರು ವಸ್ತುಗಳ ಇನ್ನೂರು ಐಸೊಟೋಪುಗಳೂ ಉತ್ಪತ್ತಿಯಾಗುತ್ತವೆ. ಈ ವಸ್ತುಗಳಲ್ಲಿ ಆಶ್ಚರ್ಯವಿಶೇಷವೆಂದರೆ ಕೆಲವು ಹತ್ತಾರು ಲಕ್ಷ ವರ್ಷಗಳು ಪರಿಸರದಲ್ಲಿ ಉಳಿದು ಮಾನವರಿಗೂ ಮತ್ತೆಲ್ಲಾ ಜೀವಕೋಟಿಗೂ ಮಾರಕವಾಗುತ್ತವೆ. ಈ ರೀತಿಯಲ್ಲಿ ಉತ್ಪತ್ತಿಯಾಗುವ ವಿಕಿರಣಶೀಲ ವಸ್ತುಗಳಲ್ಲಿ ಪ್ಲುಟೋನಿಯಂ ಒಂದು ಅತಿ ಮುಖ್ಯವಾದ ವಸ್ತು. ಇದು ಪರಿಸರದಲ್ಲಿ ಅಪರೂಪವಾಗಿರುವ, ಪ್ರಪಂಚದಲ್ಲಿರುವ ಎಲ್ಲ ವಸ್ತುಗಳಿಗಿಂತಲೂ ಅತ್ಯಂತ ವಿಷಪ್ರಾಯವಾದ ಮಾನವ ನಿರ್ಮಿತ ವಸ್ತು. 1,000,000,000,000 ಭಾಗವಿರುವ ಗಾಳಿಯಲ್ಲಿ ಒಂದೇ ಒಂದು ಭಾಗ ಪ್ಲುಟೋನಿಯಂ ಇದ್ದರೂ ಮಾನವನಿಗೆ ಹಾನಿಕರ. 4-5 ಕೆ-ಜಿ.ಯಷ್ಟು ಪ್ಲುಟೋನಿಯಂ ಪ್ರಪಂಚದಲ್ಲಿರುವ ಎಲ್ಲ ಮನುಷ್ಯರನ್ನು ಕೊಲ್ಲುವ ಸಾಮರ್ಥ್ಯ ಹೊಂದಿರುತ್ತದೆ, ಎಂದರೆ ವಿಶೇಷವಲ್ಲ ....

ಮೇಜಿನ ಮೇಲಿನ ಟೆಲಿಫೋನ್ ಕರೆ ನೀಡಿತು.

ಟ್ರೆಣ್, ಟ್ರೆಣ್, ಟ್ರೆಣ್, ಟ್ರೆಣ್,

ಲೇಖನಿಯನ್ನು ಬಿಟ್ಟು ಮೌತ್ ಪೀಸ್ ಎತ್ತಿಕೊಂಡು "ಹಲೋ" ಎಂದ, ಡಾ|| ಶೈನಿ.

"ಹಲೋ .... !"

"ಡಾ|| ಶೈನಿ ಮಾತಾಡುತ್ತಿರುವೆ."

"ನಾನು ಆಯಾ ಮಾತಾಡುತ್ತಿರುವೆ ಸ್ವಾಮಿ! ಅಮ್ಮಾವರು ನಿಮ್ಮನ್ನು ಬರ ಹೇಳಿದ್ದಾರೆ."

"ಏಕೆ? ಚೆನ್ನಾಗಿದ್ದಾರೆ ತಾನೇ?"

"ಅಷ್ಟು ಚೆನ್ನಾಗಿಲ್ಲ. ಅದಕ್ಕೆ ನಿಮ್ಮನ್ನು ಬರ ಹೇಳಿದ್ದು."

"ಓ....ಈಗಲೇ ಬಂದೆ. ಅಮ್ಮನವರಿಗೆ ಹೇಳು?"

ಡಾ|| ಶೈನಿ ತಕ್ಷಣ ಹೊರಟು ಬಿಟ್ಟ.

೦ ೦ ೦ ೦

ಕಾರು ಹತೋಟಿ ತಪ್ಪಿದಂತೆ ರಸ್ತೆಯ ತುಂಬ ಹರಿದಾಡಿತು. ಹದಿನೈದು ನಿಮಿಷಗಳ ಹಾದಿಯನ್ನು ಐದಾರು ನಿಮಿಷಗಳಲ್ಲಿ ಕಳೆದಿದ್ದನೇನೋ. ಕಾರು ಪೋರ್ಟಿಕೋಕ್ಕೆ ಬರುತ್ತಲೂ ಗಕ್ಕನೆ ನಿಂತಿತು. ಡಾ|| ಶೈನಿ ದಡದಡನೆ ಮೆಟ್ಟಿಲು ಹತ್ತಿ ಒಳಹೋದ. ರಾಣಿ ಪಲ್ಲಂಕದ ಮೇಲೆ ಅಸ್ತವ್ಯಸ್ತವಾಗಿ ಮಲಗಿದ್ದಾಳೆ. ಮುಖಬಿಂಬ ತೊಟ್ಟು ಕಳೆದ ಹೂವಿದಂತೆ ಬಾಡಿಹೋಗಿದೆ. ಡಾ|| ಶೈನಿ ನೈ ಬಾಗಿ ಕೈ ಹಿಡಿದುಕೊಂಡು ಬಲ್ಮೆ-ಕರುಣೆಗಳಿಂದ ಕೇಳಿದ "ರಾಣೀ! ಏನು ತೊಂದರೆ? ಏಕೆ ಹೀಗಿದ್ದಿ? ಡಾಕ್ಟರಿಗೆ ತಿಳಿಸಿರುವೆಯಾ? ನಾನೇ ಕರೆಯಲೀ?"

ಪ್ರಶ್ನೆಗಳು ಮೇಲಿಂದ ಮೇಲೆ ಏಳುತ್ತಲೇ ಇವೆ. ಅವಳು ಅಶ್ರುಪೂರ್ಣ ಲೋಚನಗಳಿಂದ ನೋಡುತ್ತ "ಶೈನೀ.... ಹೊಟ್ಟೆ ನೋಯುತ್ತಲಿದೆ.... ಆಗಲೇ ಡಾಕ್ಟರಿಗೂ ಹೇಳಿದ್ದಾಗಿದೆ. ಈಗ ಬರಬಹುದು ಅವರು."

"ನೀನು ಧೈರ್ಯಗೆಡಬೇಡ. ಡಾಕ್ಟರುಕೊಟ್ಟ ತಾರೀಖಿಗೆ ಇನ್ನೂ ಎರಡುವಾರ ಸಮಯವಿದೆ ಅಲ್ಲವೇ? ನೋಡೋಣ, ಡಾಕ್ಟರು ಬರಲಿ. ಕೆಲವೊಮ್ಮೆ ಲೆಕ್ಕಾಚಾರ ಏರುಪೇರಾಗುತ್ತದೆ."

ಕೆಲವು ನಿಮಿಷಗಳೊಳಗಾಗಿ ಲೇಡಿ ಡಾಕ್ಟರು ಬಂದು ದೈಹಿಕ ಪರೀಕ್ಷೆ ನಡೆಸಿದ ನಂತರ ಆಸ್ಪತ್ರೆಗೆ ಕರೆದೊಯ್ದಳು. ಅಂದು, ನೋವು ಅಲ್ಲಿಗೇ ಶಮನವಾಯಿತು. ರಾಣಿ ಹಗುರವಾಗಿ ಓಡಾಡಿಕೊಂಡಿದ್ದು ಸಾಯಂಕಾಲ ಮನೆಗೆ

ಹಿಂದಿರುಗಿದಳು. ತಾಯಿಯಾಗಲಿರುವ ಗೃಹಿಣಿಗೆ ಇರಬೇಕಾದ ಸಂತಸ–ಉತ್ಸಾಹಗಳು ಇಲ್ಲವೇ ಇಲ್ಲ. ಒಡಲಲ್ಲಿ ಪರಿತಾಪವೋ ನೋವೋ ಸಂಕಟವೋ ಇನ್ನಾವುದೋ ತೀವ್ರತರವಾಗಿ ಕೊರೆಯುತ್ತಿದೆ ಎಂಬುದು ಮ್ಲಾನ ಮುಖ ಮುದ್ರೆಯಲ್ಲಿ ಸುಸ್ಪಷ್ಟ.

ಡಾ|| ಶೈನಿ ಸ್ವಲ್ಪ ಹೊತ್ತು ಮೌನಗತಿಯಲ್ಲಿ ಅವಳ ಸ್ಥಿತಿಗತಿಯನ್ನು ಅವಲೋಕಿಸಿ ಕರುಣ ಕಾತರ ಸ್ವರದಿಂದ ನುಡಿದ "ರಾಣೀ, ನೀನು ವಿನಾ ಕಾರಣ ಕೊರಗು ಹಚ್ಚಿಕೊಂಡು ನಿನ್ನನ್ನೇ ನೀನು ಹಿಂಸಿಸುತಿದ್ದಿ. ಇದು ಖಂಡಿತ ಸರಿಯಲ್ಲ. ಸುಖದುಃಖಗಳೆರಡೂ ನಿನ್ನೊಳಗಿವೆ. ನೀನು ಯಾವುದನ್ನು ಆರಿಸಿಕೊಳ್ಳುತ್ತೀಯೋ ಅದು ನಿನಗೆ ದಕ್ಕುತ್ತೆ. ನೀನು ಸದಾ ನಗುನಗುತ್ತ ಸಂತೋಷಿಯಾಗಿರು. ಸಂತೋಷವೇ ನಿನ್ನ ಸಂಗಾತಿಯಾಗಲಿ."

ರಾಣಿ ಹುಸಿನಗೆ ಬೀರಿದಳು ಜಾಹೀರಾತಿಗೆ ಬೀರುವ ಕೃತಕ ನಗೆಯಂತೆ. ಅನಂತರ ತನ್ನನ್ನು ತಾನು ಸಾವರಿಸಿಕೊಳ್ಳುತ್ತ ನುಡಿದಳು ಅವಳು,

"ಪ್ರಪಂಚದ ಹಿರಿಯ ರಾಷ್ಟ್ರಗಳೆಲ್ಲ ಎಂದೋ ಅಣುಸ್ಥಾವರಗಳನ್ನು ಸಂಸ್ಥಾಪಿಸಿವೆ. ಇದರಿಂದ ಜೀವನ ಪರಿಸ್ಥಿತಿ ತೂಗುಯ್ಯಾಲೆಯೇರುವುದು ಸಹಜ. ಇದನ್ನೆಲ್ಲಾ ಧೀಮಂತರು ಏಕೆ ಯೋಚಿಸುವುದಿಲ್ಲ ? ನೀವಂತೂ ಈ ದಿಶೆಯಲ್ಲಿ ಅಪರಾಧಿ ಎನ್ನಲೇ ಬೇಕು."

"ಅದು ನಿಜ ಡಾರ್ಲಿಂಗ್. ನಮ್ಮ ಹೆಜ್ಜೆ ಪ್ರಗತಿಯ ಪಾಲು. ನಾವು ಎಲ್ಲೆಲ್ಲಿ ಯಾವಯಾವ ದಿಶೆಯಲ್ಲಿ ಮುಂದುವರಿಯಬೇಕೋ ಅಲ್ಲೆಲ್ಲಾ ಅಡ್ಡಗಾಲು ಹಾಕುವುದು ಕಷ್ಟವೇ. ಹಿರಿಯ ರಾಷ್ಟ್ರಗಳ ಸಾಲಿನಲ್ಲಿ ನಿಂತಾಗ ನಾವು ಹಿಂದುಳಿಯುವುದು ಶೋಭೆಯಲ್ಲ. ನಾನೂ ಅಣು ಸ್ಥಾವರದ ವಿರೋಧಿಯೇ .... ಆದರೇನು ? ಕಾಲೋಚಿತವಾಗಿ ನಾವು ನಡೆಯಬೇಕಾಗುತ್ತದೆ."

ರಾಣಿ ಸ್ವಲ್ಪಹೊತ್ತು ಮಾತಾಡಲಿಲ್ಲ. ತನುಮನಗಳು ಗಂಭೀರ ಮೌನ ತಾಳಿದುವು. ಮುಖದ ಮೇಲೆ ಬೆವರಿನ ಹನಿಗಳು ತುಂತುರು ತುಂತುರಾಗಿ ಮೂಡಿದುವು. ಡಾ|| ಶೈನಿ ಹಣೆಯಮೇಲಿನ ಹನಿಗಳನ್ನು ಕರವಸ್ತ್ರದಿಂದ

ಒತ್ತಿದ. ಅವಳು ಆ ಕೈಯನ್ನು ಹಾಗೇ ಒತ್ತಿ ಹಿಡಿದುಕೊಂಡು ಹೇಳಿದಳು "ಈ ಕಾಲದಲ್ಲಿ ಕ್ಯಾನ್ಸರ್, ಅಸ್ತಮಾ, ಕ್ಷಯ, ಶಂಡತನ, ಗರ್ಭಸ್ರಾವ, ವಿಕೃತ ಮಕ್ಕಳ ಜನನ ಇವಕ್ಕೆಲ್ಲಾ ಅಣು ವಿಕಿರಣಗಳು ಕಾರಣ. ಗ್ಯಾಮ ಕಿರಣಗಳು ನೂರಾರು ಕಿಲೋಮೀಟರ್ ದೂರದಲ್ಲಿ ಉತ್ಪತ್ತಿಯಾದರೂ ಒಂದು ಸೆಕೆಂಡಿಗೆ 300,000 ಕಿಲೋಮೀಟರ್ ವೇಗದಲ್ಲಿ ಚಲಿಸಿ ಮಾನವರ ದೇಹಗಳಿಗೆ ನುಗ್ಗಿ ಹೊರಕ್ಕೆ ಬಂದು ಬಿಡುತ್ತದೆಯಲ್ಲದೆ ಜೀವಕೋಶಗಳಿಗೆ ಹಾನಿಯುಂಟು ಮಾಡುವುದು ಸತ್ಯ. ಗ್ಯಾಮ ಕಿರಣಗಳು ದಪ್ಪನಾದ ಸೀಸದ, ಉಕ್ಕಿನ ಅಥವಾ ಕಾಂಕ್ರೀಟ್ ಗೋಡೆಗಳನ್ನೂ ತೂರಬಲ್ಲ ಶಕ್ತಿಹೊಂದಿದೆಯೆಂದರೆ ಸಾಮಾನ್ಯ ವಲ್ಲ. ಅಣುವಿಕಿರಣ ಉತ್ಪತ್ತಿ ಮಾಡಬಲ್ಲವರು ಅದರೊಂದಿಗೇನೇ ಸುಲಭ ನಿವಾರಣೋಪಾಯವನ್ನೂ ಕಂಡುಕೊಳ್ಳಬೇಕಲ್ಲದೆ ಉತ್ಪತ್ತಿ ಮಾಡುತ್ತಲೇ ಇದ್ದಾರೆ. ವಿಕಿರಣಶೀಲ ಕಸವನ್ನು ಸಮುದ್ರಕ್ಕೆಸೆದು ಅದು ಮತ್ಸ್ಯಾಹಾರದ ಅಥವಾ ಇನ್ನಾವುದೇ ರೀತಿಯ ಮುಖೇನ ನಮ್ಮ ದೇಹಕ್ಕೆ ಸೇರುವಂತೆ ಮಾಡುತ್ತದೆ ವಿಜ್ಞಾನ. ಇದನ್ನೆಲ್ಲಾ ನಿಮ್ಮಂತಹ ಯುವ ವಿಜ್ಞಾನಿಗಳು ಸಂಶೋಧನೆ ನಡೆಸಿ ನಿವಾರಿಸಬೇಕು. ಇಲ್ಲದಿದ್ದಲ್ಲಿ ನಾವು ಮಾಡಿದ್ದನ್ನು ನಾವೇ ಉಣ್ಣಬೇಕಾಗುತ್ತದೆ." ಎಂದಳು ರಾಣಿ ಭಾರಭಾರವಾದ ದನಿಯಲ್ಲಿ. ಮುಖಬಿಂಬ ಪರಿಮ್ಲಾನವಾಯಿತು.

ಡಾ|| ಶೈನಿ ಆಲೋಚನಾಶೀಲನಾದ. ಸ್ವಲ್ಪಹೊತ್ತು ಮಾತಾಡಲಿಲ್ಲ, ಅನಂತರ ತನ್ನ ಅಭಿಪ್ರಾಯವನ್ನು ಹೊರಹಾಕಿದ, "ಈಗ ಜಗತ್ತು ನಡೆಯುತ್ತಿಲ್ಲವೇ ? ಎಲ್ಲರೂ ನಿನ್ನಂತೆ ಕೊರಗುತ್ತ ಇರುತ್ತಾರೆಯೆ ? ಜನನ-ಮರಣ, ಸುಖ-ದುಃಖ ಯಾವತ್ತೂ ಇದ್ದೇ ಇರುತ್ತದೆ. ಅದಕ್ಕೇಕೆ ಚಿಂತೆ ?"

o o o o

ಒಂದು ವಾರದನಂತರ ರಾಣಿಗೆ ಸುಖ ಪ್ರಸವವಾಯಿತು.

ಮಗುವನ್ನು ನೋಡುತ್ತಲೇ ಚಿಟ್ಟನೆ ಚೀರಿದಳು ಅವಳು.

— o —

# ಸೋಮಾಲಿ

೫

ಹೊ....ನ್ನೂ....ರು.

ಹೆಸರು ಹೊನ್ನೂರಾದರೂ ತುಂಬಾ ಹಿಂದುಳಿದ ಊರು. ಇಂದ್ರಗಿರಿಯ ತಪ್ಪಲಿನ ಸಾನು ಪ್ರದೇಶದಲ್ಲಿ ಮೂಡಿ ಹರಡಿದ ಹೊನ್ನೂರು ಸಾಮಾನ್ಯ ಹಳ್ಳಿಯೆ. ಹೆಸರಿಗೆ ಮಾತ್ರ ಹೊ....ನ್ನೂ....ರು.

ಮುಗ್ಧ ಜನ. ಮುಗ್ಧ ಚಾರಿತ್ರ್ಯ. ಬಡತನ-ಜಡತನಗಳ ನಂಟು ಅಪಾರ. ಅರೆಹೊಟ್ಟೆ, ಅರೆ ಬಟ್ಟೆಗಳ ಬದುಕು. ಲೋಕ ಪ್ರಜ್ಞೆ ಮೈಲಿಮೈಲಿ ದೂರ, ನಾಗರಿಕ ಪ್ರಜ್ಞೆಯೂ ಅಷ್ಟಕಷ್ಟೆ.

ಸೋಮಾಲಿ ಕೂಲಿ ಮುಗಿಸಿ ಗುಡಿಸಿಲಿಗೆ ಬಂದಾಗಲೇ ದನಗಾಹಿ ಮಗನೂ ಬಂದ. ಮುಖದಲ್ಲಿ ಅದೆಂತಹ ಪ್ರಸನ್ನತೆ? ಆನಂದೋತ್ಸಾಹ ತಾಂಡವವಾಡುತ್ತಿದೆ. ನಿಗಿನಿಗಿ ನಲಿಯುತಿದ್ದಾನೆ ಹುಡುಗ.

ಒಂದೇ ಉಸಿರಿಗೆ ಬಾಯ್ದೆರೆದು ಹುಡುಗ ಬಿತ್ತರಿಸಿದ,

"ಅಮ್ಮಾ, ಚಾಮುಂಡಿ ಕೆರೆಯಲ್ಲಿ ನಾಳೆಯಿಂದ ದೋಣಿ ಬಿಡುತ್ತಾರಂತೆ. ದೋಣಿ!"

"ಯಾರು ಹೇಳಿದ್ದು?"

"ನಂಜಣ್ಣ ದೋಣಿ ತರಲು ಹೋಗಿದ್ದಾನೆ?" ಅತ್ಯಾನಂದ ತುಂದಿಲತೆಯಿಂದ ಬಿತ್ತರಿಸಿದ.

"ಓ! ಭಾರಿ ವಿಶೇಷವೇ." ಆಸಕ್ತಿಯಿಂದ ಹೇಳಿದಳು ತಾಯಿ.

ಮಗ ತಾಯಿಯನ್ನು ಭಾವಾವೇಶದಿಂದ ತಬ್ಬಿದ. ಕಣ್ಣುಗಳಲ್ಲಿ ಆಸೆಯಬೆಳಕು ಮಿಂಚಿತು.

"ಅವನು ದೋಣಿ ತಂದರೆ ನೀನಗೇಕಪ್ಪ ಇಷ್ಟೊಂದು ಹಿಗ್ಗು ?"

"ನಾವೊಂದು ಸುತ್ತು ಹೋಗಿ ಬರೋಣ ಅಂತ."

"ಅಹಹ ! ಬಿಡಪ್ಪ, ಅವನು ದೋಣಿ ತರೋದು ಮೀನು ಹಿಡಿಯುವುದಕ್ಕೆ, ನಿನ್ನನ್ನೇಕೆ ಕರೆದೊಯ್ಯಾನು ?"

"ಮೀನು ಹಿಡಿದ ಬಳಿಕ ಜನರನ್ನೂ ಸುತ್ತಿಸುತ್ತಾನಂತೆ" ಎಲ್ಲೊ ಅಲಕ್ಷಿತ ಆಶೆಯ ಛಾಯೆ ಕಣ್ಣುಗಳಿಗೆ ಒದವಿ ಕ್ಷಣಕಾಲ ಮಿಂಚಿ ಮಾಯವಾಯಿತು. ಹುಡುಗ ಧಿಮಿಧಿಮಿ ಕುಣಿದ.

"ನಮ್ಮಂತಹವರೆಲ್ಲಾ ಹೀಗೆ ಅದೂ ಇದೂ ಬಯಸಬಾರದು ಬಿಡು. ದುಡ್ಡಿದ್ದವರು ಏನೇನೋ ಮಾಡ್ತಾರೆ ಅಂತ ನಾವೂ ಬಾಯಿ ಬಿಟ್ಟರೆ ಆದೀತೇ ಮಗನೇ, ನೀನೇ ಯೋಚಿಸಿ ನೋಡು."

"ನಾವು ದಿನಾ ಹೋಗ್ತೀವಾ ? ಒಂದೊಂದು ದಿನ ಅಷ್ಟೆ ; ನೀನೂ ಬಾ. ಒಂದು ಸುತ್ತು ಹೋಗಿ ಬರೋಣ. ಚಾಮುಂಡಿ ಕೆರೆಯ ಉದ್ದಗಲ ತಿಳಿದಂಗಾಯ್ತು. ದೋಣಿಯಾನ ಮಾಡಿದಂಗಾಯ್ತು."

ಸೋಮಾಲಿ ಮಾತಾಡಲಿಲ್ಲ. ಎದೆಯಾಳದಿಂದ ನಿಟ್ಟುಸಿರೊಂದು ಹೊರಬಿತ್ತು. ಒಡಲು ಸಂಕಟದಿಂದ ತಳಮಳಿಸಿತು.

"ನಾಳೆ ನಾನು ದೋಣಿ ನೋಡುವುದಕ್ಕೆ ಹೋಗೇ ಹೋಗ್ತೀನಿ."

ಕಣ್ಣು ಮುಖಗಳಲ್ಲಿ ಅತೀ ಸಂತೋಷದ ಮಿಂಚೆದ್ದು ಜಗಜಗಿಸಿತು. ಹದಿನೈದು ವರ್ಷದ ಹುಡುಗ ಎಳೆ ಮಕ್ಕಳಂತೆ ಕುಣಿಕುಣಿಯುತಿದ್ದಾನೆ ಮೈ ಮನಸ್ಸೆಲ್ಲಾ ಆಸೆಯ ಗೂಡಾಗಿ. ಸೋಮಾಲಿ ಮೌನಗತಿಯಲ್ಲಿ ಮಗನನ್ನೇ ನಿಟ್ಟಿಸಿದಳು. ಸ್ವಪ್ನಸಮಾನ ದೃಶ್ಯವೇ ಕಂಡು ಬಂತು ಅವನಲ್ಲಿ.

o o o o

ಇನ್ನೂ ಹೊತ್ತು ಇಳಿಯುಲಿಲ್ಲ; ಆಗಲೇ ಪನಗಾಹಿ ಹುಡುಗ ಹಸು ರನ್ನು ಕಟ್ಟಿಯಾಯ್ತು.

"ಇದೇನು ಗೋಪಿ ?" ಆಶ್ಚರ್ಯವಿಸ್ತೃತ ನಯನಗಳಿಂದ ನಿಟ್ಟಿಸಿದಳು ತಾಯಿ.

"ಈವೊತ್ತು ಜನರನ್ನೆಲ್ಲಾ ದೋಣೀಲಿ ಒಂದೊಂದು ಸುತ್ತು ಸುತ್ತಿ ಸುತ್ತಾನಂತೆ ನಂಜಣ್ಣ !"

"ಕಾಸಿಲ್ಲದೆ ಸುತ್ತಿಸುತ್ತಾನೇನು ?"

"ಇಲ್ಲಮ್ಮಾ.... ಒಂದು ಸುತ್ತು ಹೋಗಿ ಬರುವುದಕ್ಕೆ ನಾಲ್ಕಾಣೆ ಕೊತ್ತು. ಅದೇನು ಹೆಚ್ಚಲ್ಲ."

"ಆ ನಾಲ್ಕಾಣೆಯೂ ನಮ್ಮಲಿಲ್ಲವಲ್ಲಾ ?" ನುಡಿದಳು ತಾಯಿ ನೀರಸ ಧ್ವನಿಯಲ್ಲಿ.

"ನಿನ್ನ ಬಳಿ ಅಷ್ಟು ಕಾಸೂ ಇಲ್ಲವಾ ಅಮ್ಮಾ?" ಅತ್ಯಂತ ಆಸ್ಥೆ ಯಿಂದ ಕೇಳಿದ ಗೋಪಿ.

"ಅರೆಹೊಟ್ಟೆ ಉಣ್ಣುವುದು ನಿನಗೆ ತಿಳಿಯದೆ ಮಗನೆ ?"

ಬಾಲಕ ತೀರಾ ಆತಂಕಿತ ಮನದಿಂದ ಜರ್ಜರಿತನಾದ. ಒಂದು ಗಳಿಗೆ ತುಟಿಗಳು ಬಿರಿಯಲಿಲ್ಲ. ತಲೆಯೆತ್ತಿ ತಾಯಿಯನ್ನು ಆಶಾಪೂರ್ಣಲೋಚ ನಗಳಿಂದ ನಿಟ್ಟಿಸುತ್ತಲೇ ಇದ್ದಾನೆ.

"ಅದೆಲ್ಲಾ ನಮಗ್ಯಾಕೆ ಮಗನೇ, ಜಮೀನ್ದಾರರಿಗೆ-ದುಡ್ಡಿರೋರಿಗೆ ಸರಿ. ನೀನು ಸುಮ್ಮನೆ ಹೆಚ್ಚಿನಾಸೆಗೆ ಹೋಗಬೇಡ. ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು. ದುಡ್ಡಿದ್ದಾಗ ನೋಡೋಣ.

ಬಾಲಕ ಯೋಚಿಸಿದ.... ದೋಣಿಯಲ್ಲಿ ಹೋಗಿದ್ದಿದ್ದರೆ ಕೆರೆಯ ಮಧ್ಯ ದಲ್ಲಿರುವ ತಾವರೆ ಹೂಗಳನ್ನಾದರೂ ಕಿತ್ತುಕೊಳ್ಳಬಹುದಾಗಿತ್ತು. ನಂಜಣ್ಣ

ನನ್ನು ಕೇಳಿದರೆ ನನ್ನೊಬ್ಬನನ್ನು ಕಾಸಿಲ್ಲದೆ ಕರೆದೊಯ್ಯುತ್ತಿದ್ದನೇನೋ .... ನಾನು ತಬ್ಬಲಿಯೆಂಬುದು ಅವನಿಗೆ ಗೊತ್ತು.

ಸೋಮಾಲಿ ಯೋಚಿಸಿದ ರೀತಿಯೇ ಬೇರೆ .... ಮಗನ ಆಸೆಯನ್ನು ಪೂರೈಸಲು ಜಮೀನ್ದಾರರಲ್ಲಿ ಹೆಚ್ಚುವರಿ ಕೆಲಸಮಾಡಿದರೆ ಹೆಚ್ಚು ಕಾಸು ಕೊಟ್ಟಾರೇನೋ ....ತಬ್ಬಲಿ ಮಗು ಆಸೆ ಪಡುತ್ತಿದೆ.

ಸರಿ .... ಆ ಜಮೀನ್ದಾರ ಹೆಚ್ಚು ಕೆಲಸಮಾಡಿದರೂ ಕಾಸು ಬಿಚ್ಚುವವನಲ್ಲ. ಅದನ್ನು ಮನವೂ ಬಲ್ಲದು. ಆತ್ಮವೂ ಬಲ್ಲದು. ಆದರೂ, ದೂರದಾಸೆ ಒಬ್ಬನೇ ಒಬ್ಬ ಮಗನಿಗಾಗಿ.

೦ ೦ ೦ ೦ ೦

ದಿನಗಳು ಉರುಳುತ್ತಲೇ ಇದ್ದುವು. ಹುಡುಗನ ಆಸೆ ಕೈಗೂಡಲಿಲ್ಲ. ದಿನವೂ ಕೆರೆಯ ತೀರದಲ್ಲಿ ನಿಂತು ದೋಣಿಯ ತುಂಬ ಜನ ಸುತ್ತಾಡಿ ಬರುವುದನ್ನು ನೋಡಿ ಬಿಸಿಯುಸಿರು ಬಿಡುತಿದ್ದ ಗೋಪಿ. ದುರದೃಷ್ಟವನ್ನು ಹಳಿಯುತಿತ್ತು ಖಿನ್ನ ಮನಸ್ಸು, ಚಿಂತಿಸುತಿತ್ತು ಚಿತ್ತಕಲ್ಪ. ಕಣ್ಣುಗಳು ಎವೆಯಿಕ್ಕದೆ ನೋಡುತಿದ್ದುವು.

ಅಂಬಿಗ ಹುಟ್ಟು ಹಾಕುವ ರೀತಿ, ಪಯಣಿಗರು ನೀರಿನಲ್ಲಿ ಕೈಯಾಡಿಸುತ್ತ ಆನಂದಿಸುವ ರೀತಿ ಮಕ್ಕಳು ಕೇಕೆ ಹಾಕುವ ರೀತಿ ಎದೆಯೊಳಗಡಲ್ಲಿ ಕೈಯಾಡಿಸುತ್ತವೆ. ಗುಳಿ ಬಿದ್ದ ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು. ಉಕ್ಕಿ ಬಂದ ಅಳುವನ್ನು ಅಲ್ಲಿಂದಲ್ಲೇ ಬಹಳ ಕಷ್ಟದಿಂದ ತಡೆಹಿಡಿದ. ಭಾವೋದ್ವೇಗದಿಂದ ನರನಾಡಿಗಳು ಉಬ್ಬಿ ಬಿಗಿದುಕೊಂಡುವು. ದೋಣಿ ಹಿಂದಿರುಗಿ ಬರುತ್ತಲೂ ಪಯಣಿಗರು ಇಳಿದರು. ಉಳಿದವರು ಹತ್ತಿದರು. ನಂಜಣ್ಣ ಕಾಸು ಇಸಿದುಕೊಂಡು ಜೇಬಿಗಿಳಿಸಿದ. ಅತ್ತಿತ್ತಣಿಂದ ಜನ ಇನ್ನೂ ಓಡಿ ಬರುತ್ತಲೇ ಇದ್ದಾರೆ. ಎಲ್ಲರ ಕೈಯ್ಯಲ್ಲೂ ಜಣಿಜಣಿ ಕಾಸು. ನಗೆ ಮುಗುಳು ಬಿರಿದ ಮುಖಗಳು. ಆ ಸಂತಸಪೂರ್ಣ ದೃಶ್ಯವನ್ನು ತನ್ನಿಂದ ನೋಡಲಾರದೇ ನೋಡಿದುವು ಕಣ್ಣುಗಳು. ಗೋಪಿ ಎದೆಯ

ಮೇಲೆ ಎರಡೂ ಕೈಗಳನ್ನು ಕಟ್ಟಿದ. ದೋಣಿ ಮತ್ತೆ ಮತ್ತೆ ಸುತ್ತು ಹಾಕಿ ಬರುತಿತ್ತು. ಜನರ ಆತುರ ಕಾತರಗಳಿಂದ ನೂಕು ನುಗ್ಗಲು. ಖುಷಿ-ಆನಂದದ ನಗೆ ಮಾತುಗಳು ಇನ್ನೂ ಏನೇನೋ.

ಗೋಪಿ ನಂಜಣ್ಣನ ಮಗ್ಗುಲಿಗೆ ಸರಿದು ಇಳಿಮುಖದಿಂದ ಕೇಳಿದ,

"ಅಣ್ಣಾ, ನಾನೂ ಒಂದು ಸುತ್ತು ಹೋಗಿ ಬರ್‍ತೀನಿ"

"ಕಾಸು ತಂದಿದ್ದೀಯೇನೋ?" ಏರು ದನಿಯಲ್ಲಿ ಹೊರಬಿತ್ತು ಪ್ರಶ್ನೆ.

"ನನ್ನ ಹತ್ರ ಕಾಸು ಎಲ್ಲಿಂದ ಬರ್‍ತದೆ ಅಣ್ಣಾ? ತಬ್ಬಲಿ ಮಗನ್ನ ಒಂದೇ ಒಂದು ಬಾರಿ ಕರಕೊಂಡು ಹೋಗಿ ಆಸೆ ತೀರಿಸು ಅಣ್ಣಾ!"

"ಆಗಲ್ಲ, ಕೂಲಿ ಮಾಡಿ ಕಾಸು ತಾ."

ದೋಣಿ ಹೊರಟಿತು. ನಂಜಣ್ಣ ಒಂದು ಕಡೆ, ಅಂಬಿಗ ಒಂದುಕಡೆ ಹುಟ್ಟು ಹಾಕುತಿದ್ದಾರೆ. ನೀರು ಜಪ್ಪನೆ ಅತ್ತಿತ್ತ ಹಾರುತ್ತಿದೆ. ನಂಜಣ್ಣ ಹಾಡಿದ, ಉಳಿದವರು ದನಿಗೂಡಿಸಿದರು. ದೋಣಿ ಮುಂದೆ ಮುಂದೆ ಹೋಗುತ್ತಿದೆ.

ಲೇಲೇ ಲೇಲೋ ಲೇಲೇ ಲೇಲೋ
ಗಂಗಾತಾಯಿ ನಮ್ತಾಯಿ.
ನೀರು ಕೊಡ್ತಾಳೆ ಇಳೆಯ ಮಕ್ಕಳಿಗೆ.
ಚೆಂದುಳ್ಳ ನೆಲ್ಲು ರಾಗಿ ಬೆಳೆಸ್ತಾಳೆ.
ಹುರುಪು ಹುದುವಾಳ್ ಬರಿಸ್ತಾಳೆ.
ಗಂಗಾತಾಯಿ ನಮ್ತಾಯಿ
ಮಾತಾಯಿ ಮಡಿಲಲ್ಲಿ ಭಯವಿಲ್ಲೋ
ಲೇಲೇ ಲೇಲೋ ಲೇಲೇ ಲೇಲೋ

ಹುಡುಗನ ಕಣ್ಣುಗಳಲ್ಲಿ ಗಂಗೆ ಯಮುನೆಯರು ಪ್ರವಹಿಸಿದರು.

o o o o

"ಏ! ಗೋಪಿ! ಬಾರೋ ಇಲ್ಲಿ."

ದನಿ ಬಂದತ್ತ ನೋಟವನ್ನು ತಟ್ಟನೆ ಸಹಜವಾಗಿ ಹೊರಳಿಸಿದ ಗೋಪಿ. ನಂಜಣ್ಣನ ಮಗಳು ದೇವಿ ಕೈಯಲ್ಲಿ ಕುಡ್ಲು ಹಿಡಿದು ಹುಲ್ಲು ಕೊಯ್ಯಲು ಹೊರಟಿದ್ದಾಳೆ. ಅವಳ ಮುಖದ ಮುಂಬೆಲ್ಲ ನಗುವಿನ ಹರವು.

"ಎಳಿಗರುವಿಗೇನಕ್ಕ ಹುಲ್ಲು?" ಕೇಳಿದ ಗೋಪಿ.

"ಹೌದು."

"ಕುಡ್ಲು ಕೊಡಿ. ನಾನಿಷ್ಟು ಕುಯ್ದು ಕೊಡುವೆ."

ಗೋಪಿ ಅವಳ ಬಳಿಗೆ ಚಿಮ್ಮಿ ಕುಡ್ಲು ಈಸಿಕೊಂಡ. ದಂಡೆಯ ಮೇಲೆ ಕುಳಿತಳು ಅವಳು. ಹುಡುಗ ಹುಲ್ಲು ಕುಯ್ದು ಬುಟ್ಟಿ ತುಂಬಿಸಿದ.

"ನೀನು ಬಹಳ ಚೂಟಿ ಎಷ್ಟು ಬೇಗ ಕೊಯ್ದೆ?" ಕಣ್ಣರಳಿಸಿದಳು ಹುಡುಗಿ.

"ಅಕ್ಕಾ! ನಾನು ಎಷ್ಟು ಕೆಲಸ ಮಾಡಿದರೇನು? ಕಾಸು ಮಾತ್ರ ಯಾರೂ ಕೊಡೊಲ್ಲ.

"ಇದಿಷ್ಟು ಹುಲ್ಲು ಕುಯ್ದಿದ್ದಕ್ಕೆ ಯಾರು ಕಾಸು ಕೊಡುತ್ತಾರೆ ಹೇಳು?" ನಕ್ಕಳು ಅವಳು.

ತನಗಿಂತಲೂ ನಾಲ್ಕಾರು ವರ್ಷ ಹಿರಿಯುವಳಾದ ಅವಳಲ್ಲಿ ಗೌರವ ಭಾವನೆಯಿದ್ದುದು ನಿಜ. ಗೋಪಿ ಹುಬ್ಬೆತ್ತಿ ನೋಡಿ ಅಂದ,

"ನೀವು ಕಾಸು ಕೊಡುವುದು ಬೇಡ. ದೋಣೀಲಿ ಒಂದು ಸುತ್ತು ಕರಕೊಂಡುಹೋಗಿ ಬರಲು ಹೇಳಿ ನಂಜಣ್ಣನಿಗೆ. ನಿಮಗೆ ನಾಳೇನೂ ಹುಲ್ಲು ಕೊಯ್ದು ಕೊಡ್ತೀನಿ". ಆಸೆಗಣ್ಣುಗಳು ಮಿನುಗಿದುವು.

ಅವಳು ದೊಡ್ಡದಾಗಿ ನಕ್ಕು ನುಡಿದಳು "ನಾನೇ ಇನ್ನೂ ಸುತ್ತಿ ಬಂದಿಲ್ಲ ಗೊತ್ತಾ?"

"ನೀವು ಹೋಗುವುದಾದರೆ ನನ್ನೂ ಕರಕೊಂಡು ಹೋಗಿ ಅಕ್ಕಾ ಕೆರೆ ಮಧ್ಯ ದೋಣಿ ಜರ್ರೆಂದು ಹೋಗುತಿದ್ದರೆ ನೋಡುವುದೇ ಚೆಂದ. ತಾವರೆ ಹೂಗಳನ್ನು ಕೊಯ್ಯಬೇಕು. ನೀರನ್ನು ಮುಟ್ಟಬೇಕು ಅನಿಸುತ್ತೆ ನನಗೆ. ಅಕ್ಕಾ, ಒಂದೇ ಒಂದು ಸುತ್ತು ಹೋಗಿ ಬರೋಣ." ಗೋಗರೆದ ಹುಡುಗ.

"ನೀನು ಮೀನುಗಾರನಾಗಿ ಸೇರಿಕೊ .... ಅಂದರೆ ದಿನವೂ ಹೋಗ ಬಹುದಲ್ಲ ?"

"ದನ ಮೇಯಿಸುವುದುಂಟಲ್ಲ ಅಕ್ಕಾ."

"ದನಗಳೊಡೆಯರು ಕೂಲಿ ಕೊಡುವುದಿಲ್ಲವೇ ?"

"ಅಯ್ಯೊ, ಬಿಡಿ ಅಕ್ಕಾ ಅವರು ಕೊಡುವುದು ತಿಂಗಳಿಗೆ ಎರಡು ಕೆ. ಜಿ ಅಕ್ಕಿ."

ಹುಡುಗನ ಮುಖ ಬಣ್ಣಗೆಟ್ಟುದುದನ್ನು ಗಮನಿಸಿ ಅಂದಳು ಅವಳು, "ಈ ಕಾಲದಲ್ಲಿ ಎಲ್ಲರೂ ಕಾಸುಗಳ್ಳರು."

ಅವನು ಮಾತಾಡಲಿಲ್ಲ, ಮ್ಲಾನ ಮುಖದಿಂದ ಅವಳನ್ನೇ ನೋಡಿದ.

o o o o

ಗೋಪಿ ಹೆಮ್ಮರದಡಿಯಲ್ಲಿ ಕುಳಿತು ದನಗಳ ಚಲನವಲನವನ್ನು ಗಮನಿಸುತಿದ್ದ. ನೀರು ತುಂಬಿದ್ದ ದುಂಡನೆ ಸೋರೆ ಬುರುಡೆ ಮರಕ್ಕೆ ನೇತು ಬಿದ್ದಿತ್ತು. ಬೆಳಿಗ್ಗೆ ಒಂದಿಷ್ಟು ಹಿಟ್ಟು ನುಂಗಿ ಬಂದರೆ ಸಂಜೆಯವರೆಗೆ ಹುಡುಗನಿಗೆ ನೀರೇ ಆಧಾರ. ದಿಟ್ಟಿಯನ್ನು ದೂರ ದಿಗಂತದಲ್ಲಿ ನೆಟ್ಟ. ಕಾಮ ಹಕ್ಕಿಗಳ ಕಪ್ಪು ಜೋಡಿ ಕಪ್ಪಗೆ ಚುಕ್ಕಿಯಂತೆ ಕಣ್ಣೆಸೆಯುತ್ತಿವೆ. ಹುಡುಗನ ದೃಷ್ಟಿ ಅಲ್ಲಿಂದ ಚಲಿಸಲಿಲ್ಲ. ಅವುಗಳಿಗೆ ದುಡಿಯುವ ಗೋಜಿಲ್ಲ. ಬಂಧಾನು ಬಂಧಗಳಿಲ್ಲ. ಬಾಳು ಸ್ವಚ್ಛಂದ ನಿರ್ಮಲ. ಹಾರಾಟವೇ ಹಾರಾಟ.

ದಪ್, ದಪ್, ದಪ್, ದಪ್.

ಸದ್ದು ಬಂದೆಡೆಗೆ ಸಹಜವಾಗಿ ಹೊರಳಿತು ದೃಷ್ಟಿ. ಇತ್ತಲೇ ಬರುತಿದ್ದ ವ್ಯಕ್ತಿ ಕಣ್ಣೋಚರಿಸಿದರೂ ಗುರುತು ಹತ್ತಲಿಲ್ಲ. ಏಕಾಂಗಿತನಕ್ಕೆ ವ್ಯಕ್ತಿ ಕಣ್ಣೋ

ಚರಿಸಿದುದು ನಿಜಕ್ಕೂ ಸಂತಸವೇ. ಅವನು ಸಮೀಪಗತನಾಗುವವರೆಗೂ ನಿಟ್ಟಿಸಿತು ನಿಶ್ಚಲ ದೃಷ್ಟಿ.

"ಏನು ಹೀಗೆ ನೋಡುತಿದ್ದಿ? ನನ್ನ ಗುರುತು ಹತ್ತಲಿಲ್ಲವೇ ಹೈದ?"

ಹಾಸ್ಯಪ್ರಧಾನವಾಗಿ ಅವನ ದನಿ ಹರಿಯುತ್ತಲೂ ಗೋಪಿ ನಕ್ಕು ನುಡಿದ,

"ಓ ನೀನಾ? ಬಿಸಿಲಟ್ಟಿದ ಕಣ್ಣುಗಳು ಮಂಜು ಮಂಜು. ಬಾ, ನಡೆದು ದಣಿದಿದ್ದೀಯೇ. ಸ್ವಲ್ಪ ಹೊತ್ತು ಕುಳಿತು ಸುಧಾರಿಸಿಕೊ. ನೀನು ಇಲ್ಲಿಂದ ಹೋದಮೇಲೆ ಸರಿಯಾದ ಜೊತೆಗಾರನಿಲ್ಲ ನನಗೆ. ಬದುಕು ಬಣ ಬಣ ಎನ್ನುತ್ತಿದೆ. ಬೇಸರವೋ ಬೇಸರ."

"ಅದಕ್ಕೇ ನೀನು ನನ್ನ ಗುರುತಿಸಲಿಲ್ಲ!" ಕಿಲಕಿಲ ನಕ್ಕ ಜಾನಿ.

"ಹಾಗಲ್ಲ, ಬಿಡು. ಬಿಸಿಲಿಂದ ಹಾಗಾಯ್ತು."

"ಎಂಥ ರಣಬಿಸಿಲು. ಸ್ವಲ್ಪ ಹೊತ್ತಾದರೂ ನೆರಳಿಗೆ ತಲೆಯೊಡ್ಡದಿದ್ದರೆ ಸಿಡಿದು ಹೋದೀತು."

ಜಾನಿ ಮುಖ ಮೈಗಳಲ್ಲಿ ಬಸಿಯುತಿದ್ದ ಬೆವರನ್ನು ಒರಸಿಕೊಂಡು ಬಳಿಯಲ್ಲಿ ಕುಳಿತ. ಕುಶಲ ಪ್ರಶ್ನೆಯ ಬಳಿಕ ಜಾನಿ ನುಡಿದ "ನಿಮ್ಮವರಿಗೊಂದು ಹೊಸ ಸುದ್ದಿ."

"ಏನದು ಬೇಗನೆ ಹೇಳಪ್ಪಾ, ಕೇಳೋಣ-"

"ಈ ಸಾಲಿನಲ್ಲಿ ನಿಮ್ಮ ಊರಿಗೊಂದು ಅಂಚೆ ಮನೆ ಬರಲಿದೆ."

ಗೋಪಿ ವಿಷಯವನ್ನು ಮನಗೊಂಡರೂ ಉತ್ಸಾಹ ತೋರಲಿಲ್ಲ.

"ಏನಪ್ಪಾ ಸುಮ್ಮನಾದೆ? ನಿನಗದು ವಿಶೇಷವೆನಿಸಿಲ್ಲವೇ?"

"ಅನಂತರ ನಿನಗೆ ಓಡಾಟ ತಪ್ಪುತ್ತೆ. ನೀನು ಈ ಕಡೆ ಬರುವಂತಿಲ್ಲ ಎಂಬ ಯೋಚನೆ ಬಂತು."

"ಹಾಗೇನಿಲ್ಲ. ಈಗಿನಂತೆ ಮನೆಮನೆಗೆ ಕಾಗದ ಮುಟ್ಟಿಸುವ ಗೋಜಿಲ್ಲ, ನೇರವಾಗಿ ಅಂಚೆ ಮನೆಗೆ ಮುಟ್ಟಿಸಿದರಾಯ್ತು."

ಗೋಪಿ ನೀರಿನ ಬುರುಡೆ ತೆಗೆದು "ಸ್ವಲ್ಪ ನೀರು ಕುಡಿದು ದಣಿವಾರಿಸಿಕೊ ಅಣ್ಣಾ" ಎಂದ.

ಇಬ್ಬರೂ ನೀರು ಕುಡಿದು ದಣಿವಾರಿಸಿಕೊಂಡರು. ಜಾನಿ ಗೆಳೆಯನ ಬೆನ್ನ ಮೇಲೆ ಕೈಹಾಕಿ ನಲ್ಮೆಯಿಂದ ನುಡಿದ "ನೀನು ನನ್ನೊತೆ ಬಂದ್ರೆ, ನಮ್ಮ ಅಂಚೆ ಮನೆಯಲ್ಲಿ ಜವಾನನ ಕೆಲಸ ಕೊಡಿಸುವೆ. ಒಂದು ಕೆಲಸ ಖಾಲಿ ಇದೆ."

"ಮುತ್ತೂರು ತುಂಬಾ ದೂರ. ದಿನಾ ಹೋಗಿ ಬರುವುದು ಕಷ್ಟವಲ್ಲವೇ?"

"ಅಲ್ಲೇ ನನ್ನೊತೆ ಇದ್ದುಬಿಡು. ನನಗೂ ಒಬ್ಬನೇ ಇದ್ದು ಬೇಸರವಾಗಿದೆ. ಇಬ್ಬರೂ ಬಾಲ್ಯ ಗೆಳೆಯರು. ನಮ್ಮ ಜೋಡಿ ಸರಿಹೋಗುತ್ತೆ."

"ಇಲ್ಲಿ ಅಮ್ಮ ಒಬ್ಬಳೇ."

"ಆಗಾಗ ಬಂದು ಹೋಗಬಹುದು. ಅಲ್ಲದೆ ಮುಂದಿನ ವರ್ಷ ಇಲ್ಲಿಗೆ ಅಂಚೆಮನೆ ಬರುತ್ತಂತೆ. ಆಗ ಇಲ್ಲಿಗೇ ಬಂದರಾಯ್ತು."

"ಹಾಗಾದರೆ ಮನೆಗೆ ಬಂದು ಹೋಗು. ಅಮ್ಮನೊಂದಿಗೆ ಮಾತಾಡೋಣ."

"ಆಯ್ತು ಗೋಪಿ," ಸಂತಸದಿಂದ ಬಿತ್ತರಿಸಿದ ಜಾನಿ.

ಂ ಂ ಂ ಂ

ಗೋಪಿ ಓಡುತ್ತಲೇ ಬಂದು ಮೈಯೆಲ್ಲಾ ಮನಸ್ಸಾಗಿ ಬಿತ್ತರಿಸಿದ "ಅಮ್ಮಾ! ಇಂದು ದೋಣಿಗೆ ಯಾರೂ ಇಲ್ಲವಂತೆ ನನ್ನೊತೆ ಬಾ ಎಂದ ಸಂಜಣ್ಣ. ನಾನು ಹೋಗ್ತೀನಿ. ಹಸುಗಳನ್ನು ನೀನೇ ನೋಡಿಕೋ ಅಮ್ಮಾ."

"ನನಗಾಗಲ್ಲವೋ......"

ಆ ಮಾತು ಹೊರಬೀಳುವುದರೊಳಗಾಗಿ ಹುಡುಗ ಓಟ ಕಿತ್ತ. ಸೊಂಟಗೈಯಾಗಿ ನಿಂತು ನೋಡಿದಳು ಸೋಮಾಲಿ. ಸ್ವಲ್ಪೇ ಹೊತ್ತಿನೊಳಗಾಗಿ

ಹುಡುಗ ಕಣ್ಮರೆಯಾದ. ಆ ದಿನವೆಲ್ಲಾ ಮೀನು ಹಿಡಿಯುತ್ತ ದೋಣಿಯಲ್ಲಿ ಕುಲುಕಾಟವೇ ಕುಲುಕಾಟ. ಹುಡುಗ ಸಂತಸ–ಹುರುಪುಗಳ ಒಡೆಯನಾದ. ದೋಣಿಯಲ್ಲಿ ಪಯಣಿಸುವ ಆಸೆ ಅಜೀರ್ಣವಾಗುವಷ್ಟು ಒಂದೇ ಬಾರಿಗೆ ದೊರಕಿತು. ಮೀನುಗಳೂ ಧಂಡಿಯಾಗಿ ದೊರಕಿದುವು. ದೋಣಿಗನ ಮುಖದ ಮೇಲೆ ಸಂತಸದ ಅಲೆ ಕುಲುಕುಲು ನಗೆಯೊಡನೆ ಹರಿದಾಡಿತು. ನಂಜಣ್ಣ ಒಂದಿಷ್ಟು ಪುಡಿ ಮೀನುಗಳನ್ನು ಕೊಟ್ಟು "ಅಡಿಗೆ ಮಾಡಿಕೋ ಗೋಪಿ" ಎಂದ. ಕಾಸು ಬಿಚ್ಚಲಿಲ್ಲ. ಹುಡುಗ ನಿರಾಶನಾದರೂ ಹರ್ಷೋನ್ಮತ್ತನಾಗಿ ಮೀನುಗಳೊಡನೆ ಮನೆಗೆ ಧಾವಿಸಿದ. ತಾಯಿಯೊಂದಿಗೆ ತನ್ನ ವಿಜಯೋತ್ಸವವನ್ನು ಎಷ್ಟು ಬಣ್ಣಿಸಿದರೂ ಸಾಲದು. ಜೊತೆಗೆ ಮೀನಿನ ಪಲ್ಯದ ಹಬ್ಬ ಬೇರೆ. ಹುಡುಗ ಕನಸಿನ ಗೋಪುರವನ್ನು ತನಗರಿಯದಂತೆಯೇ ಕಟ್ಟತೊಡಗಿದ. ಅನಂತರ ಇನ್ನೂ ಎಷ್ಟೋ ದಿನ ಮೀನು ಹಿಡಿಯುವ ಭಾಗ್ಯ ಲಭಿಸಿತು. ಬಾಲಕ ಬಲೆ ಬೀಸುವುದರಲ್ಲಿ ಚತುರನಾಗಿ ನಂಜಣ್ಣನ ಮೆಚ್ಚಿಗೆ ಪಡೆದ. ಹುಟ್ಟು ಹಾಕುವುದನ್ನೂ ಕಲಿತ. ದಿನವೂ ಓಡಾಡಿ ಚಾಮುಂಡಿ ಕೆರೆಯ ಉದ್ದಗಲದ ಅರಿವೂ ಮೂಡಿತು. ಎದೆಯ ನೆಲೆಯಲ್ಲಿ ಸಂತಸ ಹೆಪ್ಪುಗಟ್ಟಿತು.

೦ ೦ ೦ ೦

ಕೆಲವು ವಾರಗಳು ನಿರಾತಂಕವಾಗಿ ಉರುಳಿಹೋದುವು.

ಮತ್ತೊಮ್ಮೆ ಜಾನಿ ಊರಿಗೆ ಬಂದಾಗ ಗೋಪಿ ಜಾನಿಯೊಂದಿಗೆ ಮುತ್ತೂರಿಗೆ ಹೊರಟೇಬಿಟ್ಟ.

"ಆಗಾಗ ಬರುತ್ತಿರುತ್ತೇನಮ್ಮಾ" ಎಂದು ಬಾಯಿತುಂಬಾ ಆಶ್ವಾಸನೆ ನೀಡಿದ ತಾಯಿಗೆ.

"ನಾನೊಬ್ಬಳೇ ಹೇಗಿರಲಿ ಮಗನೇ" ಗೋಗರೆಯಿತು ತಾಯಿಯ ಧ್ವನಿ. ಕಣ್ಣುಗಳು ತುಂಬಿ ಬಂದುವು.

"ಅಲ್ಲೊಂದು ಗುಡಿಸಲು ಕಟ್ಟಿ ನೆಲೆಗೊಂಡನಂತರ ನಿನ್ನ ಕರೆದುಕೊಂಡು ಹೋಗುವೆ, ಚಿಂತಿಸಬೇಡ. ಮೂವತ್ತು ರೂಪಾಯಿ ಸಂಬಳ ಕೊಡುತ್ತಾ

ರಂತೆ. ನಾವಿಲ್ಲಿ ರೂಪಾಯಿಯ ಮುಖವನ್ನೆ ನೋಡಲಿಲ್ಲ ಬಿಡು. ಇನ್ನು ಎಷ್ಟು ಕಾಲ ಹೀಗೆ...ಅಕ್ಕಿಗಾಗಿ ಕೂಲಿ ಸಾಕಾಗಿದೆ."

ಸಂತುಷ್ಟಳಾದಳು ಸೋಮಾಲಿ. ಅವನು ಸುಖವಾಗಿರಲಿ ಎಂದು ಹಾರೈಸಿತು ಎದೆಯ ಹಕ್ಕಿ. ಆದರೂ ಸುಖ ದುಃಖಗಳ ಜೋಕಾಲಿಯೇರಿತು ಮನಸ್ಸು. ನೆತ್ತರು ಹೆಪ್ಪುಗಟ್ಟಿದಷ್ಟು ಬಿಗಿತ ನರನಾಡಿಗಳಲ್ಲಿ. ಭಾರವಾದ ಹೃದಯವನ್ನು ಹೊರಲಾರದೇ ಹೊತ್ತು ಒಪ್ಪಿದಳಾದರೂ ಕಣ್ಣುಗಳಲ್ಲಿ ಕಂಬನಿಯ ಪ್ರವಾಹ ಉಕ್ಕಿ ಹರಿಯಿತು. ಏಕಾಂಗಿತನಕ್ಕಾಗಿ ಒಡಲು ಮೌನವಾಗಿ ರೋದಿಸಿತು.

ಗೋಪಿ ಊರು ಬಿಟ್ಟು ಎಷ್ಟೋ ತಿಂಗಳುಗಳು ಉರುಳಿ ಹೋದುವು. ಎಂದಾದರೊಮ್ಮೆ ಜಾನಿ ಬಂದಾಗ ಸುದ್ದಿ ತಿಳಿಯುತಿತ್ತು. ಕೊನೆಗೊಮ್ಮೆ ಇದ್ದಕ್ಕಿದ್ದಂತೆಯೇ ಜಾನಿ ಬರುವಿಕೆಯೂ ನಿಂತು ಹೋಯಿತು. ಮುತ್ತೂರು ಕಡೆ ಹೋಗಿ ಬರುವವರೂ ಇಲ್ಲ. ಸೋಮಾಲಿ ಮಗನ ಚಿಂತೆಯಲ್ಲಿ ಹಣ್ಣಾದಳು. ದಿನವೂ ಹಾದಿಯತ್ತ ನೋಡಿ ಕಣ್ಣುಗಳು ಬತ್ತಿದುವು. ಹನುಮಂತನ ಗುಡಿಯಲ್ಲಿ ದಿವ್ಯ ದರ್ಶನ ಮಾಡಿ ತನ್ನ ನೋವನ್ನು ನಿವೇದಿಸಿಕೊಳ್ಳುವಳು ಕಂಬನಿಯ ಅಭಿಷೇಕ ಮಾಡಿ. ಹನುಮಂತ ಆರ ಮೊರೆಗೂ ಕಿವಿಗೊಡದಿರುವಂತೆ ಇವಳ ಮೊರೆಗೂ ಕಿವಿಗೊಡಲಿಲ್ಲವೇನೋ...ದಿನಗಳು ಒಂದೊಂದಾಗಿ ಕಳೆಯುತ್ತಲೇ ಇವೆ. ಗೋಪಿಯ ಸುಳಿವಿಲ್ಲ.

೦ ೦ ೦ ೦

"ಸೋಮಾಲೀ, ಈ ಸಾಲಿನಲ್ಲಿ ನಮ್ಮೂರಿಗೊಂದು ಅಂಚೆ ಮನೆ ಬರುತ್ತದಂತೆ. ಅದರೊಂದಿಗೆ ನಿನ್ನ ಮಗ ಈ ಊರಿಗೇ ಬರಬಹುದು. ಬಿಡು; ನಿನ್ನ ಮಗ ಬಲು ಜಾಣ. ಶ್ರದ್ಧಾವಂತ ಹುಡುಗ. ಹೆಚ್ಚಿನ ಶಾಲೆ ಕಲಿತಿದ್ದರೆ ಚೆನ್ನಿತ್ತು. ಏನು ಮಾಡೋಣ? ವಿದ್ಯೆ ಎಲ್ಲರಿಗೂ ಲಭಿಸಬೇಕಲ್ಲ? ಅವನ ನಮ್ಜೊತೆ ಬರುತಿದ್ದಾಗ ನನಗೆ ಗಮ್ಮತ್ ಮಾನು. ಕೈಗುಣ ಒಳ್ಳೆಯದು. ಬಹುಶಃ ಅದೃಷ್ಟವಂತನಿರಬಹುದು..."

ಅವನು ಬಾಯಿತುಂಬಾ ಹೊಗಳುತಿದ್ದರೆ ಇವಳಿಗೆ ಒಡಲೆಲ್ಲಾ ಸಂಕಟ. ಗನ್ಮೃತ್ತು ಮಾನು ಹಿಡಿದರೂ ಕೈಗೆ ಚಿಕ್ಕಾಸು ಕೊಡಲಿಲ್ಲ. ಮನುಕುಲದಲ್ಲಿ ದಯೆ–ಕರುಣೆ–ಪ್ರೇಮ–ಧರ್ಮ–ಸತ್ಯಗಳು ಲುಪ್ತವಾದುವು ಹೇಗೆ? ಅಥವಾ ಈ ಶಬ್ದಗಳಿಗೆ ಅರ್ಥವೇ ಇಲ್ಲವೋ ಅಥವಾ ಹೃದಯ ನಿಘಂಟು ಅರ್ಥೈಸ ಲಾರದೂ ಅದೇ ತಿಳಿಯುತ್ತಿಲ್ಲ. ಕೆಲವು ಕ್ಷಣ ಯೋಚಿಸಿ ಆ ವಿಷಾದ ಕಲ್ಪನೆ ಯನ್ನು ಹುಗಿದಿಟ್ಟುಕೊಂಡು ನುಡಿದಳು ಅವಳು, "ಅವನೊಮ್ಮೆ ಬಂದರೆ ಸಾಕಾಗಿದೆ" ಸ್ವಲ್ಪ ತಡೆದು ಪುನಃ ಕೇಳಿದಳು,

"ಅಂಚೆ ಮನೆ ಬರುವುದು ಯಾವಾಗ ನಂಜಣ್ಣಾ?"

"ಸಧ್ಯ ಬರಬಹುದು. ಯಾವಾಗೆಂಬುದು ಸ್ಪಷ್ಟ ತಿಳಿಯದು."

"ಒಮ್ಮೆಯೂ ಗೋಪಿ ಬಂದು ಹೋಗಲಿಲ್ಲ. ಅದೇ ಸಂಕಟ ನನಗೆ."

"ಏಕೆ ಅಷ್ಟು ಹಚ್ಚಿಕೊಳ್ಳುತ್ತಿ? ಅವನಿಗೊಂದು ಕೆಲಸ ಸಿಕ್ಕಿದ್ದು ಸಮಾ ಧಾನ ಅಲ್ವಾ ನಿನಗೆ?"

"ಹೋಗಿ ಬರುತಿದ್ದರೆ ಸಮಾಧಾನ....ಕಣ್ಣಿಗೇ ಬೀಳದಿದ್ದರೆ ಏನು ಮಾಡಲಿ ಹೇಳು?" ಮಾತು ಮುಗಿಯುವುದರೊಳಗಾಗಿ ಕಣ್ಣುಗಳು ಗಂಗೆಯ ಮಡಿಲಾದುವು. ಕೊರಳು ಬಿಗಿಯಿತು.

"ಅವನು ಚಿಕ್ಕ ಮಗುವಲ್ಲ. ಎಂದಾದರೂ ಬರುತ್ತಾನೆ. ಚಿಂತೆ ಹಚ್ಚಿ ಕೊಳ್ಳಬೇಡ."

ಅವನ ಭರವಸೆ ಎದೆಯಾಳಕ್ಕಿಳಿಯಿತು. ಅಲ್ಲಿಂದ ಮನೆಗೆ ಬರುತ್ತಲೂ ನೆರೆಮನೆಯಾತ ನುಡಿದ,

"ಇಲ್ಲಿಗೆ ಅಂಚೆಮನೆ ಬರುವುದು ಸತ್ಯ. ಜಮೀನ್ದಾರ ಬಸವಯ್ಯ ಅಂಚೆ ಮನೆಗಾಗಿ ಗದ್ದೆಯಂಚಿನಲ್ಲಿರುವ ಚಿಕ್ಕ ಮನೆಯನ್ನು ಬಿಟ್ಟುಕೊಡುತ್ತಾ ರಂತೆ."

"ಹೇಗೆ ತಿಳಿಯಿತು? ಅಂಚೆ ಮನೆ ಯಾವಾಗ ಬರುತ್ತೆ?"

"ಮನೆ ಸಿಕ್ಕಿದ ಮೇಲಿನ್ನೇನು? ಸಧ್ಯದಲ್ಲೇ ಬರಬಹುದು."

ಸೋಮಾಲಿಗೆ ಹೋದ ಜೀವ ಬಂದಂತಾಯಿತು. ಮರುದಿನ ಕೆಲಸಕ್ಕೆ ಹೋದಾಗ ಸತ್ಯ ಸಮಾಚಾರ ತಿಳಿದುಕೊಳ್ಳಬಹುದು ಎಂದುಕೊಂಡಳು ಮನದಲ್ಲಿ. ಹಾತೊರೆಯಿತು ಎದೆಯ ಹಕ್ಕಿ.

ಹೆಮ್ಮರದ ಎಲೆಗಳ ಹೊದರಿನಲ್ಲಿ ಹುದುಗಿ ಹಾಡಿತು ಕೋಗಿಲೆ.......
ಕೂ ಊ ಊ ಊ ಊ ವೂ ಊ ಊ ಊ ಊ!

ನೊಂದ ಮನಕ್ಕೆ ಎಂತಹ ಆಪ್ಯಾಯಮಾನವೋ ಅದರ ರಾಗಮಾಲೆ.

ದೂರದೂರದ ಅಸ್ತಗಿರಿಯ ಮಸ್ತಕದ ಹಿನ್ನೆಲೆಯಲ್ಲಿ ಸೂರ್ಯ ತಂಗಿದ. ಚಂದನ ರಂಗು ತುಂಬಿ ಹರಡಿತ್ತು ದಿಗ್ದೇಶದಲ್ಲಿ.

o o o o

ಹಗಲೆಲ್ಲ ದುಡಿದು ದಣಿದ ಜೀವ. ಒಮ್ಮೆ ಹಾಸಿಗೆ ಸೇರಿದರೆ ಸಾಕು ಎನಿಸುವಷ್ಟು ಸೋಲು.

ರಾತ್ರಿ ಹಾಸಿಗೆ ಸೇರಿದಾಗಲೇ ಕಣ್ಣಿಗೆ ಜೊಂಪು ಹತ್ತಿತು. ಸದ್ದಿಲ್ಲದ ನಿಲಯ. ತಣ್ಣನೆಯ ತಣ್ಪು ವಾತಾವರಣ ಸುಖನಿದ್ದೆಗೆ ಪೂರಕ.

ಗೋಪಿ ಕೈಚೀಲ ಹಿಡಿದುಕೊಂಡೇ ಒಳಬಂದಿದ್ದಾನೆ. ಅದರಲ್ಲಿ ಏನೆಲ್ಲ ತಿಂಡಿ ತಿನಿಸು! ಅವಳೆಂದೂ ತಿನ್ನದಿದ್ದ ತಿನಸುಗಳೇ!

"ಅಮ್ಮಾ ಜಿಲೇಬಿ ಜೋಂಡ ನಿನಗಾಗಿಯೇ ತಂದೆ. ಎಷ್ಟೋ ದಿನಗಳಿಂದ ಇಲ್ಲಿಗೆ ಬರಲು ಪ್ರಯತ್ನಪಟ್ಟೆ. ರಜೆ ದೊರೆಯಲಿಲ್ಲ. ಅಂಚೆ ಮನೆಯಲ್ಲಿ ಏನೆಲ್ಲ ಕೆಲಸ ಕೊಡುತ್ತಾರೆ ಗೊತ್ತೇ? ಅಂಚೆ ಮುದ್ರೆ ಹಾಕುವವನು ನಾನೇ. ದಿನಾಲು ದಪದಪ ಅಂತ ಮುದ್ರೆ ಹಾಕ್ತೀನಿ ಗೊತ್ತಾ?"

"ಹೌದಾ ಮಗನೇ?"

"ಹೌದು....ದಿನಾಲು ಹಾಕ್ಬೇಕು."

ಆ ಕ್ಷಣವೇ ಮಗನನ್ನು ಅಪ್ಪಿಕೊಳ್ಳಲು ಕೈ ಚಾಚಿದಳು ತಾಯಿ. ಆದರೆ, ಎಲ್ಲಿದ್ದಾನೆ ಗೋಪಿ? ಅದೊಂದು ನಿದ್ರಾ ಲೋಕದ ಸೊಗಸಾದ ಕನಸು. ಎರಡೂ ಕೈಗಳಿಂದ ಕಣ್ಣುಜ್ಜಿಕೊಂಡರೂ ಕಾಣಿಸಿದ್ದು ಸೊನ್ನೆ. ಒಂದೇ ಕ್ಷಣದಲ್ಲಿ ಏರಿಳಿತನೆರಡನ್ನೂ ಕಂಡಳು ತಾಯಿ, ಹೃದಯ ಹಾಹಾರು ವಂತೆ.

೦ ೦ ೦ ೦

ಜಮೀನ್ದಾರರ ಮನೆಯಲ್ಲಿ ಕೇಳಿದಾಗ ಸಧ್ಯ ಅಂಚೆ ಕಛೇರಿ ಬರುವುದು ತಿಳಿಯಿತು. ಸೋಮಾಲಿ ಸಂತುಷ್ಟಳಾದಳು. ತೀರದಾಳ ಮುಳುಗಿದವರಿಗೆ ದೋಣಿಯಾಸರೆ ದೊರೆತಷ್ಟು ಸಂತಸ. ಆ ದಾರಿಯಲ್ಲಿ ಹೋದಾಗಲೆಲ್ಲ ಕಣ್ಗೋಚರಿಸುತಿದ್ದುದು ಮುಚ್ಚಿದ ಬಾಗಿಲು. ಹಾಕಿದ ಬೀಗ. ಅಂದನೇಲೆ ಎದೆಯಾಳದಲ್ಲೇ ಸುತ್ತುತ್ತದೆ ಸುಖದುಃಖಗಳ ಗೋಜಲಾದ ಬಿಸಿಯುಸಿರು.

ಸಂಧ್ಯಾ ಶಾಂತಿಯು ತುಂಬಿ ಹರಡಿದ ಸಮಯ. ಗಿಡ ಮರ ಬಳ್ಳಿ ಗಳಲ್ಲಿ ಸಂಧ್ಯಾರಾಗವನ್ನು ಕೊರಳ್ತುಂಬ ಹಾಡುತ್ತಿದೆ ಪಕ್ಷಿ ಸಮಾಜ. ಸೋಮಾಲಿಗೆ ಸಂಧ್ಯಾ ಶಾಂತಿಯಾಗಲೀ, ಸಂಧ್ಯಾರಾಗವಾಗಲಿ ಬೇಕಾಗಲಿಲ್ಲ. ಹೊತ್ತಿಗೆ ಮುಂಚೆಯೇ ಹಾಸಿಗೆ ಸೇರಿದಳು. ರಾತ್ರಿ ಆವಾವ ಹೊಂಗನಸೋ ಬೆಳಿಗ್ಗೆ ಎಷ್ಟೊತ್ತಾದರೂ ಹಾಸಿಗೆ ಬಿಟ್ಟೇಳಲಿಲ್ಲ. ಪರಿಸರದವರು ಬಾಗಿಲ ಚಿಲಕ ಮುರಿದು ನೋಡುತ್ತಾರೆ ಅವಳ ಪ್ರಾಣಪಕ್ಷಿ ಹಾರಿ ಎಂದೋ......

"ಅಯ್ಯೋ, ಗೋಪಿ ಬರುವ ಹೊತ್ತಿನಲ್ಲೇ ಕಣ್ಣು ಮುಚ್ಚಿದಳೇ ನತ ದೃಷ್ಟೆ!"

ಅನೇಕ ದನಿಗಳು ಹಲುಬಿ ಹಾಡಿದುವು. ಅನೇಕರ ಕಣ್ಣುಗಳು ತೇವ ವಾದುವು. ಅನಂತರ ಶವಸಂಸ್ಕಾರಕ್ಕೆ ಅಣಿಯಾಯಿತು. ಶವಯಾತ್ರೆ ಹೊರ ಟಿತು. ಜನ ಒಕ್ಕೊರಲಿಂದ ಹಾಡಿದರು,

ಲೇಲೇ ಲೇಲೋ ಲೇಲೇ ಲೇಲೋ
ಮಗನನ್ನು ಕಾಣೋ ಆಸೆಯಲ್ಲೇ

ಸ್ವರ್ಗ ಸೇರಿದೆಯಲ್ಲೇ ತಾಯವ್ವ
ನಕ್ಷತ್ರವಾಗಿ ಮಗನಾ ಬಾಳನ್ನು
ನೋನೋಡಿ ಸಂತೋಷ ಪಡವ್ವ
ಲೇಲೇ ಲೇಲೋ ಲೇಲೇ ಲೇಲೋ

ಶವ ಮಸಣ ಸೇರಿತು. ಅಂತ್ಯ ಸಂಸ್ಕಾರ ನಡೆದು ಮಣ್ಣು ಮುಚ್ಚಿ ಗೋರಿ ಕಟ್ಟುತ್ತಿರುವಾಗಲೇ ಓಡೋಡಿ ಬಂದ ಜಾನಿ, ಮೇಲುಬ್ಬುಸ ಪಡುತ್ತ ಹೇಳಿದ "ಅಯ್ಯೋ ಪಾಪ! ಮಗನನ್ನು ಕಾಣುವ ಮುಂಚೆಯೇ ಹೋದಳೇ..."

"ಗೋಪಿ ಬಂದನೇ?"

"ನೀನು ಗೋಪಿ ಕರ್ಕೊಂಡು ಹೋಗಿ ಎಷ್ಟು ಕಾಲವಾಯಿತು? ಹೆತ್ತ ತಾಯಿಯನ್ನು ಕೊರಗಿ ಕೊರಗಿ ಪ್ರಾಣ ಬಿಡುವಂತೆ ಮಾಡಿದೆಯಲ್ಲಾ?"

"ಒಂದು ಬಾರಿಯಾದರೂ ಬಂದು ಹೋಗಬಾರದಿತ್ತೇ?"

"ನೀನು ನಿನ್ನೆ ಬಂದಿದ್ದರೆ ಅವಳು ಸಾಯುತ್ತಿರಲಿಲ್ಲ ಬಿಡು."

ಅನೇಕ ದನಿಗಳು ಒಂದೊಂದು ಬಗೆಯಲ್ಲಿ ವ್ಯಾಖ್ಯಾನಿಸಿದುವು. ಜಾನಿ ಎಲ್ಲರ ಕಡೆಗೂ ಪಿಳಿಪಿಳಿ ನೋಡಿ ನುಡಿದ "ಹೀಗಾಗಬಾರದಿತ್ತು." ತಲೆಯಲ್ಲಿ ಯೋಚನೆಯ ಕೀಟಗಳು ಗೊಂದಲ ಹೂಡಿದುವು. ಕಲ್ಲಿಗಿಂತ ಕಲ್ಲಾಗಿ ನಿಂತ. ದೈಹಿಕ ಕ್ರಿಯೆ ನಿಂತು ಹೋದಷ್ಟು ಜೀವ ಭಾರ.

ಸ್ವಲ್ಪ ಸಾವರಿಸಿಕೊಂಡನಂತರ ಜೇಬಿನಿಂದ ಒಂದು ಲಕೋಟೆಯನ್ನು ಹೊರತೆಗೆದು ಹಿರಿಯರ ಕೈಗಿತ್ತು "ಗೋಪಿ ಕಾಗದ ಬರೆದಿದ್ದಾನೆ. ಜೊತೆಗೆ ಮೂವತ್ತು ರೂಪಾಯಿ ಕಳ್ಸಿದಾನೆ ನೋಡಿ. ಈ ಊರಿಗೆ ಬರುವ ಕೆಲಸ ನನಗೆ ಬೀಳಲಿಲ್ಲ. ಅವನಿಗೆ ರಜೆ ಸಿಕ್ಕಲಿಲ್ಲ. ಆಗಿದ್ದು ಇಷ್ಟೆ."

"ಗೋಪಿ ಒಳ್ಳೆಯವನು. ತಾಯಿ ಬದುಕಿದ್ದಿದ್ದರೆ ಚೆನ್ನಾಗಿ ನೋಡಿ ಕೊಳ್ಳುತಿದ್ದ. ಆ ಮಗನೊಡನೆ ಬಾಳುವ ಪುಣ್ಯವಿಲ್ಲ. ಸೋಮಾಲಿ ನತದೃಷ್ಟೆ.

ಸತ್ತವರ ಆತ್ಮ ಮೂರು ದಿನ ಇಲ್ಲಿಲ್ಲೇ ಸುತ್ತುತ್ತಿರುತ್ತದಂತೆ. ಈ ಕಾಗದ ವನ್ನು ಗೋರಿಯ ಮೇಲಿಟ್ಟರೆ ಓದಿಕೊಳ್ಳಬಹುದೇನೋ..."

ಹಿರಿಯ ವ್ಯಕ್ತಿ ಕಾಗದವನ್ನು ಬಿಚ್ಚಿ ಗೋರಿಯ ಮೇಲಿಟ್ಟು ಗಾಳಿಗೆ ಚದುರಿ ಹೋಗದಂತೆ ಒಂದು ಕಲ್ಲು ಹೇರಿದ. ಎಲ್ಲರ ಎದೆಯಲ್ಲೂ ಬಿಸು ಸುಯ್ಯಾಡಿತು. ಜಾನಿ ಹನಿಗಣ್ಣಾದ. ಹೆಂಗಳೆಯರು ಉಟ್ಟ ಸೀರೆಯಿಂದ ಕಣ್ಣು ತೀಡಿಕೊಂಡರು.

— ೦ —

# ಜೀವನಾಂತರಂಗ

೬

ರೋಗ ಶೋಕ ಪರಿತಾಪ ಬಂಧನ ವ್ಯಸನಾನಿ ಚ ।
ಆತ್ಮಾಪರಾಧ ವೃಕ್ಷಾಣಾಂ ಫಲಾನ್ಯೇ ತಾನಿ ದೇಹಿನಾಂ ॥

... ಗುಡುಗು ಮಿಂಚುಗಳ ಘನಘೋರ ಘರ್ಜನೆಯೊಂದಿಗೆ ಕುಂಭ ದ್ರೋಣವರ್ಷದ ಮಹಾಪೂರ.

... ಸುಯ್ಯನೆ ಬೀಸುವ ಭಯಂಕರ ಬಿರುಗಾಳಿಯ ಚಂಡಪ್ರಚಂಡ ರೋಷವೇ ರೋಷ !

ಮಳೆಯೂ ಸೋಲದು. ಗಾಳಿಯೂ ಸೋಲದು. ತನುಮನಗಳು ನಡುಗುವಂತಹ ಭೀಕರ ಹೋರಾಟ. ನಗರವೆಲ್ಲ ಜಲಮಯ. ಹೊರಜಗತ್ತಿಗೆ ತಲೆ ಹಾಕುವಂತೆಯೇ ಇಲ್ಲ. ಮಳೆ, ಮಳೆ, ಬಿಡುವಿಲ್ಲದ ಮಳೆಯಿಂದ ರಸ್ತೆಯಲ್ಲಿ ತೊರೆಯಂತೆ ಹರಿಯುತ್ತಿದೆ ಜಲಧಾರೆ.

ಪಾಂಡು ವಿಮಾನ ನಿಲ್ದಾಣಕ್ಕೆ ಹೊರಡುವವನಿದ್ದ. ವಾತಾವರಣದ ಭಯಂಕರ ಪರಿಸ್ಥಿತಿಯನ್ನು ನೋಡುತಿದ್ದರೆ ಏನುಮಾಡಲಿ? ಹೋಗದಿರುವಂತೆಯೂ ಇಲ್ಲ ಎಂಬುದೊಂದಾದರೆ ಡೆಹಲಿ ವಿಮಾನ ನಿಲ್ದಾಣಕ್ಕೆ ಪ್ರಸಕ್ತ ಪರಿಸ್ಥಿತಿಯಲ್ಲಿ ಬರುವುದಾದರೂ ಹೇಗೆ ? ಎಂಬ ಚಿಂತೆಯು ಇನ್ನೊಂದು.

ಅವನು ಜಗಲಿಯಲ್ಲಿ ನಿಂತು ಮಳೆಗಾಳಿಯ ಹೋರಾಟವನ್ನು ನೋಡುತಿದ್ದಂತೆಯೇ ಘನಘೋರ ಸಿಡಿಲೊಂದು ಭೀಕರ ಶಬ್ದದಿಂದ ಅಪ್ಪಳಿಸಿತು ನಗರದ ಮೇಲೆ. ಅದು ಯಾವ ಭಾಗಕ್ಕೆ ಬಡಿಯಿತೋ ದೇವರಿಗೇ ಗೊತ್ತು.

ಒಂದು ಗಳಿಗೆ, ಒಂದೇ ಒಂದು ಗಳಿಗೆ ಮೈಮನಗಳು ಗಡಗಡ ನಡುಗಿದುವು. ಶೌಚಾಲಯದಲ್ಲಿದ್ದ ಮಡದಿ ಭಯಭೀತಿಯಿಂದ ಗಾರಾಗಿ ಧಾವಿಸಿ ಬಂದು ಪತಿಯ ಮೈಗೆ ಮೈಹಚ್ಚಿ ನಿಂತು "ಏನುಗತಿ ಹೇಳಿ"? ಎಂದಳು. ಅಂತರ ತರವೆಲ್ಲ ತರತರ ಕಂಪಿಸತೊಡಗಿದೆ. ವಿಮಾನದಲ್ಲಿ ಬರಲಿರುವ ಮಗನ ಗತಿಯೇನು ? ಎಂಬ ಪ್ರಶ್ನೆ ಅವಳ ತಲೆಯಲ್ಲಿ ನೆತ್ತರು ಹೆಪ್ಪುಗಟ್ಟಿದಂತೆ ಕಪ್ಪು ತಳೆಯಿತು ಮುಖಬಿಂಬ. ಮೊದಲೇ ಅಶಕ್ತ ಶರೀರ, ಇನ್ನು ಭಯಂಕರ ಭೀತಿ ಎಂದರೆ ಹೇಳಬೇಕೆ ?

"ನೀನೇಕೆ ಅಷ್ಟು ಭಯಪಡುತ್ತಿ ? ಒಂದುವೇಳೆ ವಿಮಾನ ಇಳಿಯ ಲಾಗದಿದ್ದರೆ ಬೇರೆ ಸ್ಥಳಕ್ಕೆ ಕಳುಹಿಸುತ್ತಾರಷ್ಟೆ. ಇದೇನು ಹೊಸದೆ ನಿನಗೆ? ವಿನಾಕಾರಣ ಏನಾದರೂ ಮನಸ್ಸಿಗೆ ಹಚ್ಚಿಕೊಳ್ಳುತ್ತಿ ... ಮತ್ತೆ ಮತ್ತೆ ಕಾಹಿಲೆ ಬೀಳುತ್ತಿ. ನಿನ್ನ ಜೀವಮಾನವೆಲ್ಲಾ ಇದೇ ಆಯ್ತು, ಬಿಡು."

"ಅದು ನನಗೂ ಗೊತ್ತು ..." ನೀರಸ ದನಿಯಲ್ಲಿ ನುಡಿದಳು ಅವಳು.

ಪಾಂಡು ಗಡಿಯಾರದ ಕಡೆ ದೃಷ್ಟಿ ಹೊರಳಿಸಿದ. ಗಂಟೆ ಐದೂವರೆಯ ಅಂಚನ್ನು ದಾಟುವುದರಲ್ಲಿತ್ತು. ವಿಮಾನ ಆರುಗಂಟೆಗೆ ನಿಲ್ದಾಣಕ್ಕೆ ಬರುತ್ತೆ. ಇಲ್ಲಿಂದ ಅಲ್ಲಿಗೆ ಹೋಗಬೇಕೆಂದರೆ ಅರ್ಧಗಂಟೆಯೇ ಬೇಕು. ಈ ಮಳೆ ಯಲ್ಲಂತೂ ಇನ್ನೂ ಜಾಸ್ತಿ ಸಮಯಬೇಕು ... ಎಂಬ ಯೋಚನೆ ಬಂದೊಡನೆ ಮಡದಿಗೆಂದ "ಸೌಧಾ, ನಾನಿನ್ನು ತಡಮಾಡುವಂತಿಲ್ಲ. ಹೊರಡುವೆ, ವೇಳೆ ಕಳೆಯುತ್ತಿದೆ.

ಮರು ಕ್ಷಣದಲ್ಲೇ ಕೊಡೆ ತೆಗೆದುಕೊಂಡು ಅವನು ಕಾರು ಹತ್ತಿದ. ಕೆಲವೇ ನಿಮಿಷಗಳಲ್ಲಿ ಕಾರು ಹೆದ್ದಾರಿ ಹಿಡಿಯಿತು. ರಸ್ತೆಯ ಇಕ್ಕೆಲಗಳ ಮರ ಗಳನ್ನೆಲ್ಲಾ ತಿರುಚಿ ತಿರುಚಿ ಕೊಂಬೆ ಕೊಂಬೆಗಳನ್ನು ಮುರಿದು ಕೆಡವಿದೆ ಬಿರುಗಾಳಿ. ಎಲ್ಲಾ ಮರಗಳ ಬುಡದಲ್ಲಿಯೂ ಎಲೆ ಕಡ್ಡಿ ಕೊಂಬೆಗಳು ರಾಶಿ ರಾಶಿಯಾಗಿ ಹರಡಿವೆ. ಎಲ್ಲೆಲ್ಲಿ ಎಷ್ಟೆಷ್ಟು ಮರಗಳು ಬುಡಮೇಲಾಗಿವೆಯೋ.... ಹೇಳುವಂತಿಲ್ಲ .... ಭಯಾನಕ ಅನಾಹುತ.

ಮುಂದಿನ ಕಾರುಗಳ ಮಂದಗತಿಯಿಂದ ಹಿಂದಿನ ಕಾರುಗಳು ಸರಾಗವಾಗಿ ಮುಂದುವರಿಯುವಂತಿಲ್ಲ. ರಸ್ತೆಯೆಲ್ಲಾ ತುಂಬಿ ಹರಿಯುತ್ತಿದೆ ಮಳೆಯ ನೀರು. ಅರ್ಧಚಕ್ರಗಳು ನೀರಿನಲ್ಲಿ ಮುಳುಗಿವೆ. ಎಂಜಿನ್ನಿಗೆ ನೀರು ಸೇರಿದರೆ ಕತೆ ಮುಗಿಯುತ್ತದೆ. ಸಧ್ಯ ಕಾರು ನಿಲ್ದಾಣವನ್ನು ಸೇರಿದರೆ ಸಾಕು ... ಎಂಬ ಯೋಚನೆಯಿಂದಲೇ ಕಾರನ್ನು ನಡೆಸಿದ ಪಾಂಡು. ಅಂತೂ ಕೂರ್ಮಗತಿಯಲ್ಲಿ ವಿಮಾನ ನಿಲ್ದಾಣವನ್ನು ಸೇರಿತು ಕಾರು. ಕಾರುಗಳ ನಿಲ್ದಾಣದಲ್ಲಿಯೂ ನೀರು ತುಂಬಿ ಕೆರೆಯಾಗಿದೆ. ಅದರೊಳಗೇ ನೂರಾರು ಕಾರುಗಳು ಚಕ್ರಮುಳುಗಿ ನಿಂತಿವೆ.

ಪಾಂಡು ಅಲ್ಲಿಂದ ಓಡುತ್ತಲೇ ಹೋಗಿ ನಿಲ್ದಾಣದ ಭವನವನ್ನು ಸೇರಿಕೊಂಡ. ಕಿಕ್ಕಿರಿ ತುಂಬಿದ ಜನರಾಶಿ. ಗಲಾಟೆ, ಗದ್ದಲ, ಮಾತಿನ ಮರ್ಮರ ಮಳೆಯ ರಭಸಕ್ಕೆ ಶೃತಿಗೂಡುವಂತಹ ದೃಶ್ಯ. ಭೋರಾಡಿ ಸುರಿಯುವ ಮಳೆಯ ಹನಿಗಳು ಗಾಳಿಯ ಹೊಡೆತಕ್ಕೆ ಸಿಕ್ಕಿ ದೊಡ್ಡ ದೊಡ್ಡ ಕಿಟಕಿಯ ಗಾಜುಗಳಿಗೆ ರಪ್‌ರಪ್ಪನೆ ಅಪ್ಪಳಿಸುತ್ತವೆ. ಸಧ್ಯ ಮಳೆ ಕಡಿಮೆಯಾಗುವ ಸೂಚನೆಯೂ ತೋರುತ್ತಿಲ್ಲ. ವಾತಾವರಣ ಮಂಜುಮಯ. ವಿಮಾನ ಇಳಿಯುವ ಸಾಧ್ಯತೆಯೂ ಬಹಳ ಕಡಿಮೆ ಅಂದಮೇಲೆ? ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯಿತು ಮನದಲ್ಲಿ.

ನೂರಾರು ಕಾರುಗಳು ನಿಂತ ಅಂಗಣ ಇನ್ನೂ ನೀರಿನಿಂದ ಭರ್ತಿ. ಬಹುಶಃ ಮಳೆನಿಲ್ಲದೆಯೇ ಖಾಲಿಯಾಗಲಾರದೇನೋ ... ಬಣ್ಣಬಣ್ಣದ ಕಾರುಗಳು ಮಳೆಯ ನೀರಿನಿಂದ ತೊಳೆದು ಸ್ವಚ್ಛ ಶುಭ್ರವಾದುದನ್ನು ನಿಂತು ನೋಡಿ ಹಿಂದಿರುಗಿ ಬಂದು ಕುರ್ಚಿಯಲ್ಲಿ ಮಂಡಿಸಿದ ಪಾಂಡು. ಹಿಂದಿನಿಂದ ಯಾರೋ ಭುಜದ ಮೇಲೆ ಕೈಹಾಕಿದರು. ತಟ್ಟನೆ ತಿರುಗಿ ನೋಡಿದರೆ ಬಾಲ್ಯ ಗೆಳೆಯ ಕುಮಾರ್. ಪರಸ್ಪರ ದರ್ಶನ ಲಾಭದಿಂದ ಇಬ್ಬರ ಮುಖವೂ ಅರಳಿ ಹೂವಾಯಿತು.

“ಓ! ಏನು ಕುಮಾರ್ ಏಕೆ ಬಂದಿದ್ದಿ? ನಿನ್ನ ನೋಡಿ ಬಹಳ ದಿನಗಳೇ ಆಗಿದ್ದುವು.”

"ಹೌದು ... ಪಾಂಡೂ, ನೀನೇಕೆ ಬಂದಿದ್ದಿ? ನಿನ್ನ ಕುಮಾರ ಕಂಠೀರವ ಬರುತ್ತಾನೇನು?"

"ಹೌದು ಅನಂತು ಇದೇ ಪ್ಲೇನಿನಲ್ಲಿ ಬರಲಿದ್ದಾನೆ. ಈ ಮಳೆಯಿಂದ ವಿಮಾನ ಇಳಿಯುತ್ತೋ ಇಲ್ಲವೋ ಊಹಿಸುವುದು ಕಷ್ಟ." ವಿಷಾದ ವಾಣಿಯಲ್ಲಿ ನುಡಿದ ಪಾಂಡು.

"ನನ್ನ ತಮ್ಮನೂ ಬರುವುದು ಇದರಲ್ಲೇ .... ಹೇಗಿದಾರೆ ಸೌಧಾಮಿನಿ?"

"ಅವಳ ಕಾಹಿಲೆಯೆಲ್ಲ ಮಾನಸಿಕವಾದುದು. ಮನಸ್ಸಿಗೆ ಏನಾದರೊಂದು ಹಚ್ಚಿಕೊಂಡಳೆಂದರೆ ಶರೀರ ಕೆಡುತ್ತೆ ... ಅದೇ ಬಂದಿರುವುದು ಕಷ್ಟ."

"ಈಗ ಮನಸ್ಸಿಗೆ ಹಚ್ಚಿಕೊಳ್ಳುವಂತಾದ್ದು ಏನಿದೆ?"

"ಅದು ಅವಳಿಗೇ ಗೊತ್ತು."

"ಅಂದಹಾಗೆ, ನಿನ್ನ ತಂದೆತಾಯಿಗಳು ಹೇಗಿದ್ದಾರೆ? ನಾನು ಸುಬ್ರಮಣ್ಯಪುರ ಬಿಟ್ಟಮೇಲೆ ಅವರನ್ನು ನೋಡಿಯೇ ಇಲ್ಲ. ಗೋಪಿ ಬುದಿ ಹೀನನಾದುದರಿಂದ ಅವರ ಪರಮಲಕ್ಷ್ಯವೆಲ್ಲಾ ನಿನ್ನಮೇಲೆಯೇ ಇತ್ತು. ಪಾಂಡು ... ಪಾಂಡು ಎಂದು ಎಷ್ಟು ಮುದ್ದಿನಿಂದ ನಿನ್ನ ಕರೆಯುತಿದ್ದರು ಎಂಬುದು ಈಗಲೂ ನೆನಪಾಗುತ್ತದೆ."

"ನಿಜ..." ಪಾಂಡು ಸ್ವಲ್ಪ ಹೊತ್ತು ಮಾತಾಡದೆ ತನ್ನೊಳಗೇ ಯೋಚಿಸಿದ. ತಮ್ಮ ಬುದ್ಧಿಹೀನ. ನಾನು ದೂರವಾಗಿ ಉಳಿದೆ. ಉಳಿದವರು ಹೆಣ್ಣುಮಕ್ಕಳು......ನಿಜವಾಗಿಯೂ ಅವರಿಗೆ ಕೊನೆಗಾಲದಲ್ಲಿ ಸುಖಾಶ್ರಯ ತಪ್ಪಿತು. ಹೀಗಾಗಬಾರದಿತ್ತು......ಅಪ್ಪ ಅಮ್ಮ ನಾಗರಿಕ ಕಾಲಮಾನಕ್ಕೆ ಹೊಂದಿಕೊಂಡಿದ್ದರೆ ಬೆಳೆಯದಿತ್ತು...ಪರಿಸ್ಥಿತಿ ಖಂಡಿತ ಸುಧಾರಿಸುತಿತ್ತು. ಮತಿ ಮಾಂದ್ಯ ಬಡತನಕ್ಕೆ ದಾರಿಯಾಯ್ತು.

"ಸುಬ್ಬಾಭಟ್ಟರಿಗೆ ಏನಿತ್ತು, ಭೂಮಿ ಕಾಣಿಯೇ? ಹಣ ಕಾಸೇ? ಮನೆ ತುಂಬಾ ಮಕ್ಕಳು. ಸಂಸಾರಕ್ಕೆ ಭುಜ ಕೊಡಬೇಕಾದ ನೀನು ದೂರವಾದೆ.

ೋಪಿ ಬುದ್ಧಿವಂತನಾಗಿದ್ದಿದ್ದರೆ ಚಿಂತೆ ಇರಲಿಲ್ಲ. ನಿನ್ನನ್ನು ಓದಿಸಿ ಮುಂದೆ ುವ ಯೋಚನೆ ಅವರಿಗೆ ಇದ್ದೇ ಇತ್ತು. ನಿನ್ನಿಂದ ನೆಮ್ಮದಿ–ಸೌಖ್ಯ– ರ್ತಿಗಳನ್ನು ಹಾರೈಸಿದ್ದರು ಕೂಡ. ನೀನು ಇಂಗ್ಲೆಂಡಿಗೆ ಹೋದುದು ಅವ ೆ ಇಷ್ಟವಾಗಲಿಲ್ಲವೇನೋ..."

"ಉಹೂ...ಅವರೇನೂ ವಿರೋಧಿಸಲಿಲ್ಲ. ಇಂಗ್ಲೆಂಡಿನಲ್ಲಿ ನಾನು ಮರಾಠಿ ುಡುಗಿಯನ್ನು ಮದುವೆಯಾದುದು ಅವರಿಗೆ ಮನಸ್ಸು ಕೆಡಿಸಿತು. ಅವರು ಪ್ಪುವುದಿಲ್ಲವೆಂಬುದು ಗೊತ್ತಿದ್ದುದರಿಂದ ಅಬ್ರಾಹ್ಮಣಿಯನ್ನು ಮದುವೆ ಾಗಲು ನಾನು ಒಪ್ಪಿಗೆ ಕೇಳದಿದ್ದುದು ತಪ್ಪಾಯ್ತು. ಅದನ್ನೇ ತೀರಾ ಚ್ಚಿಕೊಂಡರು. ಅವರಿಗೆ ಮೊಮ್ಮಗಳನ್ನು ತಂದುಕೊಳ್ಳುವ ಇಚ್ಛೆಯಿತ್ತು. ಮು ಕೈತಪ್ಪಿತು...ಪೆಚ್ಚಾಗಿ ತಲೆ ಕೆಡಿಸಿಕೊಂಡು ದೂರವಾದರು."

"ಹೌದಪ್ಪಾ. ನಾಲ್ಕು ಮಂದಿ ಹೆಣ್ಣುಮಕ್ಕಳು. ಗೋಪಿ ಇದ್ದರೂ ಲ್ಲದಂತೆ. ಉಂಡು ತಿಂದು ಕೂತಿರುತ್ತಾನೆ. ಬದುಕಿಗೆ ಭಾರ......ಹೋಗಲಿ, ನು ಹಣ ಕಾಸನ್ನಾದರೂ ಸಹಾಯ ಮಾಡಬಹುದಾಗಿತ್ತು. ಅದಾದರೂ ಾಡಿದೆಯಾ...?"

"ಅಪ್ಪ ತುಂಬಾ ಸ್ವಾಭಿಮಾನಿ. ನನ್ನನ್ನು ಸಂಪೂರ್ಣ ದೂರೀ ಸಿದರು."

"ಅವರ ಬದುಕು ಹೇಗಿತ್ತು ಎಂಬುದು ನಿನಗೆ ಗೊತ್ತಿತ್ತು. ಬರೀ ರ್ಚಕರಾಗಿ ಜೀವನ ಅಂದರೆ ಹೇಗಿರಬೇಡ? ನಾಲ್ಕು ಜನ ಹೆಣ್ಣುಮಕ್ಕಳ ೀವನ ರೂಪಿಸಬೇಕಾದರೆ ಬಹಳ ಕಷ್ಟಪಟ್ಟಿದ್ದಾರೆ.... ತುಂಬಾ ಸಾತ್ವಿಕ ್ರಹ್ಮಣ. ಸರಕಾರದ ನಿರ್ಲಕ್ಷ್ಯ, ಮಗನ ದುರ್ಲಕ್ಷ್ಯ ಎರಡೂ ಅವರನ್ನು ಣಕ್ಕೆ ಕೊಟ್ಟುವು. ಅವರು ನಿನಗಾಗಿ ಹರಿಸಿದ್ದು ಕಣ್ಣೀರಲ್ಲ, ಕೆನ್ನೀರು, ಾಪ....!"

ಅವನು ಹೇಳುತ್ತಲೇ ಇದ್ದಾನೆ....ಒಂದೊಂದು ವಾಕ್ಯವೂ ಎದೆಯಾ ್ಕ ಭೈರಿಗೆಯಿಂದ ಕೊರೆಯುವಂತೆ ಇಳಿಯುತಿದ್ದುವು. ಪಾಂಡು ಮೌನ ರವಹಿಸಿದ. ಒಡಲು ಒಳಗಿಂದೊಳಗೇ ರೋದಿಸಿತು.

ಧ್ವನಿವರ್ಧಕದ ಮೂಲಕ ಅಲ್ಲಿನ ಪ್ರಾಧಿಕಾರಿವಾಣಿ ಮೊಳಗಿತು,

"ಮಳೆಗಾಳಿಯ ಪ್ರಕೋಪದಿಂದ ವಿಮಾನ ಭೂಸ್ಪರ್ಷಮಾಡಲಾಗದೆ ಹೈದರಾಬಾದಿಗೆ ಪಯಣಿಸಿತು. ಹವಾಮಾನ ಸರಿ ಹೋದನಂತರ ಅಲ್ಲಿಂದ ಹಿಂದಿರುಗುತ್ತದೆ."

ಸರಿ, ಇಬ್ಬರೂ ಎದ್ದರು.

"ಮನೆಗೆ ಬಾರಯ್ಯ. ಯಾವಾಗ ಬರುತ್ತಿ?" ಪಾಂಡು ಆಹ್ವಾನಿಸಿದ.

"ಆಗಲಿ, ನಾಳೆ ಅನಂತು ಬರುತ್ತಾನಷ್ಟೆ, ನಿನ್ನ ಕುಟುಂಬವನ್ನೂ ನೋಡಿದಂತಾಯಿತು. ಸಾಧ್ಯವಾದರೆ ನಾಳೆಯೇ ಬರುವೆ."

"ಖಂಡಿತ ... ಈಗ ಕಾರನ್ನಂತೂ ತೆಗೆಯುವಂತಿಲ್ಲ. ನಾವು ಬಸ್ಸು ಹಿಡಿದು ಹೋಗೋಣ."

ಅನಂತರ ಇಬ್ಬರೂ ಜಗಲಿಗೆ ಬಂದರು. ಮಳೆಯ ಆರ್ಭಟ ಏನೇನೂ ಕಡಿಮೆಯಾಗಿರಲಿಲ್ಲ. ಭವನದಲ್ಲಿ ನೆರೆದಿದ್ದ ಜನರೆಲ್ಲಾ ಬಸ್ಸಿನ ಮೂಲಕ ಹೋಗುವವರಿದ್ದರು. ಬಸ್ಸುಗಳು ಮೆಟ್ಟಿಲಿಗೆ ಬಂದೊಡನೆಯೇ ಭರ್ತಿ. ನೂಕು ನುಗ್ಗಲು ಕಡಿಮೆಯಾಗಲೆಂದು ಕಾದಿದ್ದರೆ ನಾಲ್ಕನೆಯ ಬಸ್ಸಿಗೆ ಸ್ಥಳ ಸಿಕ್ಕಿತು. ಪಾಂಡು ಹತ್ತಿದ. ಕುಮಾರ್ ಮುಂದಿನ ಬಸ್ಸಿಗಾಗಿ ಕಾದು ನಿಂತ. ಪಾಂಡು ಮನೆ ಮುಟ್ಟಿದಾಗ ರಾತ್ರಿ ಎಂಟು ಗಂಟೆ. ಸೌಧಾಮಿನಿ ಕಳವಳದಿಂದಲೇ ಕಾದಿದ್ದಳು. ಪಾಂಡು ವಿಷಯವನ್ನು ತಿಳಿಸಿದ ಮೇಲೆ ಮನಸ್ಸಿಗೆ ಎಷ್ಟೋ ಸಮಾಧಾನ. ಮಡದಿ ನಿರಾಳವಾಗಿ ಉಸಿರಾಡಿದಳು.

o o o o

ಹೊತ್ತು ಉರುಳಿತು. ಮಳೆಗಾಳಿಯ ಆರ್ಭಟವೂ ಮುಂದುವರಿಯಿತು.

ಒಂದೆರಡು ತಾಸಿನಲ್ಲಿ ಹೈದರಾಬಾದಿನಿಂದ ಅನಂತು ಫೋನ್ ಮಾಡಿ 'ನಾಳೆ ಬರುವೆ' ಎಂದು ತಿಳಿಸಿ ಕ್ಷೇಮ ಸಮಾಚಾರ ತಿಳಿದುಕೊಂಡ. ಉಭಯ ಕುಶಲೋಪರಿ ಫೋನಿಡುವವರೆಗೂ ನಡೆಯಿತು. ಪಾಂಡು ತಾಯಿಮಗನ ಸಂಭಾಷಣೆಯನ್ನು ಗಮನಿಸಿ ತನ್ನ ತಂದೆ ತಾಯಿಯರ ಪ್ರೀತಿಯನ್ನು ಮನದಲ್ಲೇ ಅಳೆದು ನೊಂದುಕೊಂಡ. ಹೃದಯದಾಳದಲ್ಲಿ ಸಂಕಟದ ಅಗ್ನಿಜ್ವಾಲೆ ಧಗಧಗಿಸಿತು.

ಾನ ಮುಖಿಯಾಗಿ ಪತ್ರಿಕೆಯ ಮೇಲೆ ಕಣ್ಣಾಡಿಸಿದ. ಮನಸ್ಸು ವಿಷಯ
ಹಣ ಮಾಡದೆ ಜೀವಮಾನದ ಪಾವಟಿಗೆಗಳನ್ನು ಚಕಚಕ ಇಳಿದು ಬಾಲ್ಯ
ಡೆಗೆ ಧಾವಿಸಿತು.

ಕಟ್ಟಾ ಬ್ರಾಹ್ಮಣ್ಯವಾದಿಯಾದ ತಂದೆತಾಯಿಗಳ ಆಶೋತ್ತರ
ಳನ್ನು ಔರಸಪುತ್ರನಾಗಿ ಏನೇನೂ ಸಲ್ಲಿಸಲಾಗದೆ ಉಳಿದು ತೀರಾ ಸ್ವಾರ್ಥಿ
ಯಾಗಿ ಬಾಳಿದ ವಿಷಯ ಚಿತ್ತಭಿತ್ತಿಯಲ್ಲಿ ಚಲನಚಿತ್ರದಂತೆ ಸುಳಿಸುಳಿ
ಳಿಯಿತು. ನಾಲ್ವರು ಮಾಸಲು ಉಡುಪಿನ ತಂಗಿಯರು ಬುದ್ಧಿಮಾಂದ್ಯ
ಹೊಂದಿದ ಗೋಪಿ ಸುತ್ತಮುತ್ತ ಸುಳಿದರು. ಆ ದೇವಾಲಯ, ಆ ಅರ್ಚಕತನ,
ಕೂಪಕೂರ್ಮ ನ್ಯಾಯ ಎದೆಯಾಳದಲ್ಲಿ ಕೈಯಾಡಿಸಿತು. ಪಾಂಡು ನಿಟ್ಟು
ರು ಬಿಟ್ಟ. ಅಪ್ಪ ಅಮ್ಮ ಸೇರಿಸದಿದ್ದರೆ ಹೋಗಲಿ, ತಂಗಿಯರ ಮನೆಗೆ
ಹೋಗಿ ಅವರಿಗೆ ಬೇಕು ಬೇಕಾದ ಸಹಾಯ ಮಾಡದೆ ಉಳಿದುದಂತೂ
ಕ್ಷಮ್ಯ ಅಪರಾಧ ... ಎದೆಯ ಹಕ್ಕಿ ಚೀರಿತು.

ಪಾಂಡು ಕಣ್ಣುಗಳನ್ನು ಮುಚ್ಚಿ ನೋವನ್ನು ನುಂಗಿದ.

ಸೌಧಾಮಿನಿ ಫೋನ್ ಸಂಪರ್ಕ ಕಡಿದು "ಊಟ ಮಾಡೋಣವೇ"
ಎಂದಾಗ ಮನಸ್ಸು ಇತ್ತ ಹೊರಳಿತು. ಅವಳು ಒಳಹೋದಳು. ಅವಳನ್ನು
ಹಿಂಬಾಲಿಸಿದ ಪಾಂಡು. ಊಟ ಏನೋ ಒಂದು ರೀತಿಯಲ್ಲಿ ಗಂಭೀರ
ಮೌನದಿಂದ ಸಾಗಿತು. ಆಂತರಿಕ ತುಮುಲ ಮನವನ್ನು ಹಿಂಡುತ್ತಲೇ
ಇತ್ತು. ಕೊನೆಯ ತುತ್ತನ್ನು ನುಂಗಿ ನೀರು ಕುಡಿದು ಹೊರಬಂದ ಪಾಂಡು.
ಟಿ.ವಿ.ಯಲ್ಲಿ ಸುಶ್ರಾವ್ಯವಾದ ಸಂಗೀತ ಕಾರ್ಯಕ್ರಮವಿತ್ತು. ಆಲೈಸುತ್ತಿ
ದ್ದಂತೆಯೇ ಸೌಧಾಮಿನಿಯೂ ಬಂದು ಕುಳಿತಳು.

"ಅನಂತು ಬಂದನಂತರ ಮಳಲಿಗೆ ಹೋಗಿ ಬರಲು ಯೋಚಿಸಿರುವೆ.
ಅವನನ್ನು ಕರೆದುಕೊಂಡು ಹೋದರೆ ಅಪ್ಪ ಏನಾದರೂ ದಾರಿಗೆ
ಬಂದಾರೇನೋ ಎನಿಸುತ್ತೆ. ಒಂದು ವೇಳೆ ಬರದಿದ್ದರೆ ಮಾಡುವುದೇನು ?
ನೋಡಿಕೊಂಡು ಬಂದಂತಾಗುತ್ತೆ, ಅಷ್ಟೆ .... ಅಂತೂ, ನಾನು ಸರ್ವಾಪರಾಧಿ
ಎಂಬುದನ್ನು ಒಪ್ಪಿಕೊಳ್ಳಲೇಬೇಕು."

ಸೌಧಾಮಿನಿಯು ತನ್ನಲ್ಲೇ ... ಇಂಗ್ಲೆಂಡಿನಿಂದ ಬಂದೊಡನೆಯೇ ಅನಂತು ಆ ಊರು ಕೇರಿಗಳಿಗೆ ಹೋಗಿಬಂದರೆ ಯಾವಯಾವ ರೋಗದ ಸೋಂಕು ತಗಲುವುದೋ ಎಂದುಕೊಂಡಳು. ತುಟಿಗಳು ಬಿರಿಯಲಿಲ್ಲ. ಅವನು ಮುಂದುವರಿದ "ಅಪ್ಪ ಅಮ್ಮ ನನ್ನನ್ನು ತಿರಸ್ಕರಿಸಿದ್ದು ನಿಜ. ಆದರೆ ತಂಗಿಯರಿಗೆ ನಾನು ಏನಾದರೂ ಸಹಾಯ ಮಾಡಬೇಕಿತ್ತು; ಹಾಗೆ ಮಾಡ ದಿದ್ದುದು ನಿಜವಾಗಿಯೂ ಮನಸ್ಸನ್ನು ನೋಯಿಸಿದೆ."

"ಆಗ ಮಾಡದೆಯೇ ಈಗ ಮಾಡಹೋದರೆ ಅವರೂ ತಿರ ಸ್ಕರಿಸಬಹುದು."

"ನಾನು ಹನ್ನೆರಡು ವರ್ಷ ಇಂಗ್ಲೆಂಡಿನಲ್ಲೇ ಉಳಿದು ಇಲ್ಲಿಯ ಸಂಪರ್ಕ ಸಂಪೂರ್ಣ ತಪ್ಪಿ ಹೋದುದರಿಂದ ಎಲ್ಲರನ್ನೂ ಮರೆಯಲು ಕಾರಣವಾಯ್ತು. ಇಂಗ್ಲೆಂಡಿನಿಂದ ಬಂದೊಡನೆಯೇ ನಾನು ಮಳಲಿಗೆ ಹೋಗಿ ಬಂದೆನಷ್ಟೆ. ಆಗ ಹಿರಿಯ ತಂಗಿಯರಿಬ್ಬರೂ ಇದ್ದರು. ಅವರೂ ಕೂಡ ನನ್ನನ್ನು ಮಾತಾಡಿಸ ಲಿಲ್ಲ. ಬಿಡು, ಏನೇನೋ ಆಗಿಹೋಯಿತು. ನಾನು ಕರ್ತವ್ಯಚ್ಯುತನಾಗಿರುವೆ ಎಂಬುದನ್ನು ಒಪ್ಪಿಕೊಳ್ಳಲೇಬೇಕು" ದನಿ ಕಳಕಳಿಯಿಂದ ಹೊರಬಿತ್ತು.

ಸೌಧಾಮಿನಿ ಮಾತಾಡಲಿಲ್ಲ ಮುಗುಳುನಕ್ಕಳು. ಆದರೆ, ಪಾಂಡುವಿನ ಅಂತರಂಗದ ಪರಿಯೇ ಬೇರೆ. ನಾನೇಕೆ ಇಷ್ಟು ನಿಷ್ಠುರನಾದೆ ಎಂಬುದೇ ಅರ್ಥವಾಗುತ್ತಿಲ್ಲ. ಮುಂದೇನು ಮಾಡಿದರೆ ಸರಿಹೋಗುತ್ತದೆ......? ಏನು ಮಾಡಲಿ? ಅದು ಅವನ ಮುಂದಿನ ಪ್ರಶ್ನೆ.

೦ ೦ ೦ ೦

ಅನೇಕ ವರ್ಷಗಳನಂತರ ಕಣ್ಮುಂದೆ ಪ್ರತ್ಯಕ್ಷನಾದ ಅನಂತು. ಅಂದಿಂ ದಿನ ದೈಹಿಕ ಅನಾರೋಗ್ಯವನ್ನೆಲ್ಲಾ ಮರೆತು ಉತ್ಸುಕಳಾದಳು ಸೌಧಾಮಿನಿ. ಕ್ಷೀಣಿತ ದೇಹ ಲವಲವಿಕೆ ಹೊಂದಿತು. ಮಾತು...ಮಾತು. ನಾಲ್ಕೈದು ವರ್ಷಗಳ ವಿಷಯವೆಲ್ಲಾ ಒಂದೇ ಬಾರಿಗೆ ಚರ್ವಿತ ಚರ್ವಣವಾಯಿತು. ಸಂತ ಸದ ನೆಲೆಯಲ್ಲಿ ಹೊತ್ತು ಸಾನಂದದಿಂದ ಉರುಳಿತು.

ದಂಪತಿಗಳು ಇಂಗ್ಲೆಂಡ್ ಬಿಟ್ಟು ಬರುವಾಗ ಶಾಲೆಯ ಬಾಲಕ ಅನಂ

ತುವನ್ನು ಹಾಸ್ಟಲಿನಲ್ಲಿ ಸೇರಿಸಿ ಬಂದಿದ್ದರು. ಅನಂತರ ಅವನು ಬಂದುದು ಈಗಲೇ. ಈಗ ನೋಡಿದರೆ ಎತ್ತರವಾಗಿ ಬೆಳೆದಿದ್ದಾನೆ. ಆಜಾನುಬಾಹು. ಒಳ್ಳೆ ಲಕ್ಷಣವಂತ ಹುಡುಗ, ಒಮ್ಮೆ ನೋಡಿದರೆ ಇನ್ನೊಮ್ಮೆ ನೋಡೋಣ ಎನಿಸುವಂತಹ ವ್ಯಕ್ತಿತ್ವ.

ಹೊರ ಬಾಗಿಲ ಕರೆಗಂಟೆ ಕರೆ ನೀಡಿತು.

ಕುಕ್ಕೂ. ಕುಕ್ಕೂ. ಕುಕ್ಕೂ.

ಕದ ತೆರೆದವನು ಅನಂತು.

"ಅರೆರೆ, ನೀನು ಅನಂತು ತಾನೇ?"

ಆ ಮಾತಿನ ದನಿಯನ್ನು ಗುರುತಿಸಿ ಪಾಂಡು ಹೊರಬಂದ. ನೋಡಿದರೆ ಕುಮಾರ್ ಮೈಯೆಲ್ಲಾ ಸಂತಸವೇ ಆಗಿದ್ದಾನೆ. ಮುಖದ ತುಂಬ ಸಂತಸದ ಹೊನಲು ಹೊನ್ನಾಗಿ ಹರಿದಿದೆ.

"ಪಾಂಡೂ! ಇವನ ವಯಸ್ಸಿನಲ್ಲಿ ನೀನು ಇದ್ದುದು ಹೀಗೆಯೇ ತದ್ರೂಪು!"

ಪಾಂಡು ಗೆಳೆಯನನ್ನು ಮಗನಿಗೆ ಆನಂದದಿಂದ ಪರಿಚಯಿಸಿ ಒಳಗೆ ಬರಮಾಡಿಕೊಂಡ. ಮಾತುಕತೆಯೂ ಆಯಿತು. ಸೌಧಾಮಿನಿಯೊಡನೆ ನಾಲ್ಕು ಮಾತಾಡಿ ಕುಮಾರ್ ಹೊರಟುಹೋಗುವ ಮುನ್ನ ಪಾಂಡುವಿಗೆಂದ,

"ಅನಂತುವನ್ನು ಕರೆದುಕೊಂಡು ಮಳಲಿಗೆ ಹೋಗಿ ಬಾ. ಸುಬ್ಬಾಭಟ್ಟರು ಈಗೇನು ಅಸ್ವಾವಸ್ಥೆಯಲ್ಲಿರುತ್ತಾರೆ. ಮೂರು ನಾಲ್ಕು ತಿಂಗಳಿಂದ ಹಾಸಿಗೆ ಹಿಡಿದಿದ್ದಾರೆ ಎಂದು ಈಗಷ್ಟೇ ಯಾರೋ ಹೇಳಿದರು. ಬಹುಶಃ ನೀನು ಕರೆದರೂ ಅವರು ಬರಲಾರರೇನೋ.......ಹೋಗಿ ನೋಡಿಕೊಂಡು ಬರುವುದು ನಿನ್ನ ಕರ್ತವ್ಯ."

"ನಾಳೆಯೇ ಹೋಗಿ ನೋಡುವೆ, ಒಪ್ಪಿದರೆ ಕರೆತರುವೆ."

"ಒಳ್ಳೆಯದು, ಹೋಗಿ ಬಾ, ಬಹಳ ನೊಂದ ಜೀವ."

ಕುಮಾರ್ ಎಲ್ಲರಿಗೂ 'ಗುಡ್ ಬೈ' ಹೇಳಿದ. ಮೂವರೂ ತಲೆಬಾಗಿ ಲಲ್ಲಿ ನಿಂತು ಬೀಳ್ಕೊಟ್ಟರು. ಅವನು ಕಾರು ಹತ್ತಿ ಹೊರಟ. ತಿಳಿ ನೀಲಿಯ ಕಾರು ಥಳಥಳಿಸಿತು ಹೂಬಿಸಿಲಿನ ಝಳಕ್ಕೆ ಮೈಗೊಟ್ಟು.

o o o o

ಪಾಂಡು ಮಗನೊಂದಿಗೆ ಸುಭ್ರಮಣ್ಯಪುರವನ್ನು ಕುರಿತು ಹೊರಟ. ಕಾರು ನಡೆಸುತಿದ್ದವನು ಅವನೇ. ಅದ್ದೂರಿಯ ಕಾರು ಕೆಟ್ಟ ರಸ್ತೆಯಾದ್ದರಿಂದ ನಿಧಾನವಾಗಿ ಹರಿಯಿತು. ಅನಂತುಗೆ ಈ ದೇಶ ಹೊಸದು. ಇಲ್ಲಿಯ ಜನ, ನಗರ, ಹಳ್ಳಿ ಎಲ್ಲವೂ ಅಪರಿಚಿತವಾದ್ದರಿಂದ ವಸ್ತು ವಸ್ತುವನ್ನೂ ಆಸ್ಥೆಯಿಂದ ನೋಡುವ ಅತೀವ ಶ್ರದ್ಧೆ ಮನದಲ್ಲಿ. ಕಾರು ಸುಭ್ರಮಣ್ಯಪುರವನ್ನು ಮುಟ್ಟಿದಾಗ ಸೂರ್ಯ ಗಗನ ನೆತ್ತಿಯನ್ನು ಏರುತಿದ್ದ. ನಗರ ವಲಯ ಚಟುವಟಿಕೆಯಿಂದ ಕೂಡಿತ್ತು. ನಗರದ ಸ್ಥಿತಿಗತಿ ನೋಡಿದರೆ ಸರಕಾರ ಇದೆಯೋ ಇಲ್ಲವೋ ಎಂಬಷ್ಟು ಅವ್ಯವಸ್ಥೆಯ ಬೀಡು. ಅಲ್ಲಿಯ ಯಾವ ಹೋಟೆಲನ್ನು ಹೊಕ್ಕು ನೋಡಲು ಮನಸ್ಸು ಬಾರದಷ್ಟು ಕೊಳಕು. ವಿಧಿಯಿಲ್ಲ, ನೂರಾರು ಮೈಲಿಯ ಪಯಣ ಮಾಡಿದ್ದಾಗಿದೆ. ಇನ್ನು ಮಧ್ಯಾಹ್ನದ ಕತೆ ಏನೋ, ಎಂತೋ. ಈಗಲೇ ಒಂದಿಷ್ಟು ಹೊಟ್ಟೆಗೆ ಹಾಕದೆ ವಿಧಿಯಿಲ್ಲ. ಇಬ್ಬರೂ ಯಾವುದೋ ಹೋಟೆಲಿನಲ್ಲಿ ಇಡ್ಲಿ ಚಹ ತೆಗೆದುಕೊಂಡು ಕಾರನ್ನು ಅಲ್ಲಿಯೇ ಬಿಟ್ಟು ಮಳಲಿಗೆ ಕಾಲ್ನಡಿಗೆಯಲ್ಲಿ ಹೊರಟರು. ಅಲ್ಲಿಂದ ನಾಲ್ಕು ಮೈಲಿ ರಸ್ತೆಯಿಲ್ಲ. ಉಬ್ಬು ತಗ್ಗುಗಳಿಂದ ಕೂಡಿದ ವನಧಾತ್ರಿ. ಈಚಲು ಗಿಡಗಳು ಒತ್ತೊತ್ತಾಗಿ ಬೆಳೆದ ಗುಡ್ಡಗಾಡು ಪ್ರದೇಶ. ಅಲ್ಲಲ್ಲಿ ಗದ್ದೆ ಹೊಲ ತೋಟಗಳೂ ಇವೆ, ಗುಡಿಸಲುಗಳೂ ಕಾಣಿಸುತ್ತವೆ.

"ಜಗತ್ತು ನಾಲ್ಕೂ ನಿಟ್ಟಿನಿಂದ ಮುಂದುವರಿಯುತ್ತಿದೆ. ನಮ್ಮವರೇಕೆ ಇನ್ನೂ ಹೀಗೆ?" ಅನಂತು ಕೇಳಿದ.

"ಜಡ ಭರತರು."

“ಇಲ್ಲಿ ಸುಧಾರಣೆಯೆಂದರೆ ಇನ್ನೊಂದು ಶತಮಾನ ಬೇಕೋ ಏನೋ.”

“ನಿಜ ಅಣ್ಣ. ನಾನು ಈ ಬಡತನ ಜಡತನಗಳನ್ನು ಸಹಿಸಲಾಗದೆ ಊರು ಬಿಟ್ಟೆ. ಯಾವ ದೈವದ ಉಪಕಾರವೋ ನನ್ನನ್ನು ಊರು ಬಿಡಿಸಿತು. ಸರಕಾರಕ್ಕೆ ಈ ಪ್ರದೇಶದ ಅರಿವಿಲ್ಲ; ಅಥವಾ ಈ ಜನರಿಗೆ ಸರಕಾರದ ಅರಿವಿಲ್ಲ. ಹೇಗೆಂದರೂ ಸರಿಯೆ. ಅಂತೂ, ಈ ಪ್ರದೇಶ ನಿರ್ಜೀವವಾಗಿ ಉಳಿದಿದೆ. ಮುಂದೆಯೂ ಸಹ......ಅಂದಿಂದಿಗೂ ಯಾವ ಬದಲಾವಣೆಯೂ ಆಗಿಲ್ಲ. ಉರುವಲಿಗಾಗಿ ಕಾಡು ಕಡಿದೂಕಡಿದು ಬೋಳು ಮಾಡಿದ್ದಾರೆ. ಉರುವಲಿಗಾಗಿ ಬೇರೆ ವ್ಯವಸ್ಥೆಯಿಲ್ಲ, ಕಾಡು ಬೆಳೆಸುವ ಬುದ್ಧಿಯೂ ಇಲ್ಲ. ಈ ದಿಶೆಯಲ್ಲಿ ಸರಕಾರ ಯಾವ ಕ್ರಮವನ್ನೂ ಕೈಗೊಂಡಿಲ್ಲ. ಜನರಿಗೂ ವಿದ್ಯೆ ಬುದ್ಧಿ ಇಲ್ಲ. ಎಲ್ಲಾ ಸರಿಹೋಗಿದೆ.”

ಅನಂತು ಲೋಕಾಭಿರಾಮವಾಗಿ ಅಂದ “ತಾತನಿಗೆ ನೀವು ಅರ್ಚಕರಾಗಿ ಇಲ್ಲಿಯೇ ಇರಬೇಕೆಂಬ ಬಯಕೆ ಇತ್ತೇನೋ.......”

“ಹಾಗೇನಿರಲಿಲ್ಲ. ನನ್ನನ್ನು ಓದಿ ವಿದ್ಯಾವಂತನನ್ನಾಗಿಸುವ ಉದ್ದೇಶದಿಂದಲೇ ಬೆಂಗಳೂರಿಗೆ ಕಳುಹಿಸಿದ್ದು. ಇಂಗ್ಲೆಂಡಿನ ಪಯಣಕ್ಕೆ ವಿರೋಧವಿಲ್ಲ. ಅಬ್ರಾಹ್ಮಣಿಯನ್ನು ಪಾಣಿಗ್ರಹಣ ಮಾಡಿಕೊಳ್ಳುವುದು ಇಷ್ಟವಿರಲಿಲ್ಲ. ನಾನವರಿಗೆ ಹೇಳಿ ಕೇಳಿ ಅನುಮತಿ ಪಡೆಯಬೇಕಿತ್ತು. ಅದು ನನ್ನ ದೊಡ್ಡ ತಪ್ಪಾಗಿದೆ.”

ಅನಂತು ತನ್ನಲ್ಲೇ ಯೋಚಿಸಿದ, ಮಾತಾಡಲು ಮನಸ್ಸು ಬರಲಿಲ್ಲ.

ಪಾಂಡು ವಿಷಾದ ವಾಣಿಯಲ್ಲಿ ನುಡಿದ “ಅವರು ನನ್ನ ಸುಖಾಶ್ರಯದಲ್ಲಿ ಜೀವನ ಪ್ರಗತಿಯನ್ನು ಕಾಣಬಯಸಿದ್ದು ಸಹಜವೇ. ನನ್ನ ತಮ್ಮ ಮಾನಸಿಕವಾಗಿ-ಬೌದ್ಧಿಕವಾಗಿ ಹಿಂದುಳಿದವನು. ಅವನ ಕ್ಷೇಮ ಇತರೆಯವರೇ ನೋಡಿಕೊಳ್ಳಬೇಕು. ಸಂಸಾರಕ್ಕೆ ಅವನೊಂದು ಹೊರೆ. ನಾಲ್ಕು ಜನ ಹೆಣ್ಣುಮಕ್ಕಳಿಗೂ ಮದುವೆ ಮಾಡಿದ್ದಾರೆ. ಯಾರೂ ಉತ್ತಮ ಸ್ಥಿತಿ

ಯಲ್ಲಿಲ್ಲ. ಈ ಎಲ್ಲಾ ಕಾರಣದಿಂದ ಅಪ್ಪ–ಅಮ್ಮ ನನ್ನ ಮೇಲೆ ತಮ್ಮೆಲ್ಲಾ ಆಶೆ-ಆಕಾಂಕ್ಷೆಗಳನ್ನು ಕೇಂದ್ರೀಕರಿಸಿದುದರಲ್ಲೂ ಅರ್ಥವಿದೆ. ಕೊನೆಗೆ ಆದುದೆಲ್ಲಾ ವಿಪರ್ಯಾಸ–ವಿರಸ."

"ಬಹುಶಃ ಎಲ್ಲಾ ದೈವಾಯತ್ತವಾಗಿಯೇ ಆಗಿರಬೇಕು-"

"ಯಾವುದು ಆಗಬಾರದಿತ್ತೋ ಅದು ಆಗಿ ಹೋಗಿದೆ. ಅಮ್ಮನಿಗೂ ನನ್ನ ಮೇಲೆ ತುಂಬಾ ಅಸಮಾಧಾನ. ನಾನು ಇಂಗ್ಲೆಂಡಿನಿಂದ ಬಂದಾಗೊಮ್ಮೆ ಹೋಗಿದ್ದೆ. ಅಮ್ಮ ಹಾಸಿಗೆ ಹಿಡಿದಿದ್ದರು. ಎಷ್ಟೆಷ್ಟೋ ಕರೆದೆ. ಅಮ್ಮ ಒಪ್ಪಲಿಲ್ಲ. ಕೊನೆಗೆ ಅವರು ಗತಿಸಿದ ಸುದ್ದಿಯನ್ನೂ ನನಗೆ ತಿಳಿಸುವ ಕೃಪೆ ತೋರಲಿಲ್ಲ ಅಪ್ಪ. ಎಲ್ಲರೂ ತುಂಬ ಕಷ್ಟದಲ್ಲಿದ್ದಾರೆ ನಿಜ. ಹಿರಿಯ ತಂಗಿ ಸಾವಿತ್ರಿ ವಿಧವೆಯಾಗಿ ಮಕ್ಕಳೊಡನೆ ಇಲ್ಲಿಯೇ ಬಂದು ಸೇರಿಕೊಂಡಿದ್ದಾಳೆ. ಅವಳ ಮಗನೇ ದೇವಸ್ಥಾನದ ಪೂಜೆ ಹಿಡಿದಿದ್ದಾನೆ. ಇವರಿಗೆ ಯಾವ ರೀತಿ ಸಹಾಯ ಒದಗಿಸಬೇಕೋ ನನಗೆ ತಿಳಿಯುತ್ತಿಲ್ಲ."

"ಈ ಊರಿನ ಬ್ಯಾಂಕಿನಲ್ಲಿ ಒಂದು ಲಕ್ಷ ರೂಪಾಯಿಯನ್ನು ಇಡುಗಂಟಾಗಿಟ್ಟು ಬಡ್ಡಿ ತೆಗೆದುಕೊಳ್ಳಿ ಎನ್ನಬಹುದು."

"ಅವರೊಪ್ಪಿದರೆ..........." ನಿಟ್ಟುಸಿರೊಂದು ಹೊರಹೊಮ್ಮಿತು. ಖಿನ್ನಮುಖಿಯಾದ ಪಾಂಡು, ಒಡಲ ಸಂಕಟ ಮುಖಬಿಂಬದಲ್ಲಿ ಮುದ್ರೆಯೊತ್ತಿತು.

o o o o

ದೂರದಲ್ಲಿ ದೇವಾಲಯದ ಮಹಾ ಗೋಪುರ ದೃಷ್ಟಿಗೆ ಬಿತ್ತು. ಅದರೆಡೆಗೆ ಬೆರಳು ತೋರಿ "ಅನಂತೂ, ನೋಡು ಅದೇ ದೇವಸ್ಥಾನ. ಇಲ್ಲಿಂದ ಇನ್ನು ಒಂದು ಫರ್ಲಾಂಗ್ ಮಾತ್ರ."

ಇಬ್ಬರ ಹೆಜ್ಜೆಗಳೂ ಚುರುಕುಗೊಂಡುವು, ಕೆಲವೇ ನಿಮಿಷಗಳಲ್ಲಿ ಹಾದಿ ಕಳೆಯಿತು. ದೇವಸ್ಥಾನದ ಬಾವಿಯಲ್ಲಿ ನೀರು ಸೇದಿ ಇಬ್ಬರೂ ಕೈಕಾಲು ಮುಖ ತೊಳೆದುಕೊಂಡರು. ನೀರು ತಣ್ಣಗಿತ್ತು. ಮನಸ್ತೃಪ್ತಿಯಾಗು

ನಂತೆ ಮಜ್ಜನ ಪೂರೈಸಿ ದೇವರಿಗೊಂದು ಉದ್ದಂಡ ನಮಸ್ಕಾರ ಹಾಕಿ ಪೌಳಿಯ ಮೂಲೆಯಲ್ಲಿದ್ದ ವಸತಿಯತ್ತ ನಡೆದರೆ ಮೊಟ್ಟಮೊದಲು ದರ್ಶನ ವಾದುದು ಗೋಪಿಯ ಜೋಲುಮುಖ. ಜಗಲಿಯ ಬದಿಯಲ್ಲಿ ಕುಳಿತಿದ್ದ ಅವನು ಆಗಂತುಕರನ್ನು ಗಮನಿಸಲಿಲ್ಲ ಕೂಡ. ಮೆಟ್ಟಿಲು ಏರುವ ಮುನ್ನ ಅವನ ತಲೆಯನ್ನು ನಲ್ಮೆಯಿಂದ ನೇವರಿಸಿ 'ಏನಪ್ಪಾ, ಗೋಪು?' ಎಂದ ಪಾಂಡು, ನುಗ್ಗಿದ ದನಿಯಲ್ಲಿ. ಅತೀವ ಮುಜುಗರ-ಕಸಿವಿಸಿ-ಕನಿಕರ ಮೂಡಿತು, ಎದೆಯಾಳದಲ್ಲಿ.

ಕೊಳಕು ಮೈ ಮಾಸಲು ಬಟ್ಟೆಯ ಗೋಪು ಹುಬ್ಬೆತ್ತಿ ಪಿಳಿಪಿಳಿ ನೋಡಿದ ಅಷ್ಟೆ. ತುಟಿಗಳು ಬಿರಿಯಲಿಲ್ಲ, ಮುಖಭಾವವೂ ಬದಲಾಗಲಿಲ್ಲ. ಗುರುತು ಹತ್ತಿತೋ ಇಲ್ಲವೋ ಅದೂ ಹೇಳುವಂತಿಲ್ಲ.

ಪಾಂಡು ಮಗನೊಡನೆ ಒಳಹೋದ. ತೀರಾ ಜೀರ್ಣಿತವಾದ ಮನೆ. ಗೋಡೆಯಲ್ಲಿ ಗಾರೆಯು ಕಳಚಿ ಬಿದ್ದು ಕಲ್ಲುಕಲ್ಲುಗಳೂ ಇತ್ತಲೇ ನಿಟ್ಟಿಸು ವಂತಿವೆ. ಹೊಗೆ ಹತ್ತಿ ಕರಿಕಾದ ಮನೆ, ನೆಲದ ಗಾರೆಯೂ ಕಿತ್ತು ಹೋಗಿ ಉಬ್ಬು ತಗ್ಗುಗಳಾಗಿವೆ. ಆ ಮನೆಗಿದ್ದುದು, ಒಂದು ಅಡಿಗೆ ಮನೆ, ಒಂದು ಒಳ ಕೊಠಡಿ, ನಡುಮನೆ ಇಷ್ಟೆ. ದೇವಾಲಯದಷ್ಟೇ ಪೌಳಿಯೂ ಪುರಾತನ. ಒಳಕೋಣೆಯ ಕಿಟಕಿಯ ಬಳಿ ಜೀರ್ಣಿತವಾದ ಹಾಸಿಗೆಯ ಮೇಲೆ ಮಲಗಿದ್ದ ತಂದೆ. ಹಾಸಿಗೆಯಷ್ಟೇ ತಂದೆಯ ಶರೀರವೂ ಜೀರ್ಣಿತ. ಇತ್ತಲೇ ನಿಟ್ಟಿಸು ತಿದ್ದ ಕಣ್ಣುಗಳಿಗೆ ಬೆಳಕಿಗೆ ಅಡ್ಡಲಾಗಿ ನಿಂತವರ ಗುರುತು ಹತ್ತಲಿಲ್ಲವೇನೋ. ಎವೆಯಿಕ್ಕದೆ ನೋಡುತ್ತ "ಸಾವಿತ್ರೀ" ಎಂದು ಕರೆದಾಗ ದನಿ ವಿಕಂಪಿಸಿತು. ಪಾಂಡು ಮೈ ಬಾಗಿ ಬಳಿಯಲ್ಲಿ ಕುಳಿತ.

"ಅಪ್ಪಾ, ನಾನು ಪಾಂಡು" ಎಂದ, ಕರುಣ ಕಾತರತೆಯಿಂದ; ದನಿ ಗದ್ಗದಿಸಿತು.

ಹಾಸಿಗೆಯ ಬಳಿಯಲ್ಲಿ ಕುಳಿತ ಇಬ್ಬರನ್ನೂ ನೋಡಿತು ಶೀರ್ಣಿತ ದೃಷ್ಟಿ. ಸಾವಿತ್ರಿ ಅಡುಗೆ ಮನೆಯಿಂದ ಹೊರಬಂದಳು. ವಿಧವಾವೇಶ ತಳೆ ದಿದ್ದ ಅವಳ ಸುತ್ತಮುತ್ತ ತಬ್ಬಲಿ ಮಕ್ಕಳು. ಆ ಘೋರ ಬಡತನದಲ್ಲೇ

ಮತ್ತೊಂದು ಬಡತನದ ಸೇರ್ಪಡೆ. ಅವಳ ಉಡುಪು–ಶರೀರ ಒಂದಕ್ಕೊಂದು ಹೊಂದಿಕೊಂಡ ರೀತಿ ಅತ್ಯಂತ ಕಾರುಣ್ಯಪೂರ್ಣ ಚಿತ್ರ. ಪಾಂಡು ಎದೆಯಾಳದಿಂದ ನಿಟ್ಟುಸಿರನ್ನು ಹೊರಹಾಕಿದ. ಹೃದಯ ಭಾರವಾಯಿತು.

ಅನಂತು ತಾತನ ಮುಖದತ್ತ ಬಾಗಿ "ನಾನು ಅನಂತು, ನಿಮ್ಮ ಮೊಮ್ಮಗ" ಎಂದ.

ಅದುವರೆವಿಗೂ ಮಗನನ್ನು ಪರಿಚಯಿಸುವುದೂ ಮರೆತು ಹೋಗಿತ್ತಲ್ಲ...ಎಂದು ತಂತಾನೇ ನಾಚಿಕೊಳ್ಳುವಂತಾಯಿತು ಪಾಂಡುರಂಗರಾಯನಿಗೆ. ಸಾವಿತ್ರಿ ಪ್ರೈಮರವಟ್ಟಂತೆ ಇಬ್ಬರನ್ನೂ ಎವೆಯಿಕ್ಕದೆ ನೋಡಿದಳು. ಒಡಲಾಳದಲ್ಲಿ ವಿಶ್ವಾಸಾವಿಶ್ವಾಸಗಳು ಗೊಂದಲ ಹೂಡಿದುವು. ನಿಂತ ನಿಲುವು ಹಂದಲಿಲ್ಲ, ದೃಷ್ಟಿಯೂ ಚಲಿಸಲಿಲ್ಲ, ತುಟಿಗಳೂ ಬಿರಿಯಲಿಲ್ಲ, ಎದೆಯಾಳದಲ್ಲಿ ಬಿಸಿಯುಸಿರು ಅಸಹನೆಯಿಂದ ಹರಿದಾಡಿತು.

ಪಾಂಡು ಒಂದೇ ಒಂದು ಕ್ಷಣದಲ್ಲಿ ಅವಳ ಸ್ಥಿತಿಗತಿಯನ್ನು ಅಳೆದು ನೊಂದು ನೀರಾಗಿ ವಿದೀರ್ಣವಾದ ದನಿಯಲ್ಲಿ ಕುಶಲ ಪ್ರಶ್ನೆ ಮಾಡಲಾರದೇ ಮಾಡಿದ.

"ಏನು ಚೆಂದವೋ ಬಿಡು, ದೇಹ ಬಿಡುವವರೆಗೆ ಜೀವ ಹಿಡಿಯುವುದುಂಟಲ್ಲ......"

"ಅಪ್ಪ ಎಷ್ಟು ದಿನದಿಂದ ಹಾಸಿಗೆ ಹಿಡಿದಿದ್ದಾರೆ? ಡಾಕ್ಟರಿಗೆ ತೋರಿಸಿದಿರಾ? ಔಷಧಿ ತೆಗೆದುಕೊಳ್ಳುತ್ತಿದ್ದಾರೆಯೆ? ಜ್ವರ ಬರುತ್ತಿದೆಯೆ? ಅಥವಾ.... ಬೇರೆ ಏನಾದರೂ....?"

ಪ್ರಶ್ನೆಗಳ ಮೇಲೆ ಪ್ರಶ್ನೆಗಳು ಒಂದರ ಮೇಲೊಂದಾಗಿ ಹೊರಬೀಳುತ್ತಲೇ ಇದ್ದರೆ ಏನು ಹೇಳಬೇಕೆಂಬುದೇ ತೋರದೆ ಚಿಂತಿತಳಾಗಿ ಉದಾಸೀನದಿಂದ ಉತ್ತರಿಸಿದಳು "ಒಂದೆರಡು ಸಲ ಅವರು ಸುಬ್ರಮಣ್ಯಪುರಕ್ಕೆ ಹೋಗಿ ಬಂದುದುಂಟು. ಈ ದಿನಗಳಲ್ಲಿ ಹೋಗಿ ಬರುವುದಾದರೂ ಹೇಗೆ ? ಹಾಸಿಗೆ

ಹಿಡಿದು ಮೂರು ತಿಂಗಳಾಯಿತು. ನನ್ನ ಮಗ ಡಾಕ್ಟರಲ್ಲಿಗೆ ಹೋಗಿ ಔಷಧ ತರುತ್ತಾನೆ. ಇವನು ಏನು ಹೇಳುತ್ತಾನೋ ಅವರು ಏನು ಕೊಡುತ್ತಾರೋ ದೇವರಿಗೇ ಗೊತ್ತು. ರೋಗ ದಿನೇ ದಿನೇ ವೃದ್ಧಿಸುತ್ತಲೇ ಇದೆ. ಇನ್ನೇನಿದ್ದರೂ ಆ ಭಗವಂತ ಉದ್ಧರಿಸಬೇಕು..." ಮಾತು ಮುಗಿಯುವುದರೊಳಗಾಗಿ ಕಣ್ಣುಗಳಲ್ಲಿ ಗಂಗೆ ಯಮುನೆಯರು ಪ್ರವಹಿಸಿದರು. ಕಂಠಾವರೋಧವಾಗಿ ಮುಖಬಿಂಬ ಕೆಂಪು ಕೆಂಪು ತಳೆಯಿತು. ದುಃಖದ ನೆರೆ ಕೊರಳೊತ್ತಿತು.

ಭಟ್ಟರು ಜೀವಶ್ಶವವಾಗಿದ್ದರೂ ಕಣ್ತೆರೆದು ನೋಡುವ ಉತ್ಸಾಹ ತೋರಲಿಲ್ಲ. ಮಗ–ಮೊಮ್ಮಗನ ಸಾಮೀಪ್ಯ ಸಂತಸ ಮೂಡಿಸುವ ಬದಲು ಸಂಕಟ ಪರಿತಾಪಗಳನ್ನು ತರಿಸಿತು.

"ಅಪ್ಪಾ!" ಪಾಂಡುವಿನ ದನಿ ಕರ್ಣ ಪಟಲಗಳಿಗೆ ಬಾಣದಂತೆ ತಾಗಿತು. ಎಲ್ಲಿಯೋ ಅಲಕ್ಷಿತ ತೇಜಸ್ಸು ಆ ಮುಹೂರ್ತದಲ್ಲಿ ಬಂದು ಕೂಡಿಕೊಂಡಂತೆ ನಯನ ದ್ವಯಗಳು ಜೀವಕಳೆಯಿಂದ ಮಿನುಗಿದುವು. ಒಮ್ಮೆ ಹುಬ್ಬೆತ್ತಿ ನೋಡಿದರೂ ಉತ್ತರಿಸುವ ತೊಂದರೆ ತೆಗೆದುಕೊಳ್ಳಲಿಲ್ಲ. ಮೊಮ್ಮಗನೆಡೆಗೆ ಪ್ರೀತಿ ವಿಶ್ವಾಸಗಳಿಂದ ನೋಡಿ ಮುಗುಳುನಕ್ಕ ಭಟ್ಟರಿಗೆ ಜೀವನ ಸಾರ್ಥಕತೆಯ ಆನಂದಭಾವ ಮೂಡಿತು ಮನದಲ್ಲಿ. ಎಲ್ಲಾ ಮೊಮ್ಮಕ್ಕಳಿಗಿಂತಲೂ ಅತ್ಯಂತ ಉನ್ನತ ಮಟ್ಟದಲ್ಲಿ ಕಂಡುಬಂದ ಅವನನ್ನು ಸ್ವಾಗತಿಸಬೇಕೋ ಬಿಡಬೇಕೋ ತೋರದೆ ಸ್ವಲ್ಪ ಸಮಯ ಸುಮ್ಮನಾದರು. ಸುಖ ದುಃಖಗಳಿಂದ ಜರ್ಜರಿತವಾಯಿತು ಹೃದಯ.

ಅನಂತು ಮೈಬಾಗಿ ಮುಖದ ಹತ್ತಿರವೇ ನುಡಿದ "ತಾತಾ! ನಮ್ಮೊಂದಿಗೆ ಬೆಂಗಳೂರಿಗೆ ಬನ್ನಿ. ಅಲ್ಲಿ ಆಸ್ಪತ್ರೆಗೆ ಸೇರಿಸಿ ಚಿಕಿತ್ಸೆ ಮಾಡಿಸೋಣ. ಗುಣವಾಗುತ್ತೆ."

ಮಗನ ಮಾತಿಗನುಗುಣವಾಗಿ ತಂದೆಯೂ ದನಿಗೂಡಿಸಿದ "ಹೌದು, ಅಪ್ಪಾ! ಮನಸ್ಸು ಮಾಡಿ ನಮ್ಮೊಡನೆ ಬನ್ನಿ, ನಿಮ್ಮ ಬಂದು ಕೂದಲೂ

ಕುಂದದಂತೆ ನೋಡಿಕೊಳ್ಳುವುದು ನನ್ನ ಭಾರ, ದಯಮಾಡಿ ಒಪ್ಪಿಕೊಳ್ಳಿ, ಇದು ನಮ್ಮ ಬೇಡಿಕೆ."

ಭಟ್ಟರು ಮಾತಾಡದೆ ತಲೆಯಲುಗಿಸಿ ಅಸಮ್ಮತಿ ಸೂಚಿಸಿದರು. ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು. ಆವುದೋ ಕಾಣದ ಕೈಗಳು ಹೃದಯವನ್ನು ಮೆಲುಮೆಲ್ಲನೆ ಹಿಸುಕುತ್ತಿವೆ. ಹಾಗೇ ಕಣ್ಮುಚ್ಚಿ ಮನಃಪ್ರಾಣಗಳ ನೋವನ್ನು ತನ್ನೊಳಗೇ ಅನುಭವಿಸಿದರು ಸದ್ದಿಲ್ಲದೆ. ತಂದೆಯ ಮಾನಸಿಕ ನೋವನ್ನು ತನ್ನಲ್ಲೇ ಅನುಭವಿಸಿದುದನ್ನು ಗ್ರಹಿಸಿ ರಾಮ ಚಿಂತಾಕ್ರಾಂತನಾದ. ಅಂತರಂಗದ ನೋವಿನಿಂದ ನರನರಗಳೂ ಹುಯ್ಯಲಿಟ್ಟುವು. ದುಃಖ–ಸಂಕಟಗಳ ತತ್ತಳ ತುಳಿತದಿಂದ ಆಲೋಡಿತವಾಯಿತು ಹೃದಯ. ಎದೆಯಾಳದಲ್ಲಿ ಬಿಸಿಯುಸಿರು ಸೂಕ್ಷ್ಮಾತಿಸೂಕ್ಷ್ಮವಾಗಿ ಹರಿದಾಡಿತು. ಏನೂ ಹೇಳಲೂ ತುಟಿಗಳು ಬಿರಿಯಲಿಲ್ಲ.

ಭಟ್ಟರು ಮಗಳ ಕಡೆ ದೃಷ್ಟಿ ಹೊರಳಿಸಿ ಏನನ್ನೋ ಹೇಳಲು ತೊದಲಿದರು. ಅದನ್ನು ಗ್ರಹಿಸಿದ ಅವಳು ಆ ಕ್ಷಣವೇ ಅವರ ಬಳಿ ನೈ ಬಾಗಿ "ಏನು ಅಪ್ಪಾ?" ಎಂದಳು.

"ಪ್ರಸಾದ ಕೊಡು ಮಗಳೇ!"

ಅವಳು ಗೂಡಿನಲ್ಲಿದ್ದ ಪ್ರಸಾದದ ತಟ್ಟೆಯನ್ನು ತೆಗೆದು ಮುಂದಿಟ್ಟು "ದೇವರ ಪ್ರಸಾದ. ರಾಮು ಆಗಲೇ ತಂದಿಟ್ಟು ಹೋಗಿದ್ದಾನೆ. ಪಂಚಕಜ್ಜಾಯ, ಬಾಳೆಹಣ್ಣು, ತೆಗೆದುಕೊಳ್ಳಿ" ಎಂದು ಮುಂದಿಟ್ಟಳು. ಇಬ್ಬರೂ ಪ್ರಸಾದವನ್ನು ತೆಗೆದುಕೊಂಡರು.

ಭಟ್ಟರು ಇದ್ದಕ್ಕಿದ್ದಂತೆಯೇ ಕೆಮ್ಮತೊಡಗಿದರು. ಸಾವಿತ್ರಿ ಕೆಮ್ಮಿನ ಕಷಾಯ ತೆಗೆದು ಚಮಚೆಯಲ್ಲಿ ಬಾಯಿಗೆ ಬಿಡುತ್ತ "ಸ್ವಲ್ಪ ಎದ್ದು ಕುಳಿತುಕೊಳ್ಳುತ್ತೀರಾ?" ಎಂದಳು.

ಅವರನ್ನು ಎಬ್ಬಿಸಿ ಕೂಡಿಸಲು ಎಲ್ಲರೂ ತಯಾರಿದ್ದರೂ ಭಟ್ಟರು ಇಷ್ಟಪಡದೆ ಕೈಯೆತ್ತಿ ಅಲುಗಿಸಿ "ಬೇಡ" ಎಂಬ ಸೂಚನೆ ಕೊಟ್ಟು ಕೆಮ್ಮುತ್ತಲೇ ಇದ್ದರು.

"ಈ ಸ್ಥಿತಿಯಲ್ಲಿ ಇಲ್ಲಿದ್ದರೆ ಹೇಗೆ ಗುಣವಾದೀತು? ನನ್ನೊಂದಿಗೆ ಬಂದರೆ ಒಳ್ಳೆಯ ಚಿಕಿತ್ಸೆ ಮಾಡಿಸಬಹುದಿತ್ತು. ನೀನಾದರೂ ಹೇಳಿ ಒಪ್ಪಿಸು ಸಾವಿತ್ರಿ......"ಎಂದ ಪಾಂಡು.

ತಂದೆಯ ಬೇಡಿಕೆಯನ್ನು ಅನಂತು ಅನುಮೋದಿಸಿದ.

ಸಾವಿತ್ರಿ ಆ ಮಾತಿಗೆ ಉತ್ತರಿಸುವ ಶ್ರಮ ತೆಗೆದುಕೊಳ್ಳಲಿಲ್ಲ. ಉದಾಸೀನದ ಮುದ್ದೆಯಾಗಿ ಕಷಾಯವನ್ನು ಬಾಯಿಗೆ ಹನಿಸಿದಳು. ಎದೆಯಾಳದಲ್ಲಿ ತಿರಸ್ಕಾರ–ನಿಂದೆ–ಭರ್ತ್ಸನೆಗಳು ತುಂಬಿ ಸಿಡಿದೊಡೆಯುವ ದಡಾಕಿಯಂತಾಯಿತು ಹೃದಯ. ದೃಷ್ಟಿಯನ್ನು ಇತ್ತ ಹೊರಳಿಸಲಿಲ್ಲ ಕೂಡ.

ಗೋಪಿ ಒಳಬಂದು ತಂದೆಯ ತಲೆದೆಶೆಯಲ್ಲಿ ಕುಳಿತುಕೊಂಡ. ಮಾನಸಿಕ ವಿಭ್ರಮೆಯಲ್ಲಿ ಏನು ಹೊಳೆಯಿತೋ .... ಹಾಗೇ ಮೈ ಬಾಗಿ ತಂದೆಯನ್ನು ನೋಡತೊಡಗಿದ.

ಸ್ವಲ್ಪೇ ಹೊತ್ತಿನೊಳಗಾಗಿ ಬಿಡುಗಡೆ ಬಯಸಿದ ಭಟ್ಟರ ಪ್ರಾಣಪಕ್ಷಿ ಕೆಮ್ಮುವ ಭರದಲ್ಲೇ ಹಾರಿ ಪರಮಾತ್ಮನಲ್ಲಿ ಲೀನವಾಯಿತು. ಸಾವಿತ್ರಿ ತೆರೆದ ಬಾಯಿಗೆ ತೀರ್ಥ ಬಿಟ್ಟು ಗೋಪಿ ಕೈಯಿಂದಲೂ ಬಿಡಿಸಿ ಮಿಳ್ಳೆಯನ್ನು ಒಳಗೊಯ್ದಿಟ್ಟು ಬಿಕ್ಕಿ ಬಿಕ್ಕಿ ಅಳುತ್ತ ಪಾಂಡುವಿಗೆಂದಳು "ನೀನು ಬರದಿದ್ದಿದ್ದರೆ ಇನ್ನೂ ಕೆಲವು ಕಾಲ ಬದುಕುತಿದ್ದರೇನೋ ... ನೀನು ಅದಕ್ಕೂ ಸಂಚಕಾರ ತಂದೆ. ಮಕ್ಕಳು ಮಕ್ಕಳ ಪಾತ್ರವನ್ನು ಬದಿಗಿಟ್ಟರೆಂದರೆ ಶತೃಗಳೇ ಸರಿ. ಹೆತ್ತವರಿಗೆ ಇಷ್ಟೊಂದು ಹಿಂಸ್ರಕರಾಗಿ ಬಾಳಬಾರದು ...."

ಪಾಂಡು ಮಾತಾಡಲಿಲ್ಲ. ದೃಷ್ಟಿ ಶವದ ಕಡೆ ಹರಿಯಿತು. ಬಿಟ್ಟ ಬಾಯಿ ನೆಟ್ಟ ಕಣ್ಣುಗಳನ್ನು ನೋಡಿದರೆ ಏನನ್ನೋ ಹೇಳಲಿರುವಂತೆ ಭಾಸವಾಗುತ್ತದೆ. ಒಂದೆರಡು ಕ್ಷಣ ಸುತ್ತಮುತ್ತಿನ ವಸ್ತುಗಳೆಲ್ಲಾ ಗಿರಗಿರ ಸುತ್ತಿದಂತಾಯಿತು. ಕಣ್ಣುಗಳನ್ನು ಮುಚ್ಚಿಕೊಂಡ. ಹೃದಯಕುಂಡದಲ್ಲಿ ಕಾರುಣ್ಯ ದ್ರವ್ಯ ತುಂಬಿ ತುಳುಕಿತು. ನೀಳವಾದ ನಿಟ್ಟುಸಿರು ಬಿಟ್ಟು ಮಗನಿಗೆಂದ "ಏಳು, ನಿನ್ನನ್ನು ಕರೆ ತಂದಿದ್ದಾಯಿತು .... ಈ ಜೀವನ ಇಷ್ಟೆ."

ಅನಂತು ಹುಬ್ಬೆತ್ತಿನೋಡಿದ ನೋಟದಲ್ಲಿ ಶವ ಸಂಸ್ಕಾರ? ಎಂಬ ಪ್ರಶ್ನೆ ಅಡಗಿತ್ತು.

"ಅದನ್ನು ನಮ್ಮಿಂದ ಮಾಡಗೊಡಿಸುವುದಿಲ್ಲ ಈ ಸಮಾಜ. ನಾವು ದೂರದಿಂದ ನೋಡಬಹುದು ಅಷ್ಟೆ ...." ಎಂದ ಗದ್ಗದ ದನಿಯಲ್ಲಿ.

ಅನಂತು ಮಾತಾಡಲಿಲ್ಲ. ಮುಖಭಾವದಲ್ಲಿ ಶೋಕಛಾಯೆ ಹರಡಿತ್ತು.

— o —

# ಸುಮನಾ

೭

ಯತ್ ಪೂರ್ವ ವಿಧಿನಾ ಲಲಾಟ
ಅಖಿತಂ ತತ್ ಮಾರ್ಜಿತು ಕಂ ಕ್ಷಮಃ ।

ಹೊರ ಜಗತ್ತು ಎಷ್ಟು ಸುಂದರವೋ ಅಷ್ಟೇ ಒಳಜಗತ್ತು ನರಕದ ಕುಂಡ.

ಮನಸ್ಸು ಮೌನವಾಗಿ ರೋದಿಸುತ್ತಿದ್ದರೆ ಒಡಲು ಕಳಕಳಿಯಿಂದ ನುಲಿಯುತ್ತದೆ.

ಬೆಳಿಗ್ಗೆ ಎಚ್ಚರವಾದೊಡನೆಯೇ ಒಳಗಿರುವುದಕ್ಕಿಂತ ಹೊರಗಿರುವುದೇ ಲೇಸು ಎನಿಸುವುದರಿಂದ ನೀರಿನ ಬಿಂದಿಗೆಯೊಡನೆ ಹೊರಹೋಗುವೆ. ನಲ್ಲಿಯ ಬುಡದಲ್ಲಿ ನೂಕುನುಗ್ಗಲು ಜಗಳ ಕಾದಾಟ ಇರುವುದರಿಂದ ಅದೂ ಬೇಸರವೇ. ಅಮ್ಮನ ಕಷ್ಟ ನೋಡುತಿದ್ದರೆ ಈ ಎಲ್ಲವನ್ನೂ ನಿಭಾಯಿಸಿ ಸಹಾಯ ಮಾಡಬೇಕು ಎನಿಸುತ್ತದೆ ನನಗೆ. ಆ ಜನಗಳ ಮಧ್ಯೆ ನುಗ್ಗಿ ನೀರು ಹಿಡಿದು ತಂದು ಮಣ್ಣಿನ ಹರವಿಗೆ ತುಂಬುವೆ. ದಿನವೂ ಇದೊಂದು ಬೆಳಗಿನ ಸಣ್ಣ ಕಾಯಕ ನನಗೆ.

ಅಪ್ಪ ಮನೆ ಕಟ್ಟುವ ಕಡೆಗಳಲ್ಲಿ ಕೂಲಿಗಾರ. ಅವನು ದುಡಿದುದೆಲ್ಲ ಹೆಂಡ ಸಾರಾಯಿಗೇ ಸಾಲದು. ಮನೆಗೆ ಬಂದರೆ ನಮಗೆ ಹೊಡೆದು ಬಡಿದು ಅವಾಚ್ಯ ಮಾತುಗಳಾಡುವುದು ಇಷ್ಟೇ ಹೊರತು ಬೇರೇನೂ ಇಲ್ಲ. ಸಭ್ಯತೆ ಮೈಲಿ ಮೈಲಿ ದೂರ. ಶಾಂತಿ ಸಂತೋಷಗಳು ಹೊಸ್ತಿಲಾಚೆಗೆ. ಐದು ಮಂದಿ

ಮಕ್ಕಳು ಅಮ್ಮನ ದುಡಿಮೆಯಿಂದಲೇ ಜೀವ ಹಿಡಿಯಬೇಕು. ಅರೆಹೊಟ್ಟೆ. ಅರೆಬಟ್ಟೆ.

ಮಕ್ಕಳಿಗೆ ವಿದ್ಯೆ ಬುದ್ಧಿ ಕಲಿಸಿ ನಾಗರಿಕ ಜೀವನಧರ್ಮಕ್ಕೆ ಅಣಿಗೊಳಿಸುವ ಯೋಚನೆಯ ಗಂಧವೂ ಇರಲಿಲ್ಲ ಅಪ್ಪನಿಗೆ. ನೆರೆಹೊರೆಯ ಮಕ್ಕಳೊಂದಿಗೆ ನಾವೂ ಕೆಲವಾನು ಕಾಲ ಶಾಲೆಗಳ ಮೆಟ್ಟಿಲು ಹತ್ತಿದ್ದುಂಟು. ಅಷ್ಟೇ ನಮಗೆ ಲಭಿಸಿದ ಸರಸ್ವತೀ ಪ್ರಸಾದ. ನಮ್ಮ ಪರಿಸರದಲ್ಲಿ ಗುಣ ಸಂಸ್ಕಾರಗಳ ಆರ್ಜನೆ ಮಾಡಿಕೊಳ್ಳುವ ಮಾತಿರಲಿ ಇಷ್ಟರ ಮಟ್ಟಿಗಾದರೂ ಮನುಷ್ಯತ್ವವನ್ನು ಉಳಿಸಿಕೊಂಡದ್ದು ವಿಶೇಷವೇ, ಎನಿಸುತ್ತದೆ ನನಗೆ ಯೋಚಿಸಿ ನೋಡಿದರೆ.

ನಮ್ಮ ವಾಸ ಒಂದು ಕೊಳೆಗೇರಿಯ ನರಕ ಕೂಪದಲ್ಲಿ. ಅಲ್ಲಿ ದಿನವೂ ಒಂದಲ್ಲ, ಒಂದು ಬಗೆಯ ಜಗಳ-ದ್ವೇಷ-ವೈಶಮ್ಯಗಳು ಸಣ್ಣ ಸಣ್ಣ ಕಾರಣಕ್ಕಾಗಿ ಭುಗಿಲೇಳುತ್ತಿರುತ್ತವೆ. ಯಾವತ್ತೂ ಗಲಾಟೆ-ಗದ್ದಲ. ಅವಾಚ್ಯ ಶಬ್ದಗಳ ಅವಾಂತರ ಒಂದು ವರ್ಗದ್ದಾದರೆ ಇನ್ನೊಂದು ವರ್ಗದ್ದು ಕಾಡು ಹರಟೆಗಳ ಸಮಾಚಾರ ದರ್ಶನ. ಯಾವತ್ತೂ ಕಿವಿಗಳು ಕಿವುಡಾಗುವಂತಹ ಸನ್ನಿವೇಶ.

ನಾನು ಹಾಗೂ ಹೀಗೂ ಏಳನೆಯ ಇಯತ್ತೆಯವರೆಗೆ ವಿದ್ಯೆಕಲಿತೆ, ಅನಂತರ ಸಾಧ್ಯವಾಗಲಿಲ್ಲ. ಅಮ್ಮ ತಾನು ಕೆಲಸ ಮಾಡುತಿದ್ದ ಮನೆಗಳಲ್ಲಿ ನಮಗಾಗಿ ಬಟ್ಟೆಗಳನ್ನು ಬೇಡಿ ತರುತಿದ್ದಳು. ನಾನು ಶಾಲೆ ಬಿಟ್ಟೊಡನೆಯೆ ತರಕಾರಿ ಮಾರುಕಟ್ಟೆಯಲ್ಲಿ ನನ್ನನ್ನು ಕೂಲಿಗಾರನನ್ನಾಗಿ ಸೇರಿಸಿದಳು. ಅದರಲ್ಲಿ ನಾನು ದಿನಕ್ಕೆ ಹತ್ತು ಹದಿನೈದು ರೂಪಾಯಿಗಳನ್ನು ಸಂಪಾದಿಸುತಿದ್ದೆ. ಆದರೆ, ಬೈಗುಗಪ್ಪು ಕವಿಯುವ ಸಮಯಕ್ಕೆ ಸರಿಯಾಗಿ ಅಪ್ಪ ಅಲ್ಲಿಗೆ ಬಂದು ನನ್ನ ದುಡ್ಡನ್ನು ಕಸಿದುಕೊಂಡು ಹೋಗುವುದು ದಿನಚರಿಯಾಗಿ ಪರಿಣಮಿಸಿತು. ನಾನು ಅತ್ತು ಕರೆದರೂ ಬಿಡುತ್ತಿರಲಿಲ್ಲ. ಆದ್ದರಿಂದ ಹಣವನ್ನು ಅಂಗಡಿಯ ಯಜಮಾನನಲ್ಲಿ ಅಡಗಿಸಿಡತೊಡಗಿದೆ. ಆ ಯಜಮಾನನೋ ನನ್ನ ಕಾಸು ಕದಿಯಲು ಹೇಸಲಿಲ್ಲ. ಆ ಕಡೆ ಯಜಮಾನ ಈ ಕಡೆ ಅಪ್ಪ.

ಪಡುವೆ ನನ್ನ ತೊಳಲಾಟದಲ್ಲಿ ತಾಯಿಯ ಕೈಗೆ ಐದಾರು ರೂಪಾಯಿ ಕೊಡ ಬೇಕಾದರೆ ದೊಡ್ಡ ವಿಜಯ ಸಾಧಿಸಿದಂತೆಯೇ! ಎಲ್ಲಿ, ಯಾವೆಡೆ ನೋಡಿದರೂ ಕಾಸುಗಳ್ಳ ಬಕ ಪಕ್ಷಿಗಳು. ಈ ಕಾರಣದಿಂದ ಊರನ್ನೇ ಬಿಟ್ಟು ಹೋಗುವ ಯೋಚನೆ ಮನದಲ್ಲಿ. ನನ್ನ ಗೆಣೆಯನೊಬ್ಬ ಮುಂಬೈನಲ್ಲಿ ಹೋಟೆಲ್ ಮಾಣಿ ಯಾಗಿದ್ದಾನೆ. ಅವನಿಗೆ ಅದೇ ಹೋಟೆಲಿನಲ್ಲಿ ನನಗೊಂದು ಕೆಲಸ ಕೊಡಿಸು ಎಂದು ಕಾಡಿ ಬೇಡಿ ಬರೆಯುತಿದ್ದೆ. ಆ ಮಾಲೀಕನಿಗೂ ಅಗ್ಗದ ಹುಡುಗರು ಬೇಕಂತೆ. ಸಣ್ಣ ಹುಡುಗರನ್ನು ಅವನು ಖಂಡಿತ ತೆಗೆದುಕೊಳ್ಳುತ್ತಾನೆ. ಕೊನೆಯಪಕ್ಷ ಇನ್ನೂರು ರೂಪಾಯಿಗಳನ್ನಾದರೂ ಇಟ್ಟುಕೊಂಡು ಬಾ ಕೆಲಸ ಕೊಡಿಸುವೆ ಎಂದು ಮಾರುತ್ತರ ಬರೆದಿದ್ದ ಸೋಮು. ನಾನು ಆ ಕಾಗದವನ್ನು ನೋಡಿ ಡಂಗು ಬಡಿದು ಹೋದೆ. ಇನ್ನೂರು ರೂಪಾಯಿ ಎಂದರೆ ಸಾಮಾನ್ಯವೇ? ಹೇಗೆ ಸಂಪಾದಿಸಲಿ? ಎಲ್ಲಿಡಲಿ? ಯಾರನ್ನು ನಂಬಲಿ? ಯಾರು ನನಗೆ ದಾರಿ ತೋರಿಸುತ್ತಾರೆ? ಇಂತಿಂತಹ ಪ್ರಶ್ನೆಗಳು ತಲೆಯನ್ನು ಮುತ್ತಿದುವು. ಇದು ಇನ್ನೊಂದು ಬಗೆಯ ಸಂಕಟಾವರ್ತಣ. ದುಃಖದ ಕೋಡಿ ಸದಾ ಹರಿಯುತ್ತದೆ ಎದೆ ಗಡಲಲ್ಲಿ.

ನಮ್ಮ ಕೇರಿಯವನೇ ಆದ ದೀನ್‌ದಾದ ಒಂದು ಅಂಗಡಿಯಿಟ್ಟಿದ್ದಾನೆ. ಅವನು ಆಗಾಗ ಮುಂಬೈಯಿಗೆ ಹೋಗಿ ಬರುತ್ತಿರುತ್ತಾನೆ. ಅವನು ಸಿಕ್ಕಿದಾಗ ಲ್ಲೆಲ್ಲ, ಮುಂಬೈ ವಿಷಯ ತಿಳಿದುಕೊಳ್ಳುತ್ತಲೇ ಇರುವೆ. ಅವನು ಅಲ್ಲಿನ ಭಂಗ ಬವಣೆಗಳನ್ನು ಬಾಯಿ ತುಂಬಾ ಬಣ್ಣಿಸುತ್ತ "ಅಷ್ಟು ದೂರ ಹೋಗುವ ಯೋಚನೆಯೇಕೆ ಮಾಡುತ್ತಿ? ಇಲ್ಲೇ ಎಲ್ಲಾದರೂ ಕೆಲಸ ಮಾಡು" ಎಂಬ ಸಲಹೆಯನ್ನು ಉದಾರವಾಗಿ ನೀಡುತ್ತಾನೆ.

ಆದರೆ.... ಆ ತಂದೆ?

o o o o

"ಅವ್ವಾ ... !"

"................"

ಅವಳ ಗಮನ ಅದಾವ ಪರಿಸರದಲ್ಲಿ ಹರಿದಿತ್ತೋ ನನ್ನ ಕರೆ ಕಿವಿಯನ್ನು ತಾಗಲಿಲ್ಲ, ಎಡಗೈದಳದ ಮೇಲೆ ಶಿರೋ ಭಾರವನ್ನು ಇಳಿಸಿದ್ದ ಅವಳ ದೇಹ ಸಂಪುಟ ಲಿಖಿತ ಚಿತ್ರದಂತೆ ನಿಸ್ಪಂದವಾಗಿತ್ತು. ನಾನು ಅವಳತ್ತ ಸ್ವಲ್ಪ ಹೊತ್ತು ಲಕ್ಷ್ಯವಿಟ್ಟು ನೋಡಿದೆ. ಮನಃಕಲ್ಪದಲ್ಲಿ ನಡೆಯುತಿದ್ದ ವಿಪ್ಲವ ಕಾಂಡವೆಲ್ಲ ಮುದ್ರೆಯೊತ್ತಿದಂತೆ ಸ್ಪಷ್ಟವಾಗಿ ಕಾಣಿಸುತ್ತಿದೆ ಸೊರಗಿದ ಮುಖದ ಮೇಲೆ. ಅವಳ ದುಃಖದುಗುಡ ಸಾಮಾನ್ಯವೇನೂ ಅಲ್ಲ. ಸಂಕಟವೇ ಮೂರ್ತಿಯೆತ್ತಿ ಬಂದಂತಿದ್ದ ಅವಳ ಚಿತ್ರ ಕರುಣಾಜನಕ. ಈ ವಿಶ್ವ ಜಗತ್ತಿನಲ್ಲಿ ಇಂತಹ ಚಿತ್ರಗಳೇ ತುಂಬಿಹೋಗಿವೆ. ಇದು ಮೊದಲನೆಯದೂ ಅಲ್ಲ, ಕೊನೆಯದೂ ಅಲ್ಲ. ಅಂದಮೇಲೆ, ಮರುಗುವರಾರು? ಆದ್ದರಿಂದ ನಮ್ಮ ಉದ್ಧಾರ ನಮ್ಮ ಕೈಯಲ್ಲಿದೆ....ಆದರೆ, ವಿದ್ಯಾಲಕ್ಷ್ಮಿಯನ್ನು ಆರಾಧಿಸದೆ ಉಳಿದ ನಮ್ಮ ಜೀವನಕ್ಕೆ ಹೊಸ ತಿರುವು ಎಲ್ಲಿಂದ ಬರಬೇಕು?

ಆ ಪ್ರಶ್ನೆಯೆದ್ದಾಗ ಕಣ್ಣುಗಳಲ್ಲಿ ಕಂಬನಿಗಳು ಮೊಳೆತುವು.

ಅವ್ವ ಇತ್ತ ತಿರುಗಿ ನನ್ನ ಕಡೆ ನೋಡಿ ಮರುಕದಿಂದ ನುಡಿದಳು "ಬಿಡು ಮಗನೇ, ಏಕೆ ಅಳುತ್ತಿ? ನಮ್ಮಿಂದ ಎಷ್ಟು ಸಾಧ್ಯವೊ ಅಷ್ಟು ಹೆಣಗೋಣ. ನಾವು ಎಲ್ಲೋ ಪ್ರಾಣಿಗಳಾಗಿ ಹುಟ್ಟಿದ್ದಿದ್ದರೆ ಹುಲ್ಲು ಮೇದು ಜೀವಿಸಬಹುದಾಗಿತ್ತು. ದೇವರು ಮನುಷ್ಯ ಜನ್ಮಕ್ಕೆ ಹಾಕಿ ತಪ್ಪು ಮಾಡಿದ. ಅದರ ಫಲ ನಾವು ಅನುಭವಿಸುತಿದ್ದೇವೆ.... ನಾಲ್ಕು ಮನೆಯಲ್ಲಿ ಕೆಲಸಮಾಡಿ ತರುವ ಹಣ ಮಕ್ಕಳ ಪೋಷಣೆಗೆ ಸಾಲದು, ಏನು ಮಾಡಲಿ ಹೇಳು? ನಿಮ್ಮಪ್ಪ ಸರಿಯಾಗಿದ್ದಿದ್ದರೆ ಹೀಗಾಗುತ್ತಿರಲಿಲ್ಲ. ಮಕ್ಕಳಿಗೆ ವಿದ್ಯೆಬುದ್ಧಿ ಕೊಡಬಹುದಿತ್ತು. ನಾನು ಇದಕ್ಕಿಂತ ಇನ್ನೆಷ್ಟು ದುಡಿಯಬಲ್ಲೆ? ವಾಸಕ್ಕೊಂದು ಮನೆಯೂ ಇಲ್ಲ; ಬದುಕಿಗೊಂದು ಗುರಿಯೂ ಇಲ್ಲ. ನಿನ್ನನ್ನು ಶಾಲೆ ಬಿಡಿಸಬೇಕಾದರೆ ಎಷ್ಟು ಸಂಕಟವಾಯಿತು ಗೊತ್ತೆ? ನುಂಗುವಂತಿಲ್ಲ. ಅನುಭವಿಸುವಂತಿಲ್ಲ...." ಮಾತು ಮುಗಿಯುವುದರೊಳಗಾಗಿ ಕಂಠ ಗದ್ಗದಿಸಿತು. ಕಣ್ಣುಗಳಲ್ಲಿ ಗಂಗೆ ಯಮುನೆಯರ ಪ್ರವಾಹ ಹರಿದು ಬಂತು. ಮುಸುಮುಸು ಅತ್ತಳು ಅಮ್ಮ.

ನಾನು ಅವಳ ಕೊರಳು ಕಟ್ಟಿಕೊಂಡು ಸಂತೈಸುತ್ತ ನುಡಿದೆ "ಚಿಂತಿಸಬೇಡಮ್ಮಾ, ಈ ಊರಿನಲ್ಲಿ ನಾನೆಲ್ಲಿ ಕೆಲಸ ಮಾಡಿದರೂ ಅಷ್ಟು ಕಾಸು ಕೀಳದೆ

ಡುವುದಿಲ್ಲ. ಆದ್ದರಿಂದ, ಮುಂಬೈನಲ್ಲಿ ಕೆಲಸ ಕೊಡಿಸುವುದಾಗಿ ಸೋಮು ಹೇಳಿದ್ದಾನಲ್ಲ; ದೀನ್‌ದಾದನ ಜೊತೆಯಲ್ಲಿ ಮುಂಬೈಗೆ ಹೋಗಿ ಕೆಲಸ ಡಿಯುವೆ. ಹೋಟೆಲ್ ಮಾಣಿ ಎಂದರೆ ಊಟ ಅಲ್ಲೇ ಕಳೆಯುತ್ತೆ ಸಂಬಳ ಳಿಯುತ್ತೆ ...."

ತಾಯಿಯ ಮುಖ ಮಳೆಬಿಸಿಲಾಯಿತು. ಹುಡುಗನ ಹುಡುಗು ಬುದ್ಧಿ ನಲ್ಲಿಯೂ ಹೊಳೆದ ಆಶಾಭಾವ ತಳಕ್ಕನೆ ಕಣ್ಣುಗಳಲ್ಲಿ ಮಿಂಚಿ ಮಾಯವಾಯಿತು.

"ಅಮ್ಮಾ, ದೀನ್‌ದಾದ ಹೇಳಿದ್ದಾನೆ, ಮುಂಬೈನಲ್ಲಿ ಚಂಪಕ ಹೋಟಲ್ ಎಲ್ಲಿದೆ ಅಂತ. ಅವನು ದಾದರ್ ಕಡೆ ಹೋದಾಗಲೆಲ್ಲಾ ಚಂಪಕ ಹೋಟೆಲಿಗೆ ಹೋಗಿ ಬರುತ್ತಾನಂತೆ. ಸಧ್ಯ ಇಲ್ಲಿ ಮಾರುಕಟ್ಟೆಯ ಪಕ್ಕದಲ್ಲಿ ಹೋಟೆಲ್ ಪ್ರಭಾದಲ್ಲಿ ಕೆಲಸ ಮಾಡಿ ಅರ್ಧ ಸಂಬಳ ಅಲ್ಲೇ ಉಳಿಸಿಕೊಳ್ಳುವ ಯೋಚನೆಯೂ ಇದೆ. ಹೇಗಾದರೂ ಮಾಡಿ ನಾಲ್ಕು ಕಾಸುಗಳಿಸಿಕೊಂಡರೆ ಮುಂದೆ ನಿಮ್ಮೆಲ್ಲರಿಗೂ ಒಂದು ಉತ್ತಮ ಜೀವನಕ್ಕೆ ದಾರಿ ಮಾಡುವ ಇಚ್ಛೆ ತುಂಬಾ ಇದೆ."

ವಾಕ್ಯ ಸರಣಿ ಮುಗಿಯುವಷ್ಟರಲ್ಲಿ, ಎಲ್ಲೋ ಅಲಕ್ಷಿತ ಅಪೂರ್ವಕಳೆ ಬಂದು ಅವಳ ಮ್ಲಾನವಾದ ಮುಖಬಿಂಬದಲ್ಲಿ ಮಿನುಗಿತು. ಕಣ್ಣುಗಳಲ್ಲಿ ಆಸೆಯ ಛಾಯೆ ಸುಳಿದು ಮಾಯವಾದುದನ್ನು ಕಂಡೆ.

ತಾಯಿ ದೀರ್ಘವಾದ ನಿಟ್ಟುಸಿರು ಬಿಟ್ಟಳು, ತುಟಿಗಳು ಬಿರಿಯಲಿಲ್ಲ.

o o o o

ಅವಳ ಮಕ್ಕಳಾದ ರಾಮಲಕ್ಷ್ಮಣರಿಗೆ ಈಗ ಹದಿಮೂರು ವರ್ಷ. ಸರಕಾರಿ ಶಾಲೆಯಲ್ಲಿ ಕಲಿಯುತಿದ್ದಾರೆ. ಹೋಗಿ ಬರಲು ಬಹಳ ದೂರ. ಅವರ ಸಮಯವೆಲ್ಲಾ ಹಾದಿಯಲ್ಲೇ ಕಳೆಯುತ್ತದೆ, ವ್ಯರ್ಥವಾಗಿ. ಆದರೂ ಏಳನೇ ಇಯತ್ತೆಯವರೆಗೆ ಸುದೈವವಶಾತ್ ಹಿಂದುಳಿಯದೆ ಏರಿದ್ದಾರೆ. ಮುಂದೆಯೂ ಆ ದೈವವೇ ರಕ್ಷೆ ನೀಡಬೇಕು ಎಂದು ಹಾರೈಸುತ್ತದೆ ತಾಯಿಯ ಜೀವ. ವೇದ-ಕುಮುದರ ಗತಿಯೂ ಅಷ್ಟೆ. ಸರಕಾರಿ ಸ್ಕೂಲಿನಲ್ಲಿ ಯೂನಿಫಾರಂ ಗೋಜಿಲ್ಲವಾದ್ದರಿಂದ ತಾಯಿ ಬೇಡಿ ತಂದ ಬಟ್ಟೆಗಳೇ ಪೂರೈಸುತ್ತವೆ, ಹರಿದು

ಚಿಂದಿಚಿಂದಿಯಾಗುವತನಕ. ತಾಯಿ ಕೆಲಸ ಮಾಡುವ ಮನೆಗಳಿಂದ ಏನಾದರೂ ಪಳೆಯುಳಿಕೆಯನ್ನು ತಂದಳೆಂದರೆ ನಾಲ್ಕೈದು ಬಾಯಿಗಳು ಕಾದಿರುತ್ತವೆ. ಆ ದಿವ್ಯ ಸಂಕಟ ಹೃದಯವನ್ನು ದಣಿಸುತ್ತದೆ. ತಾಯಿ ಪರಿತಾಪದಿಂದ ಒಲೆ ಹಚ್ಚುತ್ತಾಳೆ. ಅಲ್ಲಿ ಇಲ್ಲಿ ಸಿಕ್ಕುವ ಪುಳ್ಳೆಗಳು-ಬೆರಣೆಗಳು ಒಲೆಯುರಿಸುತ್ತವೆ. ಅದಷ್ಟರಲ್ಲಿ ಅಡಿಗೆಯನ್ನು ಪೂರೈಸುವ ಭಂಗ ಹೇಳ ತೀರದು. ಬೆಂದರೂ ಸರಿಯೆ, ಬೇಯದಿದ್ದರೂ ಸರಿಯೆ ಕೂಳುಂಬದೆ ಗತಿಯಿಲ್ಲ. ಬದುಕು ದಾರುಣಮಯ, ಸಂಕಷ್ಟಮಯ. ಪರಿತಾಪಮಯ.

ಅಂದು, ನಾನು ಸಿಟ್ಟನಿಂದ ಅಮ್ಮನಿಗೆಂದೆ "ಈ ದಿನ ನೀನು ಧೈರ್ಯ ತಂದುಕೊಂಡು ಅಪ್ಪನಿಗೆ ಛೀಮಾರಿಹಾಕಿ ಸಂಸಾರದಲ್ಲಿ ಪ್ರೀತಿ ವಿಶ್ವಾಸವಿಲ್ಲದೆ ನೀನು ಮನೆಗೆ ಬರುವುದೇ ಬೇಡ" ಎಂದು ಕಡ್ಡಾಯವಾಗಿ ಹೇಳಿಬಿಡು. ಹೊಡೆತ ಬಡಿತ ತಿಂದುಕೊಂಡು ಅವನನ್ನು ಸಾಕುವುದಾದರೂ ಏಕೆ ? ನಾನೂ ನೀನೂ ಕೂಡಿ ಮಕ್ಕಳನ್ನು ಕಾಪಾಡೋಣ. ಅಪ್ಪನಿಗೆ ಕೊಡದೆ ಹೋದರೆ ಹಣ ನಮಗೆ ಸಾಕಾಗುತ್ತದೆ.

"ಅಯ್ಯೊ, ಹಾಗೆಂದರೆ ಬಿಟ್ಟಾನೆಯೇ ಮಗನೇ? ಇನ್ನೂ ಚೆಚ್ಚಿ ಸೊಂಟ ಮುರಿದಾನು. ನಾವು ಅವನ ಗುಡಿಸಲು ಕಾದುಕೊಂಡು ನಾಯಿಯಂತೆ ಬಾಲ ಮುದುರುವುದೇ ಹೊರತು ಎದುರು ನಿಂತರೆ ಕತೆ ಮುಗಿಯುತ್ತೆ." ನುಡಿ ಎದೆ ಯಾಳದಿಂದ ಹೊರಬಿತ್ತು. ತೆಕ್ಕನೆ ಕಣ್ಣುಗಳಲ್ಲಿ ಮೂಡಿದ ಕಂಬನಿಯನ್ನು ಒರಿಸಿಕೊಂಡು ಪುನಃ ನುಡಿದಳು "ಈ ಜನ್ಮದಲ್ಲಿ ಹೆಣ್ಣು ಎಂದಿಗೂ ಗಂಡಿನ ಸೊತ್ತೇ ಹೊರತು ಸ್ವತಂತ್ರ ಜೀವಿಯಲ್ಲ. ನಾವು ಏನೂ ಮಾಡಲಾರೆವು. ನಮ್ಮ ಪುಣ್ಯ ಚೆನ್ನಾಗಿದ್ದಿದ್ದರೆ ಆತ ಒಳ್ಳೆಯವನಾಗುತಿದ್ದ. ನಮಗೆ ಪುಣ್ಯ ವಿಲ್ಲ. ಬದುಕಿದ್ದಷ್ಟು ಕಾಲ ನಮಗೆ ನರಕ ತಪ್ಪಿದ್ದಲ್ಲ...." ದನಿಯಲ್ಲಿ ನಿರಾಸೆಯ ಪೂರ ಹರಿದು ಬಂತು. ತಾಯಿ ಗೋಳಾಡಿದಳು.

"ನಾವಿಲ್ಲಿಂದ ಬಿಟ್ಟು ಬೇರೆ ಹೋದರೆ....?"

"ಹೊರ ಹೋಗುವುದಕ್ಕೆ ಬಿಟ್ಟಾನೆಯೇ ? ಇದೆಲ್ಲ ಸಾಧ್ಯವಾಗದು. ನಾನು ಸತ್ತಾಗಲೇ ಈ ಬಂಧನ ತಪ್ಪಬೇಕಾದರೆ." ಕಂಠ ಗದ್ಗದಿತವಾಯಿತು.

ಒಡಲಾಳದಿಂದ ತಾಳಲಾಗದೆಯೆ ತೆಕ್ಕನೆ ಉಕ್ಕಿ ಬಂದ ಕಂಬನಿಗಳನ್ನು ಸೆರಗಿನಿಂದ ಒರಸಿಕೊಂಡಳು ಅಮ್ಮ. ನನ್ನ ಮನಸ್ಸು ಕರಗಿ ಬಲು ಸಂಕಟ ಮೂಡಿತು. ಮೂಕ ಮೌನ ತಾಳಿದೆ. ಕಣ್ಣ ಮುಂದಿನ ವಸ್ತುಗಳೆಲ್ಲಾ ಒಂದು ಗಳಿಗೆ, ಒಂದೇ ಒಂದು ಗಳಿಗೆ ಗಿರಗಿರ ಸುತ್ತಿದಂತಾಯಿತು.

o o o o

ಇಂದು, ಮನೆಗೆ ಹೋಗುವಾಗ ಒಂದು ಬ್ರೆಡ್ ಕೊಂಡುಹೋದೆ. ಕತ್ತರಿಸಿದ ಅದರಲ್ಲಿ ಹತ್ತು ಹನ್ನೆರಡು ತುಂಡುಗಳು ಇರುತ್ತವೆ. ವೇದ ಕುಮುದರ ಹಸಿದೊಡಲು ಹಾತೊರೆಯುತಿತ್ತು ಆಹಾರಕ್ಕಾಗಿ. ಬಾಡಿ ಬತ್ತಿದ ಮುಖದಲ್ಲಿ ಕಣ್ಣುಗಳು ಕಳೆಗುಂದಿದ್ದುವು.

"ನಿಮ್ಮಿಬ್ಬರಿಗೇ ಅಲ್ಲ. ಎಲ್ಲಾರಿಗೂ ಹಂಚು. ರಾಮ ಲಕ್ಷ್ಮಣರ ಪಾಲು ಎತ್ತಿಡು."

ನನ್ನ ದನಿಯನ್ನು ಲಕ್ಷಿಸಿದರೂ ಲಕ್ಷಿಸದಂತೆ ರೊಟ್ಟಿಯ ತುಂಡುಗಳನ್ನು ಎಣಿಸಿಎಣಿಸಿ ಹಂಚುವುದನ್ನು ನೋಡಿದಾಗ ಕರುಳು ಮಿಡಿಯಿತು. ನಾನೇ ಈಸಿಕೊಂಡು ಇಬ್ಬರಿಗೂ ಮೂರು ಮೂರು ತುಣುಕುಗಳನ್ನು ಹಂಚಿದೆ. ಮಕ್ಕಳಿಗೆ ತೃಪ್ತಿಯಾಗಲಿಲ್ಲ. ಇಬ್ಬರ ಕಣ್ಣಿನಲ್ಲಿ ನೀರು ಮೊಳೆತು ಕೆನ್ನೆಯ ಮೇಲೆ ಧಾರೆಯಾಗಿಳಿಯಿತು. ಇಬ್ಬರಿಗೂ ಸಮಾಧಾನ ಹೇಳಿ ಮುದ್ದಿಸಿದೆ. ಆದರೆ ಬಡತನ ಮೂಲವಾದ ಆ ದುಃಖಶಮನ ಬಗೆ ಹರಿಯಲಿಲ್ಲ. ಅಂಗಡಿ ಯಜಮಾನನಲ್ಲಿ ನಾನಿಟ್ಟಿದ್ದ ಹಣ ಈಸಿಕೊಂಡು ಇನ್ನೊಂದು ರೊಟ್ಟಿ ತರಲೇ ಬೇಕಾಯಿತು. ತಂದು ಹಂಚಿದೆ. ಅಃ, ಆಗ ಮೂಡಿದ ಸಂತಸ...?

ಚಿಂದಿ ಬಟ್ಟೆ, ಬಾಚದ ಕೂದಲು, ಕೊಳಕು ಮೈಯಿನ ಸಂಸಾರ ಕರುಳಿಗೆ ಕಿಚ್ಚು ಹಚ್ಚಿತು. ಈ ಬಗೆಯ ಜೀವನವಿರುವುದಕ್ಕಿಂತ ಇಲ್ಲದಿರುವುದು ಲೇಸು.

ಆದರೆ .... ಈ ಜೀವನವೇ ಒಂದು 'ಆದರೆ' ಮಯ. ದುಃಖ ದುಗುಡಗಳ ಕೋಟಿ. ವಿದ್ಯೆ ಇಲ್ಲದ ಬದುಕಿಗೆ ಬೆಡಗಿನ ಬೆಳಕು ಬರುವುದು ಸಾಧ್ಯವೇ ಇಲ್ಲ. ಹೇಗಾದರೂ, ಎಂತಾದರೂ ಅಷ್ಟಿಷ್ಟು ಬೆಳಕು ಪಡೆದುಕೊಂಬುದು

ಸಾಧ್ಯವಾದರೆ ಅದೇ ಪುಣ್ಯ ... ಯೋಚನೆಯು ತೇಜಿ ಓಡುವಷ್ಟು ಓಡಿ ಅಲ್ಲಿಗೆ ನಿಂತುಹೋಯಿತು. ನಾನು ದಿಕ್ಕೆಟ್ಟವನಂತೆ ಸುಮ್ಮನಾದೆ.

೦ ೦ ೦ ೦

ರಾಮು ಲಕ್ಷ್ಮಣರು ಒಂದೇಸಮನೆ ಏದುಸಿರು ಬಿಡುತ್ತ ಓಡಿ ಬರುತಿದ್ದಾರೆ. ಕಾಲುಗಳು ಧೂಳಿನಿಂದ ಆವೃತವಾಗಿವೆ. ಮುಖಮೈಗಳು ಬೆವರಿಂದ ತೊಪ್ಪನೆ ತೊಯ್ದು ಹೋಗಿವೆ. ಅವರ ರೀತಿಯನ್ನು ನೋಡಿದರೆ ಯಾರಿಗಾದರೂ ಆಚ್ಚರಿಯ ಕಟ್ಟೆ ಬಿರಿಯುವಂತಿತ್ತು. ನಾನು ತಕ್ಷಣ ಕೇಳಿದೆ,

"ಏನ್ರೋ ಇದು? ಏಕೆ ಓಡಿ ಬರುತಿದ್ದೀರಿ?"

"ನಮ್ಮ ಶಾಲೆಯಲ್ಲಿ ಮುಂದಿನವಾರ 'ರನ್ನಿಂಗ್ ರೇಸ್' ಇದೆ. ಅದಕ್ಕಾಗಿ ಅಭ್ಯಾಸ ಮಾಡುತಿದ್ದೇವೆ. ಶಾಲೆಯಿಂದ ಇಲ್ಲಿಯವರೆಗೆ ಎಲ್ಲೂ ನಿಲ್ಲಲಿಲ್ಲ."

ಇಲ್ಲಿಂದ ಶಾಲೆ ಮೂರು ಮೈಲಿಯಾಗುತ್ತೆ. ಅಷ್ಟುದೂರ ಒಂದೇ ದೌಡಿಂದ ಓಡಿ ಬಂದಿದ್ದಾರೆ. ಒಂದೆರಡು ಕ್ಷಣ ಯೋಚಿಸಿ ನಾನೆಂದೆ "ಬಯಲಲ್ಲಿ ಅಭ್ಯಾಸ ಮಾಡಿಕೊಳ್ಳಿ. ರಸ್ತೆಯಲ್ಲಿ ಓಡುವುದು ಅಪಾಯ."

"ಬಯಲಲ್ಲಾದರೆ ಪ್ರತ್ಯೇಕವಾಗಿ ಹೋಗಬೇಕು.. ಇದೇ ಸರಿ, ಒಂದು ಬಾಣಕ್ಕೆ ಎರಡು ಹಕ್ಕಿ."

ಮಾತು ಮುಗಿಯುವುದರೊಳಗಾಗಿ ಅಪ್ಪ ಒಳಬಂದ. ಕುಡಿದ ಅಮಲು ಏರಿ ತಲೆ ತೂರಾಡುತಿತ್ತು, ಹೆಗಲ ಮೇಲಿನ ಟವಲ್ಲನ್ನು ಸಿಂಬೆ ಸುತ್ತುತ್ತ ಕೇಳಿದ "ಕಿಟ್ಟೀ, ಎಲ್ಲಿ ಇಂದಿನ ಕೂಲಿ ಹಣ?" ದನಿ ಬಾಣದಂತೆ ನನ್ನನ್ನು ತಾಗಿತು.

"ಇಂದು ಕೂಲಿ ಸಿಕ್ಕಲಿಲ್ಲ."

ಸುಳ್ಳು ಹೇಳುವುದು ಸರಿಯಲ್ಲವಾದರೂ ಹೇಳದೆ ವಿಧಿಯಿರಲಿಲ್ಲ.

"ನಿಜ ಬೊಗಳೋ!"

"ಇಲ್ಲ, ಅಪ್ಪ! ಖಂಡಿತ ...."

ಅವನು ಆ ಕ್ಷಣವೇ ನನ್ನ ಜೇಬಿಗೆ ಕೈಹಾಕಿ ತಡುಕಿದ. ಕಾಸು ಸಿಗದ ಸಿಟ್ಟಿಗೆ ನನ್ನ ಕೆನ್ನೆಯ ಮೇಲೊಂದು ಬಿಗಿದು "ಕೂಲಿ ಮಾಡಲಿಕ್ಕೇನಾಗಿತ್ತು?" ಎಂದು ಅಬ್ಬರಿಸಿದ.

ಕಣ್ಣುಗಳು ಕೆಂಪಗೆ ಕೆಂಡದುಂಡೆಗಳಾಗಿದ್ದುವು. ಹೆಂಡದ ದುರ್ಗಂಧ, ಗಡ್ಡಮೀಸೆಗಳ ಉದ್ದುದ್ದ ಬೆಳೆ, ಕೊಳಕು ಬಟ್ಟೆ, ಕೊಳಕು ಮೈಗಳನ್ನು ಯಾರಾದರೂ ನೋಡಿದ ಪ್ರಥಮ ನೋಟಕ್ಕೆ ಅಸಹ್ಯಿಸಿ ಕೊಳ್ಳುವಂತಹ ಹೀನ ಭಯಂಕರ ದೃಶ್ಯ. ನಾವು ಮೂವರೂ ಬಾಗಿಲ ಮೂಲೆಗೆ ಅವಿತುಕೊಂಡೆವು. ಅವನು ಸಿಂಬಿ ಸುತ್ತಿದ ಟವಲ್ಲನ್ನು ತಲೆದಿಂಬಾಗಿಟ್ಟುಕೊಂಡು ಗೋಡೆಯ ಬದಿಯಲ್ಲಿ ಅಡ್ಡಾದ.

ಅವ್ವ ಬೀದಿಯ ನಲ್ಲಿಯ ಬಳಿ ಬಟ್ಟೆ ಒಗೆಯಲು ಹೋಗಿದ್ದಳು. ಅವಳು ಎದುರಿಗೆ ಸಿಕ್ಕಿದ್ದಿದ್ದರೆ ಪೆಟ್ಟು ಬೀಳುತಿದ್ದುದು ನಿಜ. ಅವನು ನಿದ್ದೆ ಮಾಡುವ ತನಕ ಅವಳು ದೃಷ್ಟಿಗೆ ಬೀಳದಿದ್ದರೆ ಒಳ್ಳೆತು. ಅವನು ಮನೆಗೆ ಬಂದಾಗ ದೃಷ್ಟಿಗೆ ಬೀಳದಂತೆ ತಪ್ಪಿಸಿಕೊಳ್ಳುವುದು ಕೆಲವೊಮ್ಮೆ ಮಾತ್ರ ಸಾಧ್ಯ, ಅಂತೂ, ಒಂದಲ್ಲ ಒಂದು ಗಳಿಗೆಯಲ್ಲಿ ಏಟುಗಳು ಕಾದಿರುತ್ತವೆ. ಅವಳು ಎಷ್ಟೆಂದರೂ ಹೆಣ್ಣು; ದೀನಾತಿದೀನೆ.

೦ ೦ ೦ ೦

ದೀನ್‌ದಾದಾನೊಂದಿಗೆ ನಾನು ಬೊಂಬಾಯಿಗೆ ಬಂದೆ. ಅವನು ಹೋಟೆಲ್ ಪಂಕಜ್ ವಿಳಾಸವನ್ನು ಕೊಟ್ಟು ನನ್ನನ್ನು ಟ್ರಾಮು ಹತ್ತಿಸಿ ತಾನೊಂದು ಕಡೆಗೆ ಹೊರಟುಹೋದ. ಅಗ ಬೆಳಗಿನ ಒಂಭತ್ತು ಗಂಟೆ. ನಾನು ಗೆಳೆಯ ಸೋಮುಗೆ ಬರೆಯಬೇಕೆಂದಿದ್ದೆ. ದೀನ್ ದಾದಾ ಅನಿರೀಕ್ಷಿತವಾಗಿ ಹೊರಟುದುದರಿಂದ ಬರೆಯಲಾಗಲಿಲ್ಲ. ಟ್ರಾಮಿನಿಂದ ಇಳಿದೆ. ಆ ಜನ, ಆ ಗಲಿಬಿಲಿ, ಆ ವಾಹನಗಳ ಓಡಾಟ ತಲೆಗೆ ಚಿಟ್ಟು ಹಿಡಿಸಿದುವು. ಅಪರಿಚಿತ ತಾಣ. ಅಪರಿಚಿತ ಭಾಷೆ ದಿಕ್ಕೆಡಿಸಿದುವು. ಯಾರಾದರೂ ಕನ್ನಡ ಮಾತಾಡಿ ಯಾರೇ ಎಂದು ಎಲ್ಲರ ಮುಖಮುಖ ನೋಡಿದೆ. ಊಹೂ, ಎಲ್ಲಿಯೂ ಕನ್ನಡದ ಶಬ್ದ ಕೇಳಿ ಬರಲೇ ಇಲ್ಲ. ಮರಾಟ, ಗುಜರಾತಿ, ಹಿಂದಿ ಭಾಷೆಗಳೇ

ಎಲ್ಲೆಡೆ ವಿಜೃಂಭಿಸುತಿದ್ದುವು. ಆದ್ದರಿಂದ ಚಿಂತನೀಯವಾದ ಆಲೋಚನೆ ಚಿತ್ತ ಕಲ್ಪವನ್ನೇ ಆಲೋಡಿತಗೊಳಿಸಿತು. ಆದರೂ ಧೈರ್ಯಗೆಡದೆ ಹಿಡಿದ ಹಾದಿ ಯಲ್ಲಿ ಮುನ್ನಡೆದೆ. ನಾನು ಇನ್ನೊಂದು ತಪ್ಪು ಮಾಡಿದುದರ ಅರಿವು ಮೂಡಿತು. ಹೋಟೆಲಿನ ವಿಳಾಸವನ್ನು ಇಂಗ್ಲೀಷಿನಲ್ಲಿ ಬರೆಸಿಕೊಂಡಿದ್ದಿದ್ದರೆ ಎಷ್ಟೋ ಒಳ್ಳೆಯದಿತ್ತು. ನಾನು ಬರೆದುಕೊಂಡುದುದು ಕನ್ನಡದಲ್ಲಿ.

ಯಾರೋ ತಮಿಳರು ಮಾತಾಡುತ್ತ ನಡೆಯುತಿದ್ದರು ಮುಂದೆ. ಕೂಡಲೇ ಅವರನ್ನು ಸಮೀಪಿಸಿ ಹೋಟೆಲ್ ಪಂಕಜ ಎಲ್ಲಿದೆಯೆಂದು ಅವರನ್ನು ತಮಿಳಿನಲ್ಲಿ ಕೇಳಿದೆ. ಅವರು ಇದೇ ರಸ್ತೆಯಲ್ಲಿ ಎರಡು ಮೈಲಿ ಯಷ್ಟು ಮುಂದೆ ನಡೆದು ಬಲಕ್ಕೆ ತಿರುಗಬೇಕೆಂದೂ, ಅಲ್ಲದೆ ಇನ್ನೂ ಏನೇನೋ ಸೂಚನೆ ಕೊಟ್ಟರು. ಸರಿ ಎರಡು ಮೈಲಿಯನ್ನು ನಡೆಯುವಷ್ಟರಲ್ಲಿ ಹೇಗೆಯೋ ಯಾವ ದೈವವಾದರೂ ಸಹಾಯ ಮಾಡಬಹುದೆಂದು ಬಿರುಸಿನಿಂದ ನಡೆಯತೊಡಗಿದೆ.

ಹೋಟೆಲ್ ಪಂಕಜ-ದ ಮಾಲೀಕ ಬೆಂಗಳೂರಿನವನೇ. ಅಲ್ಲಿನ ಕೆಲಸ ಗಾರರು ಕನ್ನಡಿಗರು. ಅವರಲ್ಲೊಬ್ಬ ನಮ್ಮ ಸೋಮು. ಅವನ ಭರವಸೆಯೋ ನನ್ನನ್ನಿಲ್ಲಿಗೆ ಎಳೆತಂದಿದೆ. ಮುಂದೆ ಬೇಕಾದುದು ದೈವ ಸಹಾಯ. ಎರಡು ಮೈಲಿ ದಾಟದ ನಂತರ ಮಿನರ್ವ ಸರ್ಕಲ್. ಅಲ್ಲಿಂದ ಬಲಗಡೆಯ ರಸ್ತೆ ಹಿಡಿದು ಬದಿಯಲ್ಲಿ ನಿಂತು ತಮಿಳರಿಗಾಗಿ ಕಾದೆ. ಹೊಟ್ಟೆಯಲ್ಲಿ ಹಸಿವು, ಬಾಯಾರಿಕೆ. ಎಲ್ಲಾದರೂ ಎರಡಿಡ್ಲಿ ತಿನ್ನುವುದು ಲೇಸೆಂದು ಅತ್ತಿತ್ತ ಕಣ್ಣಾಡಿಸಿದೆ. ದೂರದಲ್ಲೊಂದು ಹೋಟೆಲ್ ಬೋರ್ಡ್ ದೃಷ್ಟಿಗೆ ಬಿತ್ತು. ಎರಡಿಡ್ಲಿ ತಿನ್ನಬೇಕಾದರೂ ಕೈಯಲ್ಲಿರುವ ಕಾಸನ್ನು ಎಣಿಸಿ ನೋಡಬೇಕಾ ಗುತ್ತದೆ. ಅಂತೂ, ಹಸಿವು ತಾಳಲಾರದೆ ಹೋಟೆಲ್ ಹೊಕ್ಕು ಮೇಜಿನ ಮುಂದೆ ಕುಳಿತೆ. ಬೆಳಗಿನ ಉಪಹಾರ ಪಡೆದ ಬಹಳ ಮಂದಿ ಕೈಬಾಯಿ ಆಡಿ ಸುತಿದ್ದಾರೆ. ನೆಲವೂ ಕೊಳಕು ಮೇಜುಗಳೂ ಕೊಳಕು. ಮಾಣಿಗಳೂ ಕೊಳಕು.

ನನ್ನ ದೃಷ್ಟಿ ಇಡೀ ಕೋಣೆಯನ್ನು ಒಂದೆರಡು ಕ್ಷಣದೊಳೊಳಗಾಗಿ ಅಳೆದು ನೋಡಿ ಹಿಮ್ಮರಳಿತು. ಮಾಣಿಯೊಬ್ಬ ಗುಜರಾತಿಯಲ್ಲಿ ಏನು

ಬೇಕೆಂದು ಕೇಳಿದ. ನಾನು ತಮಿಳಿನಲ್ಲಿ ಎರಡಿಡ್ಲಿ ಬೇಕೆಂದು ಉತ್ತರಿಸಿದೆ. ಅವನು ಒಳಹೋಗಿ ತಮಿಳು ಬಲ್ಲವನನ್ನು ಕರೆತಂದ. ನನಗೆ ಬಲು ಸಂತೋಷ ವಾಯಿತು. ಅವನೊಡನೆ ಹೋಟೆಲ್ ಪಂಕಜದ ವಿಳಾಸ ತಿಳಿದುಕೊಂಡೆ. ಅಲ್ಲಿಂದ ಅದು ಬಹಳ ದೂರವೇನೂ ಇರಲಿಲ್ಲ. ಹುಡುಕಿಕೊಂಡು ಹೋದೆ. ಸ್ವಲ್ಪಹೊತ್ತು ಹುಡುಕಿದನಂತರ ಸಿಕ್ಕಿತು. ಅದಿರುವುದೊಂದು ಗಲ್ಲಿಯಲ್ಲಿ. ರಸ್ತೆಯ ಮಗ್ಗುಲಲ್ಲಿ ಚರಂಡಿಯ ನೀರು ಹೆಪ್ಪುಗಟ್ಟಿ ದುರ್ವಾಸನೆ ಬಡಿ ಯುತಿತ್ತು. ಜನ ಅದರ ಬಳಿಯಲ್ಲಿಯೇ ನಿವಾಸ ಹೂಡಿ ವ್ಯಾಪಾರ-ಅಡಿಗೆ-ಊಟಗಳನ್ನು ಸರಾಗವಾಗಿ ನಡೆಸುವ ರೀತಿ ನೋಡಿದರೆ ನಮ್ಮೂರಿನ ಕೊಳೆ ಗೇರಿಯೇ ಸಾವಿರ ಪಾಲು ಮೇಲು ಎನಿಸಿತು. ಒಳ ಹೋದೆ. ಸೋಮು ಇರಲಿಲ್ಲ. ಅವನು ಮಧ್ಯಾಹ್ನ ಬರುತ್ತಾನೆಂದು ತಿಳಿಯಿತು.

೦ ೦ ೦ ೦

ಕೆಲಸವನ್ನು ಹಿಡಿಯುವ ಮುನ್ನ ದೇವೀದರ್ಶನ ಮಾಡಲೇಬೇಕೆಂಬ ಆತ್ಮನಿರ್ಣಯಕ್ಕೆ ತಲೆಬಾಗಿ ದುರ್ಗಾದೇವಾಲಯದ ಹಾದಿ ಹಿಡಿದೆ. ಅದು ಕೊಳೆಗೇರಿಗೆ ಸಮೀಪ. ಅಲ್ಲಿನ ನಿವಾಸಿಗಳೆಲ್ಲಾ ದೇವಿಗೆ ವಂದನೆ ಸಲ್ಲಿಸದೆ ಕೆಲಸ ಆರಂಭಿಸುವುದಿಲ್ಲ. ಅವಳ ಕೃಪೆಯಿಂದಲೇ ಗಳಿಕೆ-ಉಳಿಕೆ ಎರಡೂ ಲಾಭ ದಾಯಕ ಎಂಬ ಭರವಸೆ ಎಲ್ಲರಲ್ಲೂ ರಕ್ತಗತ. ಆ ನೂಕು ನಗ್ಗುಲು ನೋಡಿ ದರೆ ನಿಜವಾಗಿಯೂ ಸ್ವರ್ಗದೇವತೆಯೇ ಇರಬೇಕು ಎನಿಸಿತು. ನಾನೂ ನುಗ್ಗಿದೆ. ನೆಲವೆಲ್ಲ ಕೊಳಕುಮಯ. ಕೆಸರು ತುಳಿದಷ್ಟು ಕೊಳಕು ಅಂಟಿದೆ. ಕೊಳಕು ಕಾಲಿಂದ ನುಗ್ಗುವ ಜನರಿಂದ ಕೊಳಕಿನಾಗರ. ಆದರೂ ನಾನು ಭಕ್ತಿಯಿಂದ ನಮಸ್ಕರಿಸಿ ಕಾಣಿಕೆ ಹಾಕಿ ಪ್ರಸಾದ ಸ್ವೀಕರಿಸಿದೆ.

ಸೋಮುವಿನ ಪ್ರಯತ್ನದಿಂದ ನನಗಲ್ಲಿ ಮಾಣಿಯ ಕೆಲಸ ಸಿಕ್ಕಿತು. ಊಟ ಕಳೆದು ತಿಂಗಳಿಗೆ ಐವತ್ತು ರೂಪಾಯಿ. ಪ್ರತಿ ತಿಂಗಳೂ ತಮ್ಮಂದಿರು ತಂಗಿಯರು ಮತ್ತು ಅಮ್ಮನಿಗೆ ಬಟ್ಟೆಗಳನ್ನುಕೊಂಡು ದೀನ್‌ದಾದಾ ನೊಂದಿಗೆ ಕಳುಹಿಸಿದೆನಾದರೆ ಮನಸ್ಸಿಗೆ ಎಷ್ಟೋ ಹಿತವಾದೀತು ಎಂಬ ಯೋಚನೆ ಕನಸು ಮನಸುಗಳಲ್ಲಿ. ಪ್ರಪ್ರಥಮವಾಗಿ ನನಗೂ ಎರಡು ಜೊತೆ ಬಟ್ಟೆಗಳು ಬೇಕೇ ಬೇಕಿತ್ತು. ಸೋಮುವಿನೊಂದಿಗೆ ಕಾಲುಹಾದಿಯಲ್ಲಿ ಬಟ್ಟೆ

ಮಾರುವಲ್ಲಿಗೆ ಹೋದೆ. ಬಹಳ ಅಗ್ಗವಾದ ಸಾಧಾರಣ ತರದ ಬಟ್ಟೆಗಳನ್ನು ನನಗಾಗಿ ಕೊಂಡೆ. ವಾಸ ಸೋಮುವಿನೊಂದಿಗೆ. ಅವನ ಗೂಡಿನಲ್ಲಿ ಕಾಲು ಚಾಚಿ ಕೂಡುವಷ್ಟು ಸ್ಥಳವಿಲ್ಲ. ಸಾಮೂಹಿಕವಾದ ಶೌಚಾಲಯಗಳಿದ್ದ ಒಂದು ವಠಾರ. ಅಲ್ಲಿ ಒಂದು ಗಂಟೆ ಹೊತ್ತು ಕಳೆಯುವುದೆಂದರೂ ಕಷ್ಟವೇ. ಅಂತಹ ನರಕವಾಸದಲ್ಲಿ ಒಂದೇಒಂದು ಆಕರ್ಷಣೆಯೆಂದರೆ ನೆರೆಮನೆಯ ಮುದ್ದು ಮಗು ಸುಮನಾ. ಮುದ್ದುಮುದ್ದಾದ ಮಾತುಗಳನ್ನಾಡುತ್ತ ಒಳ ಬಂದರೆ ಸ್ವರ್ಗವೇ ಧರೆಗಿಳಿದು ಬಂದಂತೆನಿಸುತಿತ್ತು. ಮಗುವಿಗೆ ಇನ್ನೂ ಮೂರು ನಾಲ್ಕುವರ್ಷಗಳಷ್ಟೇ.ಮನೆಯಲ್ಲಿ ತಾಯಿಗೆ ಕೈ ತುಂಬ ಕೆಲಸವಾದ್ದರಿಂದ ಮಗು ನಮಗೆ ಅಂಟಿಕೊಳ್ಳುತಿತ್ತು. ಎಷ್ಟು ಮುದ್ದಿಸಿದರೂ ಸಾಲದು. ಎಷ್ಟು ಮಾತಾಡಿಸಿದರೂ ಸಾಲದು. ಕೆಲವೇ ದಿನಗಳಲ್ಲಿ ಅದು ತಾಯಿ ಕರೆದರೂ ಹೋಗದಷ್ಟುಸ್ನೇಹಮಯಿಯಾಗಿ ಬೆರೆತಳು ನನ್ನೊಂದಿಗೆ.ಸೋಮು ತಾನು ಈ ಗೂಡು ಹಿಡಿಯುವ ಮುನ್ನ ಗೂಡಿಗಾಗಿ ಪ್ರಯತ್ನ ಪಡುತ್ತ ಅನುಭವಿಸಿದ ಅನೇಕ ದಾರುಣ ಚಿತ್ರಗಳನ್ನು ರಸವತ್ತಾಗಿ ನಗೆಮಾತಿನಲ್ಲಿ ಬಣ್ಣಿಸುತಿದ್ದರೆ ನಾನು ಮೈಯೆಲ್ಲಾ ಮನಸ್ಸಾಗುತಿದ್ದೆ. ಹೊತ್ತು ಉರುಳಿದುದರ ಪರಿವೇ ಇರದೆ ಮಾತಾಡುತಿದ್ದೆವು ರಾತ್ರಿಯಲ್ಲಿ. ಅದೊಂದು ರಸಾನ್ವಿತವಾದ ರಸಸಮಯ ನನ್ನ ದುಃಖಪೂರಿತವಾದ ಜೀವನದಲ್ಲಿ.

o o o o

ಮೊದಲ ಸಾರಿ ಪಡೆದ ಹಣದಿಂದ ಒಂದು ಪೆಟ್ಟಿಗೆ ಕೊಂಡು ಅದರಲ್ಲಿ ನನ್ನೆಲ್ಲ ಚೂರು ಪಾರು ವಸ್ತುಗಳನ್ನು ತುಂಬಿಟ್ಟು ಭದ್ರಪಡಿಸಿದೆ. ಅದುವರೆಗೆ ನನ್ನದಾಗಿ ಏನನ್ನೂ ಹೊಂದಿರದ ನನಗದು ತುಂಬ ವಿಶೇಷ ಎನಿಸಿದುದರಲ್ಲಿ ಖಂಡಿತ ಅಶ್ಚರ್ಯವೇನೂ ಇರಲಿಲ್ಲ. ನೀಲಿಯ ಬಣ್ಣದಮೇಲೆ ರಂಗುರಂಗಿನ ಗೆರೆಗಳಿಂದ ಕೂಡಿದ ಟ್ರಂಕು. ಅದಕ್ಕೊಂದು ಹಿತ್ತಾಳೆಯ ಬೀಗ. ಅದನ್ನು ಕಣ್ತುಂಬ ನೋಡುವುದರಲ್ಲಿ ಆಸೆ-ಪ್ರೀತಿ-ಹೆಮ್ಮೆ. ಹೀಗೆ ಏನೇನೋ ಸ್ವರ್ಗೀಯ ಭಾವನೆಗಳು, ಹೃದಯ ಬಿರಿಯುವಷ್ಟು ತುಂಬುತ್ತವೆ.

ಸೋಮು ಬೆಳಗಿನ ಪಾಳಿಯಲ್ಲಿ ಕೆಲಸ. ನನಗೆ ಮಧ್ಯಾಹ್ನದ ಪಾಳಿಯಲ್ಲಿ. ಬೆಳಗಿನ ಉಪಹಾರಕ್ಕಾಗಿ ನಾನು ಕಾಸು ಬಿಚ್ಚುತ್ತಿರಲಿಲ್ಲ. ಹೋಟೆಲಿನ

ಹಾಳುಮೂಳು ತಿಂದು ಕಾಲಹರಣ ಮಾಡುತ್ತಿದ್ದೆ. ಎರಡನೆಯ ತಿಂಗಳಿನಲ್ಲಿ ಬಂದ ಹಣದಿಂದ ಫುಟ್‌ಪಾತ್ ಅಂಗಡಿಗಳನ್ನು ಸುತ್ತಿ ನೇದ ಕುಮಾರರಿಗೆ ರಂಗುರಂಗಿನ ಎರಡು ಜೋಡಿ ಬಟ್ಟೆಗಳನ್ನು ಕೊಂಡುಕೊಂಡೆ. ಅವುಗಳಲ್ಲಿದ್ದ ಸುಂದರ ಹೂವುಗಳ ಮುದ್ರೆ ಮನಸ್ಸಿಗೆ ತುಂಬ ಹಿತವೆನಿಸಿತು. ಅವನ್ನು ಎದೆಗೊತ್ತಿ ಹಿಡಿದು ಆನಂದದಿಂದ ತಂದೆ. ಪೆಟ್ಟಿಗೆಯೊಳಗಿಡುವ ಮುನ್ನ ಹೂಮುದ್ದಿಟ್ಟು ಮುದ್ದಿಸಿದೆ. ಪಾಪ, ಆ ಮಕ್ಕಳು ಈವರೆಗೆ ಇಂತಹ ಬಟ್ಟೆಗಳನ್ನು ಕಂಡವರೇ ಅಲ್ಲ. ಇವನ್ನು ನೋಡಿದರೆ ಎಷ್ಟು ಸಂತೋಷ ಪಡುವರೋ ಎನಿಸಿ ಖುಷಿ ಪಟ್ಟೆ. ಬೀಗದ ಕೈಯನ್ನು ದಾರಕ್ಕೆ ಸುರಿದು ಕುತ್ತಿಗೆಗೆ ಹಾರದಂತೆ ಹಾಕಿ ಅಂಗಿಯ ಒಳಗೆ ಸೇರಿಸಿಕೊಂಡೆ, ಕಳೆದುಹೋದಿತೆಂಬ ಭಯದಿಂದ. ಹೋಟೆಲಿನ ಮಾಲೀಕ ನನ್ನ ಕೆಲಸದಿಂದ ಸಂತೃಪ್ತಿಗೊಂಡು "ಪರವಾಯಿಲ್ಲ ಹುಡುಗ ಹೀಗೇ ಚೆನ್ನಾಗಿ ಕೆಲಸಮಾಡು" ಎಂದು 'ಶಹಬಾಸ್' ಹೇಳಿ ಬೆನ್ನು ತಟ್ಟಿದ. ಇತರ ಆಳುಗಳ ಮುಂದೆ ಅಂದು ನನಗಾದ ಸಂತಸ ಅಷ್ಟಿಷ್ಟಲ್ಲ. ಸೋಮು ನನ್ನ ಸಂತೋಷದಲ್ಲಿ ಪಾಲ್ಗೊಂಡು, ಕೆಲವು ಕಾಲ ಕಳೆದರೆ ನಿನ್ನ ಪಗಾರ ಹೆಚ್ಚಿಸಬಹುದು, ಎಂದು ಪ್ರೋತ್ಸಾಹ ನೀಡಿದ. ಸೋಮು ನೂರು ರೂಪಾಯಿ ಪಡೆಯುತ್ತಾನೆ. ಹಾಗಾದರೆ ನನಗೂ ಸಿಕ್ಕುತ್ತದೆ ನೂರು ರೂಪಾಯಿ! ದೇವರೇ ಆ ಕಾಲ ಬೇಗನೆ ಬರಲಿ ಎಂದು ಪ್ರಾರ್ಥಿಸಿಕೊಂಡೆ. ತುಮನುನಗಳು ಪುಳಕಗೊಂಡುವು. ನಾನು ನಿಗಿನಿಗಿ ನಲಿದೆ.

ನಾಳೆಯೋ ನಾಡಿದ್ದೋ ನನಗೆ ಹದಿನೈದು ತುಂಬುತ್ತದೆ. ಕ್ರಿಸ್‌ಮಸ್ ಹಬ್ಬದ ಮುನ್ನಾದಿನ ನೀನು ಹುಟ್ಟಿದೆ ಎಂದು ತಾಯಿ ನನಗೆ ಹೇಳಿದ್ದುಂಟು. ಅವಳ ತಿಳುವಳಿಕೆ ಅಷ್ಟು ಪ್ರಬುದ್ಧವಾದುದಲ್ಲವಾದರೂ ಕ್ರಿಸ್‌ಮಸ್ ಹಬ್ಬವಂತೂ ಸತ್ಯಸ್ಯ ಸತ್ಯ. ಸೋಮು "ನಿನ್ನ ಹುಟ್ಟಿದ ಹಬ್ಬದ ಸಿಹಿ ಎಲ್ಲಯ್ಯಾ?" ಎಂದು ಕೇಳಿದ. ಇನ್ನೂ ಅನೇಕ ಗೆಳೆಯ ಮಾಣಿಗಳೂ ಹಾಗೇ ಅಂದರು.

"ದಯಮಾಡಿ ನೀವೆಲ್ಲರೂ ಕೂಡಿ ನನಗೇ ಸಿಹಿ ಕೊಡಿ?" ಎಂದು ಬೇಡಿದೆ ನಾನು.

ಎಲ್ಲರೂ ನಕ್ಕರು. ನಾನೂ ಕೂಡಿ ಅವರೊಂದಿಗೆ ನಕ್ಕು ಆ ಹರುಷದಲ್ಲಿ ಪಾಲ್ಗೊಂಡೆ.

ಸುಮನಾ–೧೯೩೯

ಹೋಟೆಲಿನಿಂದ ನಮ್ಮ ವಠಾರಕ್ಕೆ ಎರಡು ಫರ್ಲಾಂಗ್ ಮಾತ್ರ. ನಾನು ಒಂದಿನವೂ ಬಸ್ಸು ಹಿಡಿಯಲಿಲ್ಲ, ನಡೆದೇ ಬರುತ್ತಿದ್ದೆ. ನಡೆಯುವುದರಲ್ಲಿ ಎಷ್ಟೋ ಶಾಂತಿಯಿದೆ ಬಸ್ಸಿನ ನೂಕು ನುಗ್ಗಲಿಗಿಂತ. ನಾನು ವಠಾರವನ್ನು ಮುಟ್ಟಿ ನಲ್ಲಿಕಟ್ಟೆಯಲ್ಲಿ ಮುಖಮಜ್ಜನ ಮಾಡಿದೆ. ಅದು ಹತ್ತೂ ಮಂದಿಗೆ ಸೇರಿದ ಯಾದ್ದರಿಂದ ಯಾರೂ ತೊಳೆದು ಉಜ್ಜಿ ಶುಚಿಗೊಳಿಸುವ ಕಾರ್ಯಕೆ ಹೋಗುವುದಿಲ್ಲ. ಹಾಗೆಂದು ನಾನು ಸುಮ್ಮನಿರಲಾರೆ. ಆಗಾಗ ತೊಳೆ ಯುವುದನ್ನು ನೋಡಿದರೂ ಇತರರು ಮುಂದಾಗುವುದಿಲ್ಲ. ವಠಾರವೆಲ್ಲ ದುರ್ನಾತ ಹಬ್ಬಿದರೂ ಗಮನಿಸುವವರಿಲ್ಲ.

ನಾನು ಕೊಠಡಿಯ ಬಾಗಿಲನ್ನು ತೆರೆದು ಚಾಪೆ ಬಿಚ್ಚಿ ಅಡ್ಡಾದೆ.

ಜಿಣ್, ಜಿಣ್, ಜಿಣ್, ಜಿಣ್.

ತಕ್ಷಣವೇ ನಾನು ಬಾಗಿಲ ಕಡೆಗೆ ಸಹಜವಾಗಿ ದೃಷ್ಟಿ ಹೊರಳಿಸಿದೆ. ನೋಡಿದರೆ ನನ್ನ ಮುದ್ದು ಗೆಳತಿ ಸುಮನಾ. ಕಾಲಿಗೆ ಗೆಜ್ಜೆ ಸರ. ಕೈಯಲ್ಲೊಂದು ಪುಟ್ಟತಟ್ಟೆ. ಅದರಲ್ಲಿ ತಿಂಡಿ ತಿನಿಸು.

"ಅರೆರೆ! ಇದೇಕೆ ತಂದೆ ಮಗೂ?"

"ನಿಮಗೇಂತ ಮಮ್ಮಿ ಕೊಟ್ಟಿದ್ದಾಳೆ."

"ಬೇಡ ಮಗೂ, ಮಮ್ಮಿ ಕೋಪಿಸಿಕೊಳ್ಳಬಹುದು. ನೀನಿದನ್ನು ಹಿಂದಿರುಗಿಸಿ ಬಾ. ಆಯಿತೇ?"

ಆದರೆ, ಮಗು ಕೇಳಲಿಲ್ಲ. ತಾಯಿಗೆ ಗೊತ್ತಿಲ್ಲದಂತೆ ತಂದಿರಬಹುದೇ? ಎಂಬ ಯೋಚನೆಯಿಂದ ಬಾಗಿಲ ಕಡೆ ನಿಟ್ಟಿಸಿದೆ. ಆಗಲೇ ಮಗುವಿನ ತಂದೆ ಮಾಣಿಕ್‌ಷಾ ಕಾಣಿಸಿಕೊಂಡರು.

"ಇಲ್ಲಪ್ಪಾ, ಇದು ನಿನಗೆಂದೇ ಕಳುಹಿಸಿದ್ದು. ಇಂದು ಮಗುವಿನ ಹುಟ್ಟಿದ ಹಬ್ಬ. ಇಂದಿಗೆ ನಾಲ್ಕು ವರ್ಷ ತುಂಬಿತು. ಅದಕ್ಕೇ ಸಿಹಿ ಇನ್ನೇನಿಲ್ಲ."

ನಾನು ಮಗುವನ್ನು ಮನಸಾರೆ ಮುದ್ದಿಟ್ಟುಕೊಂಡು ಕೇಳಿದೆ "ಗೆಜ್ಜೆ ಸರ ಯಾರು ಕೊಟ್ಟಿದ್ದು?"

"ಅಪ್ಪ ಗೆಜ್ಜೆಸರ ತಂದುಕೊಟ್ಟರು. ಅಮ್ಮ ಹೊಸಲಂಗ ತಂದಿದ್ದಾಳೆ."

ನಾನು ಮನದಲ್ಲೇ ಯೋಚಿಸಿದೆ, ನಾನೇನೂ ತಂದಿಲ್ಲವಲ್ಲಾ. ಏನು ಕೊಡಲಿ? ನನ್ನ ಹುಟ್ಟಿದ ಹಬ್ಬವೂ ಇಂದೇ. ಅವಳದೂ ಇಂದೇ. ಏನಿದರ ಅರ್ಥವೋ ....?

ಮಗುವಿನೊಂದಿಗೆ ಸಿಹಿಯನ್ನು ತಿಂಪು ಕೆಲವು ಚಾಕೋಲೆಟ್ ಕೊಂಡುಕೊಟ್ಟೆ.

o o o o

ಈ ಸಲಿ ತಮ್ಮಂದಿರಿಗೆ ಬಟ್ಟೆ ಕೊಂಡುಕೊಂಡೆ. ಸೋಮು ನನ್ನೊಂದಿಗಿದ್ದ. ಉತ್ತಮವಾದ ಬಟ್ಟೆಗಳನ್ನೇ ಆರಿಸಿಕೊಂಡೆ. ನನ್ನ ಆಸೆ-ಆಸಕ್ತಿಯನ್ನು ಕಂಡು ಸೋಮು ಒಮ್ಮೆ ಸಂತಸಪಟ್ಟರೂ ಮತ್ತೊಮ್ಮೆ ಲೇವಡಿ ಮಾಡುತಿದ್ದ.

"ನೀನು ನನ್ನ ಸಂಸಾರದ ಭಂಗ ಬನ್ನಗಳನ್ನು ಕಣ್ಣಿನಿಂದ ಕಾಣಲಿಲ್ಲ ಬಿಡು. ಅಷ್ಟೇ ಅಲ್ಲ, ನಿನಗೆ ಅದರ ಅರಿವು ಆಗುವುದೂ ಬೇಡ ಎನಿಸುತ್ತೆ ನನಗೆ!"

ಸೋಮು ಸುಮ್ಮನೆ ತನ್ನಲ್ಲೇ ಯೋಚಿಸಿ "ಹೋಗಲಿ ಬಿಡು. ಎಲ್ಲರಿಗೂ ಒಂದಲ್ಲ ಒಂದು ಬಗೆಯ ಕಷ್ಟ ಇದ್ದೇ ಇದೆ," ಎಂದ ನೀರಸ ದನಿಯಲ್ಲಿ, ಮುಖಬಿಂಬ ಮುದುಡಿತು.

ನಾನು ಕೊಂಡ ಬಟ್ಟೆಗಳನ್ನು ಯಾರಿಗೂ ಕಾಣಿಸದಂತೆ ತಂದು ಪೆಟ್ಟಿಗೆಯೊಳಗಿಡುವೆ. ಯಾರಾದರೂ ನೋಡಿಕೊಂಡರೆ ಕದ್ದು ಬಿಡಬಹುದು ಎಂಬ ಭಯ ಮನಸ್ಸಿಗೆ. ನನ್ನ ರೀತಿಯನ್ನು ನೋಡಿ ಅವನು ಮುಗುಳುನಕ್ಕು ಸುಮ್ಮನಾದ.

ಈಗೀಗ ಒಂದುಹೊತ್ತು ಕೆಲಸವಿಲ್ಲದೆ ಸುಮ್ಮನೆ ಕಾಲಹರಣವೆಂದರೆ ಬೇಸರ ಮೂಡುತ್ತದೆ. ಅದಕ್ಕಾಗಿ ಯಜಮಾನರನ್ನು ಕಂಡು "ನಾನಿಲ್ಲಿ ಎರಡು ಹೊತ್ತೂ ಕೆಲಸ ಮಾಡಬಹುದೇ ?"ಎಂದು ಕೇಳಿಕೊಂಡೆ. ಅದಕ್ಕೆ ಅವರು

ಒಪ್ಪಿಗೆ ನೀಡಿದರು. ಇನ್ನು ಮುಂದೆ ನನಗೆ ನೂರು ರೂಪಾಯಿ ಪಗಾರ. ಸೋಮು ನನ್ನ ಅಪೇಕ್ಷೆಗೆ ಅಡ್ಡಗಾಲು ಹಾಕಲಿಲ್ಲ, ಕೆಲಸಮಾಡು ಎಂದ.

ಬೆಳಿಗ್ಗೆ ಆರುಗಂಟೆಗೆ ಹೋಟೆಲ್‌ಗೆ ಹೋದರೆ ಸಾಯಂಕಾಲ ಆರು ಘಂಟೆಗೆ ಬಿಡುವು. ಬರುವಾಗ ಅಲ್ಲಿಯೇ ಏನಾದರೂ ತಿಂದು ಮನೆಗೆ ಹಿಂದಿರುಗುತಿದ್ದೆ. ಕೆಲವೊಮ್ಮೆ ಬೀಚಿಗೆ ಹೋಗುತಿದ್ದುದುಂಟು. ಇಂದು ನನ್ನ ಮುದ್ದು ಸುಮನಾ ಗೆಂದು ಒಂದು ಪುಟ್ಟ ಆಟಿಕೆಯನ್ನು ಕೊಂಡು ಮನೆಗೆ ಹೋದೆ. ಬಾಗಿಲು ತೆರೆದು ಚಾಪೆ ಹಾಸುತಿದ್ದಂತೆಯೇ ಸುಮನಾ ಪ್ರತ್ಯಕ್ಷ! ನನ್ನವರಿಲ್ಲದ ಈ ಊರಿನಲ್ಲಿ ಸುಮನಾ–ಳ ಸ್ನೇಹ–ಪ್ರೇಮಗಳ ದಿವ್ಯ ಸಂಬಂಧ ಎಷ್ಟೆಂಬುದನ್ನು ಬಣ್ಣಿಸಿ ಪೂರೈಸಲಾರೆ. ನಿಜವಾಗಿಯೂ ನನ್ನ ಪ್ರಾಣವೇ ಅವಳು! ಜೀವನವೇ ಅವಳು! ಆಟಿಕೆಯನ್ನು ಅವಳಿಗೆ ಕೊಟ್ಟು ಮನಸಾರೆ ಮುದ್ದಾಡಿದೆ. ಸುಮನಾ ಆಟಿಕೆಯನ್ನು ಅಪ್ಪ–ಅಮ್ಮನಿಗೆ ತೋರಿಸಲೆಂದು ಓಡಿ ಹೋದಳು, ಪುಟ್ಟಪುಟ್ಟ ಹೆಜ್ಜೆಗಳನ್ನಿಡುತ್ತ.

ಈ ದಿನ ಸೋಮು ತನಗಾಗಿ ಒಳ್ಳೆಯ ಬಟ್ಟೆಗಳನ್ನು ಕೊಂಡು ತಂದಿದ್ದ. ಅವನು ಪೆಟ್ಟಿಗೆಯನ್ನು ತೆರೆದು ಮುಂದಿಟ್ಟುಕೊಂಡು ತನ್ನ ಸಂಗ್ರಹ ವನ್ನು ತೋರಿದ.ಒಂದಕ್ಕಿಂತಲೂ ಒಂದು ಚೆನ್ನ. ನಾನು ಆಶ್ಚರ್ಯಾನಂದದಿಂದ ಕಣ್ತುಂಬ ನೋಡಿದ ನಂತರ ಅವನಿಗೆಂದೆ "ಇನ್ನು ಕೆಲವು ಜೋಡಿ ಕೊಂಡು ಕೊಂಡರೆ ಸಾಕು, ನಿನ್ನ ಪೆಟ್ಟಿಗೆ ತುಂಬುತ್ತೆ."

ಅವನು ನಕ್ಕು ನುಡಿದ "ಇನ್ನು ಸಧ್ಯಕ್ಕೆ ಏನೂ ಕೊಳ್ಳುವುದಿಲ್ಲ. ಹಣ ಬ್ಯಾಂಕಿನಲ್ಲಿಡುವೆ, ಮುಂದೆ ಅದರಿಂದ ನಾನೇ ಒಂದು ಹೋಟೆಲ್ ನಡೆಸ ಬಹುದು, ನೀನೂ ಕೂಡಿಕೊಂಡರೆ ಒಳ್ಳಿತು. ಇನ್ನು ಮುಂದೆ ನಾನೂ ಸಹ ಎರಡು ಹೊತ್ತೂ ಕೆಲಸ ವಹಿಸಿಕೊಳ್ಳುವೆ."

"ಅದು ಒಳ್ಳೆಯದು....ಸೋಮೂ."

o o o o

ಕೊನೆಯ ಅಂಕವಾಗಿ ಅಮ್ಮನಿಗೊಂದು ಒಳ್ಳೆಯ ಸೀರೆ ಕೊಂಡು ಕೊಂಡು ದೀನ್‌ದಾದನಿಗೆ ಒಂದು ಕಾರ್ಡು ಬರೆದು ಹಾಕಿದೆ, ಮುಂದಿನ ಸಲ

ಮುಂಬೈಗೆ ಬಂದಾಗ ನನ್ನನ್ನು ಕಂಡು ಹೋಗಿ. ನಮ್ಮವರಿಗೆ ಕೆಲವು ಬಟ್ಟೆಗಳನ್ನು ನಿಮ್ಮೊಂದಿಗೆ ಕಳುಹಿಸುವೆ. ದಯವಿಟ್ಟು ನಮ್ಮವರಿಗೆ ಮುಟ್ಟಿಸುವ ಉಪಕಾರ ಮಾಡಿ ಎಂದು. ನನಗಾದ ಪರಮಾನಂದಕ್ಕೆ ಎಣೆಯೇ ಇರಲಿಲ್ಲ. ಏನೋ ಒಂದು ಬಗೆಯ ಸಮಾಧಾನ–ಸಂತೃಪ್ತಿಗಳು ಪುಟ್ಟ ಹೃದಯವನ್ನು ಸಿಡಿದೊಡೆಯುವಂತೆ ತುಂಬಿದುವು. ಆನಂದದ ಝರಿ ನರನಾಡಿಗಳಲ್ಲಿ ಜಳ ಜಳನೆ ಹರಿದಾಡಿ ತನು ಮನಗಳನ್ನು ನಿಗಿನಿಗಿ ನಲಿಸಿತು. ನಾನು ಜಗತ್ತನ್ನೇ ಮರೆತು ಯೋಚಿಸಿದೆ...ನನ್ನ ಕೈಗಾಣಿಕೆಗಳು ನನ್ನವರಿಗೆ ತಲುಪಿ, ಎಲ್ಲರೂ ಉಟ್ಟು ತೊಟ್ಟು ಎಷ್ಟು ಆನಂದಿಸುವರೋ ಎಂಬುದನ್ನು. ಆ ಸಂತೋಷದ ದೃಶ್ಯವನ್ನು ಕಣ್ಣಿಂದ ನೋಡಲಾರೆನಲ್ಲಾ ಎಂಬ ಕೊರತೆಯಿದ್ದರೂ ಮೇರೆ ಮೀರಿದ ಹರ್ಷ ಎದೆಯಲ್ಲಿ. ನನ್ನ ಜೀವಮಾನದ ಹದಿನೈದು ವರ್ಷಗಳಲ್ಲಿ ನಾನು ಪ್ರಪ್ರಥಮವಾಗಿ ಸಾಧಿಸಿದ ಸಾಧನೆಯು ಅಭೂತಪೂರ್ವ ಸಂತಸವನ್ನು ಹೇಳಿಕೊಳ್ಳದೆ ಇರಲಾರೆ. ಒಮ್ಮೆ ಪೆಟ್ಟಿಗೆ ತೆಗೆದು ಎಲ್ಲಾ ಬಟ್ಟೆಗಳನ್ನೂ ಕಣ್ತುಂಬ ನೋಡಿದೆ, ಅಗ್ಗದ ಬಟ್ಟೆಯಾದರೂ ಮನಸ್ಸಿಗೆ ಎಷ್ಟು ಆಪ್ಯಾಯಮಾನವೋ...ಎಲ್ಲವನ್ನೂ ಮುಖಕ್ಕೆ ಒತ್ತಿ ಮುದ್ದಿಸಿ ಸರಿಯಾಗಿ ಮಡಿಸಿಟ್ಟೆ. ಎಲ್ಲರೂ ಹೊಸ ಬಟ್ಟೆಯುಟ್ಟು ನಲಿಯುವುದನ್ನು ಮತ್ತೆ ಮತ್ತೆ ಕಲ್ಪಿಸಿಕೊಂಡೆ. ನಯನದ್ವಯಗಳಲ್ಲಿ ಆನಂದಾಶ್ರು ಮೊಳೆತುವು. ಸಂತೋಷಾಂಬುಧಿಯಲ್ಲಿ ಮುಳುಗಿ ತೇಲಿ ನಲಿದೆ.

ಮುಂಬೈ ಬೇಸಗೆಯ ದಳ್ಳುರಿಯಲಿ ಬೇಯುತಿತ್ತು. ಉಷ್ಣೋಷ್ಣ ಹವಾಮಾನದಲ್ಲಿ ಬೆಂದು ಬೆವರಿಳಿಸುತಿತ್ತು ಪ್ರಾಣಿಕೋಟಿ.

ಸಂಜೆ ಐದೂವರೆಯ ಸಮಯ. ನಾನು ತಣ್ಣೀರಿನಲ್ಲಿ ಮುಖ ಮಜ್ಜನ ಮಾಡಿ ಹೋಟೆಲಿಂದ ನೇರವಾಗಿ ಬೀಚಿಗೆ ಹೋದೆ. ಮಾಣಿಕ್‌ಷಾ ಮತ್ತು ಅವರ ಶ್ರೀಮತಿಯವರು ಮಗು ಸುಮನಳೊಂದಿಗೆ ಅಲ್ಲಿಗೆ ಆಗಲೇ ಆಗಮಿಸಿದ್ದರು.

ಸಂಜೆಯ ವಿಹಾರಕ್ಕೆ ಆಗಮಿಸಿದ ಜನರಾಶಿಗೆ ಕೊರತೆಯೇ ಇರಲಿಲ್ಲ.

ನಾನು ಮಾಣಿಕ್‌ಷಾರವರನ್ನು ಸಮೀಪಿಸಿ ಕೇಳಿದೆ "ನೀವು ಬಂದು ಎಷ್ಟು ಹೊತ್ತಾಯಿತು?"

"ನಾವು ಇದೀಗಷ್ಟೆ ಬಂದೆವು."

ಸುಮನಳಿಗೆ ನನ್ನನ್ನು ಕಂಡು ಸ್ವರ್ಗವೇ ಕೈಗೆಟುಕಿದಷ್ಟು ಆನಂದ. ಕೇಕೆ ಹಾಕಿ ನಗುತ್ತ ನನ್ನ ಕಡೆಗೆ ಜಿಗಿದು ಎದೆಯನ್ನೇರಿದಳು. ಎಳೆ ಕೈಗಳೆರಡೂ ಕೊರಳನ್ನು ತಬ್ಬಿದುವು. ನಾನು ಮುದ್ದಿನ ಮಳೆಗರೆಯುತ್ತ ನಲಿದಾಡಿ ಕುದುರೆಯಾಟ ಆಡಿಸಿದೆ. ಹೈ ಹೈ ಎಂದು ನಕ್ಕು ನಲಿಯಿತು ಮಗು.

ಸಮುದ್ರ ಭೋರ್ ಭೋರ್‌ನೆ ಭೋರ್ಗರೆಯುತ್ತಿದೆ. ಅಲೆಗಳು ಹುಚ್ಚೆದ್ದು ನುಗ್ಗುತ್ತಿವೆ. ಅಲೆಗಳ ಮೇಲೆ ತೇಲುವ ವಸ್ತು ಸಮಸ್ತವೂ ಸೂರ್ಯರಶ್ಮಿ ತಾಗಿ ಕೆಂಗಲಿಸುತ್ತಿವೆ ಚುಕ್ಕಿಚುಕ್ಕಿಯಾಗಿ. ರುದ್ರ ಭಯಂಕರ ಶೃಂಗಾರ ಲೀಲೆ. ಲವಣ ರಾಶಿಯನ್ನು ಕದಡಿ ಕಡೆದುಕಡೆದು ಉಕ್ಕಿ ಬರುವ ಬೆಳ್ನೊರೆಯ ರಾಶಿರಾಶಿ.

ನಾನು ಸುಮನಳನ್ನು ಭುಜದ ಮೇಲೆ ಕೂರಿಸಿಕೊಂಡು ತೀರದಲ್ಲೆಲ್ಲಾ ಅಡ್ಡಾಡಿ ಕುಣಿಸಿ–ನಲಿಸಿ–ಮಾತಾಡಿ ಕತೆ ಹೇಳಿ ಸಂತೋಷಪಡಿಸಿದೆ. ಮಾಣಿಕ್ ಷಾ ದಂಪತಿಗಳು ಆರಾಮವಾಗಿ ಕುಳಿತು ಮಾತುಕತೆ ನಡೆಸಿದ್ದರು. ಅವರಿಗೆ ನಮ್ಮ ಪರಿವೆ ಇರಲೇ ಇಲ್ಲ.

ಹೊತ್ತು ಉರುಳಿತು. ಸೂರ್ಯ ತಂಗಿದ. ದಿಗ್ದೇಶವೆಲ್ಲಾ ಚಂದನ ಕಾಂತಿಯಿಂದ ಕೆಂಗಲಿಸಿತ್ತು. ಸಮುದ್ರವಲೆಗಳು ಭೋರ್ಗರೆಯುತಿದ್ದುವು. ನಾನು ಸುಮನಳನ್ನು ತಂದೆ ತಾಯಿಯರಲ್ಲಿ ಬಿಟ್ಟು ಹೊರಡೋಣವೆಂದರೆ ಅವಳು ನನ್ನ ಭುಜದಿಂದ ಇಳಿಯಲೊಲ್ಲಳು. ಎಷ್ಟೆಷ್ಟು ಪ್ರಯತ್ನಪಟ್ಟರೂ ಇಳಿಯದೆ ನನ್ನ ಕೊರಳನ್ನು ಬಿಗಿಯಾಗಿ ಕಟ್ಟಿ ಹಿಡಿದಿದ್ದಾಳೆ. ಮಾಣಿಕ್ ಷಾ ಉಪಾಯದಿಂದ ಎತ್ತಿಕೊಂಡರು. ನಾನು ಮರಳಿನಲ್ಲಿ ಹರಡಿ ಬಿದ್ದಿದ್ದ ಶಂಖ ಕಪ್ಪೆ ಚಿಪ್ಪುಗಳನ್ನು ಆಯ್ದು ತಂದು ಮಗುವಿನೆದುರಿಗೆ ಸುರಿದು ಹೇಳಿದೆ "ಇನ್ನಷ್ಟು ಹೆಕ್ಕಿ ತರುವೆ! ಇಲ್ಲೇ ಇರು." ಅವಳು ಹಾಗೆಂದೇ ಭಾವಿಸಿದಳು. ನಾನು ಅಲ್ಲಲ್ಲಿ ಹೆಕ್ಕಿದಂತೆ ನಟಿಸಿದೆ. ಮನದಲ್ಲಿ......ನಾಳೆ ದೀನ್‌ದಾದಾ ಬರಬಹುದು. ಬಂದರೆ ಎಲ್ಲಾ ಬಟ್ಟೆಗಳನ್ನೂ ಕಳುಹಿಸುವೆ. ಅಮ್ಮ ಆ ಸೀರೆ ಯುಟ್ಟು ಎಷ್ಟು ಆನಂದಪಡಬಹುದೋ............ಮಕ್ಕಳಿಗೆಷ್ಟು ಖುಷಿಯಾಗ

ಬಹುದೋ............ಎಂದೆಲ್ಲಾ ಯೋಚನೆಯೊಡನೆ ಒಮ್ಮೆ ಹಿಂದಿರುಗಿ ನೋಡಿದೆ. ಸುಮನಾ ಮುಂದೆ ಮುಂದೆ ಸಾಗರಾಭಿಮುಖವಾಗಿ ಹೋಗುತ್ತಲೇ ಇದ್ದಾಳೆ. ಇವರಿಬ್ಬರೂ ಮಾತುಕತೆಯಲ್ಲಿ ಮೈಮರೆತಿದ್ದಾರೆ !

ನಾನು ಸುಮನಾ........ಸುಮನಾ ! ಎಂದು ಕೂಗುತ್ತಾ ಒಂದೇ ಗೆನೆತಕ್ಕೆ ಅತ್ತ ಓಡಿದೆ. ಉಸಿರುಗಟ್ಟಿ ಓಡಿದೆ. ಭಯ ಭೀತಿಯಿಂದ ನಡುಗಿ ಓಡಿದೆ. ಓಡಿಯೇ ಓಡಿದೆ ! ಬಿರುಗಾಳಿಯಂತೆ ಓಡಿಯೋಡಿ ಕೈ ಚಾಚಿದೆ. ಮಗು ಸಿಕ್ಕಿತು ಬಿಗಿ ಹಿಡಿದೆ ! ಅಷ್ಟರೊಳಗಾಗಿ ಬೃಹದ್ ಅಲೆಯೊಂದು ನುಗ್ಗಿ ನಮ್ಮನ್ನು ಕೊಚ್ಚಿಕೊಂಡು ಹೋಯಿತು ! ಮಗುವನ್ನು ಅಪ್ಪಿಕೊಂಡೇ ಕೂಗಿದೆ ಕಾಪಾಡಿ! ಅಲೆಯ ಮೇಲೆದ್ದು ತೇಲಿದಾಗ ಬಹಳ ಮಂದಿ ತೀರದಲ್ಲಿ ನಿಸ್ಸಹಾಯಕತೆಯಿಂದ ನಿಂತುದು ಕಂಡುಬಂದಿತು. ಅಷ್ಟೇ........ಮನದಲ್ಲಿ ನಾನು ಕೊಂಡುಕೊಂಡ ಬಟ್ಟೆಗಳು ಅಮ್ಮ ಮತ್ತು ಒಡಹುಟ್ಟುಗಳು ಸುಳಿ ಸುಳಿದರು........

— ೧ —

# ರುಕ್ಮಾಯಿ

೬

## ಜೀವೋ ಜೀವಸ್ಯ ಜೀವನಂ

ಬೆಳಗಿನ ಒಂಭತ್ತರ ಸಮಯ. ರವಿ ಕಿರಣಗಳು ಬೆಚ್ಚನೆ ಮುದ್ದಿಡ್ಡುತ್ತಿವೆ. ಪ್ರಾತಃಸಮೀರನ ಮೃದುಮಂದ ಚಾಮರ ಸೇವೆ ಸರ್ವತ್ರ ಸದಾ ಇರುವುದರಿಂದ ತನುಮನಗಳಿಗೆ ಉಲ್ಲಾಸವೇ ಉಲ್ಲಾಸ.

ಬೆಳ್ಳಿಯೆಳೆಗಳಂತೆ ಹೊಳೆ ಹೊಳೆಯುವ ನೆರೆಗೂದಲಿನ ರಮಾಕಾಂತ ಅಂಗಣದ ಹೂದೋಟದ ಸುಂದರ ಹಾದಿಯಲ್ಲಿ ಅತ್ತಿಂದಿತ್ತ ಪದಚಾರಣ ಮಾಡುತ್ತ ತನ್ನಲ್ಲೇ ಯೋಚಿಸಿದ......ಜೀವನ ಪರಿಸ್ಥಿತಿಯ ಎಳೆ ಎಳೆಯನ್ನೂ ಮುಟ್ಟಿತು ಮನಸ್ಸು.

........ಏಕಮಾತ್ರ ಪುತ್ರ—ಮಹೇಶ್ ನಿಜವಾಗಿಯೂ ಸಾಧು ಸ್ವಭಾವದ ವಿದ್ಯಾವಂತ. ಅವನ ವಿದ್ಯಾಭ್ಯಾಸಕ್ಕೆ ನಾನು ತೆಗೆದುಕೊಂಡ ಅಪಾರವಾದ ಪರಿಶ್ರಮ ಸಾಮಾನ್ಯವೇನಲ್ಲ. ಹೆಣ್ಣುಮಕ್ಕಳ ಅಭ್ಯಾಸವನ್ನು ಅಲ್ಲಿಂದಲ್ಲಿಗೇ ಮೊಟಕುಗೊಳಿಸಿ ಮಗನ ಓದಿಗಾಗಿ ಹಣ ಸುರಿದ ಬಗೆ ದೃಷ್ಟಿ ಪಥದಲ್ಲಿ ಸಾಗಿ ಹೋಯಿತು. ವಂಶೋದ್ಧಾರಕ ಹಾಗೂ ಪರಮ ಕುಲಪುತ್ರ........ಎಂದೆಂಬ ಅಪಾರವಾದ ಹೆಮ್ಮೆ—ಪ್ರೀತಿ—ವಿಶ್ವಾಸ ಎಲ್ಲಾ ಅವನ ಮೇಲೆಯೆ. ಉಣಿಸು—ತಿನಿಸುಗಳಲ್ಲಿ ಸಿಂಹಪಾಲು. ಬಟ್ಟೆ ಬರೆಗಳಲ್ಲಿಯೂ ಅಗ್ರಭಾಗ. ಅಂದ ಮೇಲೆ ಅವನಿಗೂ ತನಗೂ ಇದ್ದ ಅಂದಿನ ಅನುಬಂಧ ಎಂದಿಗೂ ಕಡಿಯುವಂತಾದ್ದಲ್ಲ. ಆದರೆ, ಈಗಣ ಪರಿಸ್ಥಿತಿಯೇ ಬೇರೆ. ಅವನ ಪ್ರೇಮ ಪ್ರೀತಿ ವಿಶ್ವಾಸಗಳೆಲ್ಲ ತನ್ನ ಮಡದಿ ಮತ್ತು ಮಕ್ಕಳ ಮೇಲೆಯೇ. ಈಗ ತಂದೆಯಾದ

ನಾನೊಬ್ಬ ಮುದಿಯ ಮಾತ್ರ. ಪ್ರಸ್ತುತ, ನನ್ನ ಆಸ್ತಿ, ನನ್ನ ಮನೆ, ನನ್ನ ದುಡಿಮೆ, ನನ್ನದೇ ಎಲ್ಲಾ ಆಗಿರುವಾಗ ಆಸ್ತಿ ನಾಲ್ಕು ಮಂದಿ ಮಕ್ಕಳಲ್ಲಿ ಏರುಪೇರಿಲ್ಲದೆ ಹಂಚಿಕೆಯಾಗಲೇಬೇಕಾದುದು ನ್ಯಾಯ. ಅದು ನನ್ನ ಮತ್ತು ಹೆತ್ತ ತಾಯಿಯ ಶುಭಾಶಯ ಕೂಡಾ. ಮೂವರು ಹೆಣ್ಣು ಮಕ್ಕಳೂ ಸ್ಥಿತಿವಂತರಲ್ಲ. ಬಾಡಿಗೆ ಮನೆಗಳಲ್ಲಿ ವಸತಿ. ಅಲ್ಪಸ್ವಲ್ಪ ವರಮಾನ ಜೀವನಕ್ಕೆ ಮಾತ್ರ ಪೂರಕ. ಇಂದಿಗೂ ಮನೆ ಕಟ್ಟಿಕೊಳ್ಳಲು ಸಾಧ್ಯವಾಗಿಲ್ಲ ಅವರಿಗೆ. ಅಂತಹ ದುರ್ಬರ ಪರಿಸ್ಥಿತಿಯಲ್ಲಿ ತಂಗಿಯರು ಇರುವಾಗ ಇವನು ಕಣ್ಣಿದ್ದೂ ಕುರುಡು. ಉದ್ಯಮ ದಿನದಿನಕ್ಕೂ ರಂಗೇರುತ್ತ ಶ್ರೀಮಂತಿಕೆಯ ತುತ್ತ ತುದಿಯನ್ನು ಏರಿದ್ದಾಗಿದೆ. ಮತ್ತೇಕೆ ಸಂಕೋಚ ? ಗಂಡುಮಕ್ಕಳಿಗೆ ಆಸ್ತಿ ಮಾಡಿಡುವುದು ಮೂರ್ಖತನ. ಆಸ್ತಿ–ಐಶ್ವರ್ಯ ಕೈಗೂಡಿತೆಂದರೆ ಜಗತ್ತನ್ನೇ ಮರೆತುಬಿಡುತ್ತಾರೆ. ದಾನ, ಧರ್ಮ, ದಯೆ ಒಂದೂ ಉಳಿಯುವುದಿಲ್ಲ. ಈ ಕಾಲದಲ್ಲಿ ಮಕ್ಕಳಿಗೆ ಶಿಕ್ಷಣ ನೀಡಿ ಸುಶಿಕ್ಷಿತರನ್ನಾಗಿಸಿದ ನಂತರ ಹೊರ ಹೋಗಿ ಎಂದು ಕಳಿಸಿಬಿಡುವುದು ಲೇಸು. ಕೊನೆಗಾಲಕ್ಕೆ 'ಆಗುತ್ತಾರೆ' ಎಂಬ ಸ್ವಾರ್ಥಮೂಲವಾದ ಆಸೆಯೇ ನಮ್ಮ ಕೊರಳಿಗೆ ಉರುಳು. ನನ್ನ ಆಸ್ತಿಗಿರುವ ಬೆಲೆಯಲ್ಲಿ ಒಂದೇ ಒಂದು ಕವಡೆಯ ಬೆಲೆಯೂ ನನಗಿಲ್ಲ ಇಂದು. ನಾನೀಗ ಕೇವಲ ಕೈಲಾಗದ ದೀನ ದರಿದ್ರ ! ಕೈಕಾಲು ಗಟ್ಟಿ ಇರುವಾಗಲೇ ಹೀಗೆ... ಒಂದು ವೇಳೆ ಮೂಲೆ ಸೇರಿದರೆ ದೇವರೇ ಗತಿ.......ಮುಂದೋಡಿತು ಯೋಚನೆಯ ಧಾಟಿ...ಮಹೇಶ ತೀರ ವಿಭಿನ್ನ ಅಭಿಪ್ರಾಯವನ್ನೇನೂ ಹೊಂದಿಲ್ಲ. ಆದರೆ, ಕಾಸುಕಾಸಿಗೂ ಲೆಕ್ಕಾಚಾರ ಹಾಕುವ ಕಾಸುಗಳ್ಳ. ಎಲ್ಲಕ್ಕೂ ಮಡದಿ–ಸರೋಜಿನಿಯ ಚಾಕಚಕ್ಯತೆಯೇ ಕಾರಣ. ಅವಳ ಎದೆಯ ಮೈದಾನದಲ್ಲಿ ಸದಾ ನಲಿದಾಡುವ ಕುದುರೆ ಇವನು. ಅವಳು ಮಗ್ಗುಲಿಗೆ ಬಂದಂದು ಇವನಿಗೆ ಕಾಮದ ಅಮಲೇರಿತು. ತಂದೆ ತಾಯಿ ಒಡ ಹುಟ್ಟುಗಳು ಎಲ್ಲರನ್ನೂ ದೂರ ಮಾಡಿ ಕಾಮಕಾಮನೆಯ ಗುಡಿ ಗೋಪುರ ಕಟ್ಟಿ ಸ್ವಾರ್ಥದ ಸಿಂಹಾಸನ ಏರಿದ. ಚಿಕ್ಕಂದಿನಿಂದ ಮದುವೆಯಾಗುವತನಕ ಅವನಿದ್ದ ರೀತಿ ಮತ್ತು ಪ್ರೀತಿ ವಿಶ್ವಾಸಗಳು ಅಮೋಘವೇ. ಚಿನ್ನದಂತಹ ಹುಡುಗನನ್ನು ಸರೋಜಿನಿ ಕಬ್ಬಿಣ ಮಾಡಿಬಿಟ್ಟಳು!

ಹಾ........!

ಎದೆಯಾಳದಿಂದ ನಿಟ್ಟುಸಿರೊಂದು ಹೊಮ್ಮಿತು- ರಮಾಕಾಂತ ಅಲ್ಲಲ್ಲೇ ಮೆಲ್ಲಗೆ ಪದಚಾರಣೆ ಮಾಡಿದ. ಮನಃಚಿತ್ತಗಳು ಮುದುಡಿದುವು. ಯೋಚನೆಯಲೆ ಸ್ತಬ್ಧವಾಯಿತು. ದೇಹದಾದ್ಯಂತ ಮೆಲ್ಲನೆ ನವಿರು ನಿವಿರುದುವು ಚಳಿಯು ಮೂಡಿದಂತೆ. ವ್ಯಾಪಾರದ ಕೀಲಿಕೈ ಅವನ ಕೈ ಸೇರಿಯಾಗಿದೆ. ನಾನೀಗ ಏನೂ ಮಾಡಲಾರೆ. ನಿಸ್ಸಹಾಯಕ. ಕಾಸು ಕಾಸಿಗೂ ಕೈಯೊಡ್ಡುವ ದುಸ್ಥಿತಿ. ಒಂದು ಕಾಲದಲ್ಲಿ ಯಾರಾದರೂ ನನ್ನ ಭವಿಷ್ಯವನ್ನು ಕುರಿತು ಹೀಗಾಗುತ್ತೆ ಎಂದು ತಿಳಿಹೇಳಿದ್ದಿದ್ದರೆ ಖಂಡಿತ ನಂಬುತ್ತಿರಲಿಲ್ಲ. ನಾನು........ ಸೊನ್ನೆಯಿಂದ ಬಂದವನು. ಸೊನ್ನೆಯಿಂದಲೇ ವ್ಯಾಪಾರ ಬೆಳೆಸಿದವನು. ಮನೆ ಮಠ ಕಟ್ಟಿ ಸಂಸಾರಕ್ಕೆ ಸುಖಾಶ್ರಯ ನೀಡಿದವನು........ಇಂದು ನನ್ನ ಗತಿ ?

ಭಾರತೀಯವಾದ ನಮ್ಮ ಸುಸಂಸ್ಕೃತಿ ಅಡವಿ ಪಾಲಾದುದು ಹೇಗೆ ? ವೃದ್ಧಾಪ್ಯದಲ್ಲಿ ತಂದೆ ತಾಯಿಯರನ್ನು ಪರಮ ಪ್ರೀತಿ–ಗೌರವಗಳಿಂದ ಕಾಣುತ್ತಿದ್ದ ಸದ್ಭಾವನೆ ಲುಪ್ತವಾದುದು ಹೇಗೆ ? ಈಗೀಗ ಮನೆ ಮನೆಗಳನ್ನೂ ಸ್ವಾರ್ಥದ ಹೆಬ್ಬಾವು ನುಂಗುತ್ತಿದೆ. ಸ್ವಾರ್ಥವೇ ಸರಾಗ. ಸ್ವಾರ್ಥವೇ ಪರಮಾರ್ಥ.....ಯೋಚನೆಯ ತೇಜಿ ಓಡುತ್ತಲೇ ಇದೆ.

ಸಂಚರಣದಿಂದ ಕಾಲುಗಳು ಬತ್ತಿದುವು. ಯೋಚಿಸಿ ಮನವೂ ಮುದುಡಿತು. ಬೆಂಚಿನ ಮೇಲೆ ಕುಳಿತುಕೊಂಡ.

ಮಹೇಶನ ಹಿರಿಯ ಮಗಳು ಕೈತುಂಬಾ ಪುಸ್ತಕಗಳನ್ನು ಹಿಡಿದುಕೊಂಡು ಕಾಲೇಜಿಗೆ ಹೋಗುತ್ತ "ಬೈಬೈ ತಾತ !" ಎಂದು ಮೊಗದಲ್ಲಿ ಹೂನಗೆ ಮುಗುಳು ಚೆಲ್ಲಿ ಚಿಗರಿಯಂತೆ ಜಿಗಿದು ಹೊರಟೇ ಹೋದಳು. ರಮಾಕಾಂತ 'ಬೈ ಬೈ' ಎಂದುದು ಅವಳ ಕಿವಿಗೆ ಮುಟ್ಟಿತೋ ಇಲ್ಲವೋ...... ಅವಳು ಪ್ರಾಕಾರದ ಗೇಟನ್ನು ದಾಟುವವರೆಗೂ ನಿಟ್ಟಿಸಿದುವು ಕಣ್ಣಾಲಿಗಳು. ಆ ಸುಂದರವಾದ ಪುತ್ಥಳಿ ಕಣ್ಮರೆಯಾಯಿತು, ಆ ಕ್ಷಣದಲ್ಲೇ.

ರುಕ್ಮಾಯಿ ಮುದ್ದು ಮೊಮ್ಮಗಳು. ತಂದೆ ತಾಯಿಯರ ಸ್ವಾರ್ಥದ ಮೊಟ್ಟೆಯಿಂದ ಸಿಡಿದು ದೂರ ಬಿದ್ದವಳು. ಅವಳಿಗೆ ಎಲ್ಲರೂ ಬೇಕು. ಪ್ರೀತಿ

ವಿಶ್ವಾಸಗಳ ಪರಮ ಗಣಿ. ಇವಳು ಹೊತ್ತಿರುವುದು ಆನುವಂಶಿಕ ಗುಣವನ್ನೇ. ದೇವರು ಚೆನ್ನಾಗಿಟ್ಟಿರಬೇಕು.

ಎದೆಯ ಹಕ್ಕಿ ನಲವಿಂದ ಹಾರೈಸಿತು. ಮನಃಸಾಗರ ಉಕ್ಕೇರಿ ಬಂತು. ಮಹೇಶ ಉದ್ಯಮಶೀಲನಾಗಿ ಅಪಾರ ಸಂಪತ್ತು ಅಪಾರ ದ್ರವ್ಯ ಕೈಗೂಡಿಸಿ ಕೊಂಡಿರುವಾಗ ಏಕೆ ಇಷ್ಟೊಂದು ಸಂಕೋಚಪಡುತ್ತಾನೆ? ಒಡ ಹುಟ್ಟುಗಳೊಂದಿಗೆ ಉದಾರತೆಯಿಂದಿರಬಾರದೇ ? ನನ್ನ ಶೇಷಾಯುಷ್ಯವನ್ನೆಲ್ಲ ನೋವು-ದುಃಖ-ಸಂಕಟಗಳಿಲ್ಲದೆ ನಿಶ್ಚಿಂತೆಯಿಂದ ಕಳೆದು ಸತ್‌ಶಾಂತಿಯಿಂದಿರಬೇಕೆಂಬ ಮಹದಿಚ್ಛೆಗೆ ಈಗಲೇ ಕೊಡಲಿ ಏಟು ಬೀಳುತ್ತಿರುವುದು ತುಂಬಾ ವಿಷಾದಕರ ಮಾತ್ರವಲ್ಲ, ವಿಚಾರಾತ್ಮಕವೂ ಆಗಿದೆ. ಮಹೇಶನಿಗೆ ಈವರೆಗೆ ಎಷ್ಟು ಬಾರಿ ಹೇಳಿದೆ ? ಎಂಥ ಸ್ವಾರ್ಥಿ ಇವನು ! ನನ್ನ ಕಣ್ಣುಮುಂದೆಯೇ ಹೀಗಾದರೆ ಮುಂದೆ ಗತಿಯೇನು? ನನ್ನೆಲ್ಲಾ ಆಸ್ತಿಯನ್ನು ನನ್ನ ಒಡೆತನಕ್ಕೇ ತೆಗೆದು ಕೊಂಡು ಸಮನಾಗಿ ಹಂಚಿಬಿಡಲೇ ? ಅಂದರೆ ಮಗನನ್ನು ಎದುರು ಹಾಕಿ ಕೊಳ್ಳಬೇಕು. ಕೋರ್ಟು ಲಾಯರು ಇವರ ಹಣಾಹಣಿಯನ್ನು ಈ ವಯಸ್ಸಿನಲ್ಲಿ ತಾಳಿಕೊಳ್ಳಬೇಕು. ಸಂಸಾರಿಕ ಗುಟ್ಟನ್ನೆಲ್ಲಾ ಗಾಳಿಗೆ ತೂರಿ ಮರ್ಯಾದೆ ಬಿಟ್ಟು ಭಂಡನಾಗುವುದು ಎಷ್ಟು ಸಮಂಜಸ ! ಹರೆರಾಂ ! ಏನು ಮಾಡಲಿ?...ಏನು ಮಾಡಲಿ? ಹೇಗೆ ಇದರ ಪರಿಹಾರ....? ಎಷ್ಟು ಯೋಚಿಸಿದರೂ ವಿಷಯ ಬಗೆಹರಿಯದಾಯ್ತು.

ರಮಾಕಾಂತ ಚಿಂತಾಕ್ರಾಂತನಾದ, ತೀವ್ರ ವ್ಯಥೆ ಸಂಕಟಗಳ ಗಣಿಯಾಗಿ.

ದುರ್ವಿಧಿ ನನ್ನನ್ನು ರೋಗದ ಕೂಪಕ್ಕೆ ತಳ್ಳದಿದ್ದರೆ ಆಸ್ತಿಯ ವಹಿವಾಟು ಉಮೇಶನ ಕೈಗೆ ಹೋಗುತ್ತಿರಲಿಲ್ಲ. ಆಸ್ತಿಯನ್ನು ನಾನೇ ಎಲ್ಲರಿಗೂ ಸರಿಸಮನಾಗಿ ಹಂಚಿ ಧನ್ಯನಾಗಬಹುದಿತ್ತು. ಈಗ ನೋಡಿದರೆ ಹೆಣ್ಣುಮಕ್ಕಳಿಗೂ ಇಲ್ಲ, ನನಗೂ ಇಲ್ಲ, ಧರ್ಮ ಕಾರ್ಯಗಳಿಗೂ ಇಲ್ಲ. ನಾನೀಗ ಇವರ ಕೈ ಹಾರೈಸಿ ಬದುಕುವ ಕಷ್ಟಕ್ಕೆ ಸಿಲ್ಕಿದ ಬಡವನಾಗಿರುವೆ......ಬರಿಗೈ ಬಂಟನಿಂದೇನಾದೀತು ? ಉಮೇಶ ಕೆಟ್ಟವನಲ್ಲ, ಸ್ವಾರ್ಥಿ ! ಮಹಾ ಸ್ವಾರ್ಥಿ !

ಅವನು ಸ್ವಾರ್ಥದ ಲೋಲುಪ್ತಿಯಲ್ಲಿ ಮುಳುಗದೇ ಹೋಗಿದ್ದಿದ್ದರೆ ನಿಜವಾಗಿಯೂ ಒಳ್ಳೆಯವನೇ ! ಕಾರ್ಯತಃ ಚಾಣಾಕ್ಷ. ನಡೆ ನುಡಿಯಲ್ಲಿ ಹಿತ ಮಿತ...ಆದ್ದರಿಂದ, ಸಂಸಾರದ ಗುಟ್ಟು ರಟ್ಟು ಮಾಡುವುದು ಸರಿಯಲ್ಲ. ಹೇಗಾದರೂ ನಾವು ನಾವೇ ಕುಂದುಕೊರತೆಯನ್ನು ನೀಗಿಸಿಕೊಳ್ಳುವುದರಲ್ಲಿ ಅಗ್ರಮಾನ್ಯತೆಯಿದೆ...ಏನು ಮಾಡಿದರೆ ಸರಿಹೋಗುತ್ತದೆ ? ಪ್ರಶ್ನೆ ಮನಃ ಬುದ್ಧಿಗಳನ್ನು ಚಿಂತೆಯ ಖಡ್ಗದಲುಗಿನ ಮೇಲೆ ಎಳೆದಾಡುತಿತ್ತು, ಹೃದಯದ ಪಕ್ಷಿ ತಳಮಳಿಸುವಂತೆ.

ಹೊತ್ತು ನಿರಾತಂಕವಾಗಿ ಉರುಳುತ್ತಲೇ ಇತ್ತು; ಆರ ನೋವು–ನಲಿವುಗಳನ್ನು ಕಿಂಚಿತ್ ಲೆಕ್ಕಿಸದಂತೆ. ಕಾಲಮಾನ ಉರುಳಿದಷ್ಟೂ ಕರ್ತವ್ಯ ಚ್ಯುತಿಯ ನೆನಪು ಒಡಲ ಸಂಕಟಕ್ಕೆ ದಾರಿ. ರಮಾಕಾಂತ ಚಿಂತಾಬ್ಧಿಯಲ್ಲಿ ಮುಳುಗಿ ಹೋದ. ಒಡಲ ಬಳ್ಳಿ ನರಳಿತು ಮೌನವಾಗಿ.

೦ ೦ ೦ ೦

ಕಳೆದ ವರ್ಷದಾದಿಯಲ್ಲಿ ಮನೆಯ ಯಜಮಾನಿ ಮರಣಿಸುವ ಮುನ್ನ ತನ್ನ ಹೃದಯ ಸಂಪುಟವನ್ನೇ ತೆರೆದಿಡುವಂತೆ ಹೇಳಿದ್ದಳು "ನೋಡಿ, ನೀವು ಮಾಡಬೇಕಾದುದು ಇನ್ನೂ ಇದೆ. ಮುಖ್ಯವಾದುದನ್ನೇ ಕೈಬಿಟ್ಟಿದ್ದೀರಿ. ನೀವು ಮೂರು ವರ್ಷ ಮೃತ್ಯುವಿನ ದವಡೆಯಲ್ಲಿ ಸಿಕ್ಕಿ ನರಳಿ ದೈವಾನುಗ್ರಹ ದಿಂದ ಹೆಣ್ಣುಮಕ್ಕಳಿಗಾಗಿಯೇ ಬದುಕಿ ಉಳಿದಂತೆ ಉಳಿದಿದ್ದೀರಿ. ಹೆಣ್ಣು ಮಕ್ಕಳು ಸ್ಥಿತಿವಂತರಲ್ಲ. ಹಿರಿಯ ಮಗಳು ಸೀತಾ ಮೂವರು ಹೆಣ್ಣುಮಕ್ಕಳ ತಾಯಿ. ಅವಳ ಕಷ್ಟ ನಿಮಗೊತ್ತು. ಇನ್ನು ಅಮಿತಳ ಮಕ್ಕಳಲ್ಲಿ ಒಬ್ಬ ಡಾಕ್ಟರು, ಇನ್ನೊಬ್ಬ ಇಂಜಿನಿಯರು. ಅವರಿಗೆ ತಾಂತ್ರಿಕ ವಿದ್ಯಾಭ್ಯಾಸದ ಖರ್ಚು ಬಹಳ. ಆ ಮಕ್ಕಳು ವಿದ್ಯಾಭ್ಯಾಸ ಮುಗಿಸಿ ಸಂಸಾರಕ್ಕೆ ಭುಜ ಕೊಡುವತನಕ ಅವಳ ಪಾಡು ದೇವರಿಗೇ ಪ್ರೀತಿ. ಇನ್ನು ಚಿಕ್ಕ ಮಗಳು ಸತ್ಯಳ ಬಾಳು ಮತ್ತೂ ನರಕ. ಎಲ್ಲಾ ಸಣ್ಣಸಣ್ಣ ಮಕ್ಕಳು. ಮನೆ ಕಿಷ್ಕಿಂದ. ನೀವು ಕಣ್ಣಿದ್ದೂ ಕುರುಡಾಗಬಾರದು. ಮನೆಯ ಆಸ್ತಿಯೆಲ್ಲವನ್ನೂ ಮಗನಿಗೆ ನೀಡಿ ಹೆಣ್ಣುಮಕ್ಕಳನ್ನು ಬರಿಗೈ ಮಾಡಿ ಹೊರದಬ್ಬುವುದು ಮಾನ

ಪೀಯುತೆಯೇ ? ಅವರೂ ನಮ್ಮ ಮಕ್ಕಳಲ್ಲವೇ ? ನಮ್ಮ ದುಡಿಮೆ ಒಂದು ಕವಡೆಯೇ ಆಗಲಿ, ಅದರಲ್ಲಿ ಅವರಿಗೆ ಸಮಪಾಲು ದೊರೆಯಬೇಕಾದುದು ನ್ಯಾಯ. ಹಿಂದೂಸ್ಥಾನದಲ್ಲಿ ಹೆಣ್ಣಿನ ಶೋಷಣೆ ನಾನಾ ರೀತಿಯಲ್ಲಿ ನಡೆಯುತ್ತೆ. ಇಂದೂ, ಈ ನಾಗರಿಕತೆಯ ದುರ್ದಿನಗಳಲ್ಲೂ ಹೆಂಗಳೆಯರಿಗೆ ಆರ್ಥಿಕ ಸ್ವಾತಂತ್ರ್ಯ ವೈಯಕ್ತಿಕ ಸ್ವಾತಂತ್ರ್ಯ ಇಲ್ಲವೇ ಇಲ್ಲವೆಂದರೆ ಎಂತಹ ಅನ್ಯಾಯ ? ನಮ್ಮಲ್ಲಿ ಹೆಣ್ಣುಮಕ್ಕಳೆಂದರೆ ತೀರಾ ನಿಕೃಷ್ಟಭಾವ. ಗಂಡಂದಿರಿಗೂ ಅಷ್ಟೆ. ತನಗೊಂದು ಸೊತ್ತು, ಮನೆಗೊಂದು ತೊತ್ತು. ಎಲ್ಲೋ ಕೆಲವರಿರುತ್ತಾರೆ, ಪುಣ್ಯವಂತರು. ಹೆಣ್ಣುಮಕ್ಕಳ ಬವಣೆಯನ್ನು ಕಣ್ಣಿಂದ ನೋಡಿಯೂ ನೀವು ಸುಮ್ಮನಿರುವುದು ತಪ್ಪು. ನಿಮ್ಮ ದುಡಿಮೆ, ನಿಮ್ಮ ಆಸ್ತಿ. ಅಂದಮೇಲೆ ನೀವೇಕೆ ಸುಮ್ಮನಿರಬೇಕು ? ಮಹೇಶನೊಡನೆ ಮಾತಾಡಿ ಮೂವರಿಗೂ ವಾಸಕ್ಕೆ ಮನೆ ಕಟ್ಟಿಕೊಡಿ. ನಮ್ಮ ಪಾಲನ್ನೇ ಆ ಹೆಣ್ಣುಮಕ್ಕಳಿಗೆ ಕೊಡಿ. ಅಷ್ಟಾದರೂ ಮಾಡಿ......"

ಅಂದಿನ ಆ ಮಾತುಗಳು ಇದೀಗ ಆಡಿದಂತೆ ಧ್ವನಿಸುತ್ತವೆ ಕರ್ಣಪಟಲದ ಮೇಲೆ.

ನಾನು ಕಾಹಿಲೆಯಿಂದ ಹಾಸಿಗೆ ಹಿಡಿದಾಗಲೇ ಆಸ್ತಿಯ ಸ್ವಾಮಿತ್ವ ಮಹೇಶನ ಕೈ ಸೇರಿತು. ಅವನೀಗ ಸರ್ವಾಧಿಕಾರಿ. ಮೇಲಾಗಿ, ಮಡದಿಯ ದಾಸಾನುದಾಸ. ಅಕ್ಕ ತಂಗಿಯರ ಭಂಗ ಅವನ ಗಣನೆಗೆ ಬಂದರಷ್ಟೆ? ಅತ್ಯಂತ ಜಿಪುಣಾಗ್ರೇಸರ. ಕಾಸು ಬಿಚ್ಚುವವನೇ ಅಲ್ಲ, ಅಪಾರವಾದ ಹಣದ ರಾಶಿಯನ್ನು ಕೈಕೊಂಡು ಇಷ್ಟು ಕೃಪಣನಾಗಿರುವುದು ಲಜ್ಜೆಗೇಡು......ಲಜ್ಜೆಗೇಡು !

ಸಾಯಂ ಸೂರ್ಯ ಅಸ್ತಮಾನ ಶೋಭೆಯಿಂದ ಜಗಜಗಿಸುತಿದ್ದ. ತಣ್ಣನೆಯ ತಂಗಾಳಿಯು ಹಿತಕರವಾದ ಸೇವೆ ಅಪರಂಪಾರ. ಪಕ್ಷಿಲೋಕ ಉಲಿವ ಸಂಧ್ಯಾರಾಗದ ಧ್ವನಿ ಮಾಧುರ್ಯ ಮನಮೋಹಕರ. ಸಂಧ್ಯಾಶಾಂತಿ ಎಲ್ಲೆಲ್ಲೂ ಹೆಪ್ಪುಗಟ್ಟಿದಷ್ಟು ನಿಶ್ಶಬ್ದ–ನೀರವ–ನಿರಾತಂಕ.

ಮಹೇಶ್ ಮಡದಿಯೊಡನೆ ಹೊರಬಂದ. ಅಡಿಯಿಂದ ಮುಡಿಯವರೆಗೂ ಸಿಂಗರದೈಸಿರಿಯಿಂದ ಜಗಜಗಿಸುತಿದ್ದಾಳೆ ಸೊಸೆ-ಸರೋಜಿನಿ. ಬಡ

ತನದಿಂದ ಬಂದವಳು. ಇಲ್ಲಿಯ ದರ್ಬಾರ್ ನೋಡಿದರೆ ರಾಣಿಗಿಂತ ರಾಣಿ! ಧೀಮಂತರು ಅಸಹ್ಯಿಸಿಕೊಳ್ಳುವಂತಹ ವಿಪರೀತ.

ಮಹೇಶ ತುದಿ ಮೆಟ್ಟಿಲಿನ ಮೇಲೆ ನಿಂತು ಕೂಗಿ ಹೇಳಿದ "ಅಪ್ಪಾ, ನಾವು ಪಾರ್ಟಿಗೆ ಹೊರಟಿದ್ದೇವೆ. ರುಕ್ಮಾಯಿ ಇನ್ನೂ ಕಾಲೇಜಿನಿಂದ ಹಿಂದಿರುಗಿಲ್ಲ. ಇಷ್ಟರಲ್ಲೇ ಬಂದಾಳು ಹೇಳಿಬಿಡಿ."

"ಆಗಲಿ." ತಲೆಯಾಡಿಸಿದ ರಮಾಕಾಂತ. ನೆಟ್ಟ ದೃಷ್ಟಿ ಮುದುಡಿತು.

ಮಹೇಶನಿಗೆ ಆರು ಮಂದಿ ಮಕ್ಕಳು. ಮೂರು ಮಂದಿ ಹೆಣ್ಣು, ಮೂರು ಮಂದಿ ಗಂಡು. ಅವರಲ್ಲಿ ರುಕ್ಮಾಯಿ ಹಿರಿಯವಳು. ತಾಯಿಯಂತೆ ಐಶ್ವರ್ಯಗರ್ವಿತೆಯೂ ಅಲ್ಲ; ದುರಹಂಕಾರಿಯೂ ಅಲ್ಲ. ಮುಗ್ಧ ಸ್ವಭಾವದ ಮುದ್ದು ಹುಡುಗಿ. ಪ್ರೀತಿ-ವಿಶ್ವಾಸಗಳ ಗಣಿ. ಅವಳಿಂದ ಆಳು ಕಾಳು ಹೊತ್ತು ಹೊತ್ತಿಗೆ ಊಟ-ತಿಂಡಿ ಸಲ್ಲಿಸುತ್ತಾರೆ. ಅವಳೂ ಸ್ವಾರ್ಥಿಯಾಗಿದ್ದಿದ್ದರೆ ನನ್ನ ಕತೆ ಮುಗಿದೇ ಹೋಗುತಿತ್ತು ಹಾ....! ಇದು ಪ್ರಪಂಚ....ಇದು ಜೀವನ.

ರಮಾಕಾಂತ ಯೋಚನೆಯ ಆಳದಲ್ಲಿ ಮುಳುಗಿ ಹೋದ.

೦ ೦ ೦ ೦

ರುಕ್ಮಾಯಿ ಹಿಂದಿರುಗಿದಾಗ ಮುಸ್ಸಂಜೆ ಕವಿಯುತಿತ್ತು.

ರಮಾಕಾಂತ ಕೇಳಿದ "ಏಕಮ್ಮಾ ಇಷ್ಟು ಹೊತ್ತು?"

"ಅತ್ತೆ ಮನೆಗೆ ಹೋಗಿದ್ದೆ."

"ಯಾವ ಅತ್ತೆ ಮನೆಗೆ?"

"ಅಮಿತ ಅತ್ತೆ ಮನೆಗೆ," ಮಾತು ಮುಗಿಯುವುದರೊಳಗಾಗಿ ಹುಡುಗಿ ಕೆಂಪು ತಳೆದಳು.

"ಅತ್ತೆ ನೋಡುವುದಕ್ಕೋ ಅತ್ತೆಯ ಮಗನನ್ನು ನೋಡುವುದಕ್ಕೋ?" ಧ್ವನಿ ಹಾಸ್ಯಪ್ರಧಾನವಾಗಿ ಹೊರಬಿತ್ತು. ಅವಳು ಮತ್ತಷ್ಟು ಕೆಂಪು ತಳೆದು ಬಿತ್ತರಿಸಿದಳು "ಇಬ್ಬರನ್ನೂ ..."

ಅದಾವ ಮಾಯಕತೆಯಿಂದ ಧಾವಿಸಿದಳೋ ಹುಡುಗಿ. ಆ ಕ್ಷಣವೇ ಮಾಯವಾಗಿದ್ದಾಳೆ.

ಅಮಿತಳ ಮಗ ಡಾಕ್ಟರು. ತುಂಬಾ ಬುದ್ಧಿವಂತ. ಹೌಸ್ ಸರ್ಜನ್ನಿ ಮಾಡುತಿದ್ದಾನೆ. ಮೇಧಾವಿ ಮಾತ್ರವಲ್ಲ ತುಂಬಾ ಒಳ್ಳೆಯವನು ಕೂಡ. ರಮಾಕಾಂತನ ಹೃದಯ ಆನಂದ ತುಂದಿಲತೆಯಿಂದ ಮಿಡಿಯಿತು. ಆ ಮುಹೂರ್ತದಲ್ಲಿ ರಮಾಕಾಂತನಿಗೆ ಮತ್ತೊಂದು ಯೋಚನೆ ... ಮಹೇಶ ಮಗಳನ್ನು ಆ ಮುರುಕಲು ಮನೆಗೆ ಕೊಡುತ್ತಾನೆಯೇ? ಮಗಳೊಂದಿಗೆ ಮನೆಯನ್ನೂ ಕೊಡಬೇಕಾಗುತ್ತದೆ. ಅನಂತರ ಅದೇ ಕ್ರಮವಾಗಿ ಇನ್ನಿಬ್ಬ ರಿಗೂ ಮನೆಕಟ್ಟಿಸಿಕೊಡುವ ಅಗತ್ಯ ಬಂದೇ ಬರುತ್ತದೆ. ರಾಮಕೃಷ್ಣ-ರುಕ್ಮಾಯಿ ಪ್ರೇಮಿಗಳು. ಒಳ್ಳೆಯ ಜೋಡಿ ಕೂಡ. ಭಗವಂತ ನಡೆಸಿಕೊಡ ಬೇಕು .... ಎದೆಯ ಹಕ್ಕಿ ಹಾರೈಸಿತು.

ಮನೆಯ ಹಿಂಭಾಗದಲ್ಲಿ ವಿಶಾಲವಾದ ಅಂಗಣ. ಅದರಲ್ಲಿ ಮಕ್ಕಳ ಆಟದ ಕೂಟ. ಕೇಕೆ-ಗದ್ದಲ ಕೇಳಿ ಬರುತ್ತದೆ. ಆನಂದ-ಉತ್ಸಾಹಗಳು ನಲಿ ದಾಡುತ್ತಿವೆ. ಹೃದಯದ ಹಾಲ್ಗಡಲು ಉಕ್ಕೇರುವಂತೆ.

ರಮಾಕಾಂತ ಅಲ್ಲಿಗೆ ಹೋದ. ಮಕ್ಕಳ ಕೂಟ ಮನಸ್ಸಿಗೆ ಆನಂದವ ನ್ನೂಡಿಸಿತು. ಜಗಲಿಯ ಮೇಲೆ ಕುಳಿತ. ರುಕ್ಮಾಯಿ ಬಂದು ಬಳಿಯಲ್ಲಿ ಕುಳಿತುಕೊಂಡಳು.

"ರುಕ್ಮೀ ಈ ದಿನದ ಪತ್ರಿಕೆಯಲ್ಲಿ ಒಂದು ವಿಶೇಷ ಸುದ್ದಿ. ಓದಿದೆಯೇನು ?"

"ನನಗೇನೂ ಜ್ಞಾಪಕವಿಲ್ಲ. ಏನು ಹೇಳಿ ತಾತ ?"

"ಕುಂಬಳ ಬಳ್ಳಿಯೊಂದರಲ್ಲಿ ಹಾವಿನ ಹೆಡೆಯಾಕಾರದ ಕುಡಿ ಮೂಡಿದೆ ಯಂತೆ. ಬಹುಶಃ ವೈರಸ್ ರೋಗದಿಂದ ಎಲೆಯು ಮುದುಡಿ ಹೆಡೆಯಾಕಾರ ದಲ್ಲಿ ಕಾಣಿಸಿರಬಹುದು. ಇನ್ನಾವುದೋ ಕಾರಣದಿಂದ ಕುಡಿ ವೊಟಕಾಗಿರ ಬಹುದು. ಅದಕ್ಕೆ ಮೂಢಜನ ದಿನವೂ ಸಾವಿರಾರು ಸಂಖ್ಯೆಯಲ್ಲಿ ಕೂಡಿ ಹಾಲು

ತುಪ್ಪ ಎರೆದು ಪೂಜಿಸುತಿದ್ದಾರಂತೆ! ಅಲ್ಲಿಗೊಂದು ಜನಸಂತೆಯೇ ನೆರೆಯುತ್ತಿದೆಯಂತೆ! ಇದಕ್ಕೇನೆನ್ನುತ್ತಿ? ಮಕ್ಕಳಿಗಿಲ್ಲದ ಹಾಲುತುಪ್ಪ ಕುಂಬಳಗಿಡಕ್ಕೆ! ನಮ್ಮ ಜನ ಎಂತಹ ಮೂರ್ಖರು?"

"ನಿಜ ತಾತ! ಇದರಲ್ಲಿ ಮತಿಮಾಂದ್ಯರು ಮಾತ್ರವಲ್ಲ; ಮತಿಮಾನ್ಯರೂ ಭಾಗವಹಿಸುತ್ತಾರೆ. ಇದಕ್ಕೇನು ಹೇಳೋಣ?"

"ಹರೆರಾಂ! ಸ್ವತಂತ್ರ ಭಾರತದಲ್ಲಿ ಇಂತಹ ಕ್ಷುಲ್ಲಕ ವಿಚಾರಗಳು ಇನ್ನೂ ನಡೆಯುತ್ತಿರುವುದು ಎಷ್ಟು ಹೀನಾಯ? ಜಗತ್ತು ನಾಗಾಲೋಟದಿಂದ ಮುಂದೋಡುತ್ತಿದೆ? ನಮ್ಮವರು ಇನ್ನೂ ಹೀಗಿದ್ದಾರೆ. ಒಬ್ಬರು ನಂಬಿದರು ಅಂದರೆ ಸಾವಿರಾರು ಜನ ಹುಚ್ಚಾಗಿ ಅತ್ತಲೇ ನುಗ್ಗಿ ಬಿಡುತ್ತಾರೆ! ಇದೊಂದು ವಿಶೇಷ ಮಗೂ."

"ಇದು ವಿಜ್ಞಾನ ಯುಗ."

ಇಬ್ಬರ ಮುಖದಲ್ಲೂ ಮುಗುಳು ನಗು ಒಡೆದು ಮೂಡಿತು.

o o o o

ಇಂದು ಹಿರಿಯ ಮಗಳು ಸೀತಾ ಗಂಡನೊಡನೆ ಬಂದಿದ್ದಾಳೆ. ಅಳಿಯ ಸರಕಾರಿ ಆಫೀಸಿನಲ್ಲಿ ಉದ್ಯೋಗಿ. ಅವನು ಒಂದು ತಿಂಗಳು ಟ್ರೈನಿಂಗ್-ಗಾಗಿ ದೆಹಲಿಗೆ ಹೋಗಲಿದ್ದ. ಅನಂತರ ಮೂರು ತಿಂಗಳು 'ಬಹರೇನ್' ಪ್ರಾಂತ್ಯಕ್ಕೆ ಹೋಗಿ ಕೆಲಸ ಮಾಡಲು ಕಳುಹಿಸುವ ಉದ್ದೇಶ ಸರಕಾರಕ್ಕೆ. ಮೂರು ನಾಲ್ಕು ತಿಂಗಳು ಸೀತಾ ಬರೀ ಹೆಣ್ಣು ಮಕ್ಕಳೊಂದಿಗೆ ಉಳಿಯಬೇಕಾದುದರಿಂದ ತಂದೆಯನ್ನು ಕರೆದುಕೊಂಡು ಹೋಗುವ ಉದ್ದೇಶದಿಂದ ಬಂದಿದ್ದಾಳೆ.

ರಮಾಕಾಂತ ನಗುತ್ತ ನುಡಿದ "ನಾನು ಮುದುಕ. ನನ್ನಿಂದ ನಿನಗೇನು ಸಹಾಯವಾದೀತು. ನಾನು ಸುಮ್ಮನೆ ಕಾಲಹರಣ ಮಾಡುವುದಷ್ಟೆ."

"ಪರವಾಯಿಲ್ಲ. ಮನೆಯಲ್ಲಿ 'ಗಂಡಸು' ಇದ್ದರೆ ಸಾಕಲ್ಲ."

"ಆಗಬಹುದು. ಅದಕ್ಕೇನಡ್ಡಿಯಿಲ್ಲ."

ಸರೋಜಿನಿಯು ಮನದಲ್ಲಿ ಮೂರು ನಾಲ್ಕು ತಿಂಗಳು ನಾವ ಇರುವು
ದಿಲ್ಲವೆಂದರೆ ಒಂದು ಪೀಡೆಯೇ ಅರುಗಾದಂತೆ ಎಂದುಕೊಂಡಳು. ಬಾಯಿ
ಬಿಟ್ಟು ಏನೂ ಹೇಳಲಿಲ್ಲ. ಅಡಿಗೆಯವ ಅತಿಥಿಗಳಿಗೆ ಚಹ-ಕಾರ ತಂದಿಟ್ಟು
ಉಪಚಾರ ಮಾಡಿದ. ಚಹ ಸೇವನೆಯ ನಂತರ ಮಹೇಶ ಕೇಳಿದ "ಏನು
ಮಾಡುತ್ತೀರಿ ಅಪ್ಪಾ, ಹೋಗುವಿರಾ?"

"ಆಗಲಿ ... ಹೋಗಿ ಬರುವೆ."

ಮನದಲ್ಲಿ ಮಗಳ ಸ್ಥಿತಿಗತಿ. ಬಾಡಿಗೆಯ ಮನೆ ಸುಳಿದಳಿಯಿತು. ರಮಾ
ಕಾಂತ ತನ್ನನ್ನೇ ತಾನು ಸಂತೈಸಿಕೊಳ್ಳುವಂತೆ ಸುಮ್ಮನಾದ. ಸೀತಾ ತಂದೆಯ
ಬಟ್ಟೆಬರೆಗಳನ್ನು ಸೂಟ್‌ಕೇಸಿಗೆ ತುಂಬಿಕೊಂಡಳು. ಸ್ವಲ್ಪಹೊತ್ತು
ನಾತುಕತೆಯನಂತರ ಮೂವರೂ ಹೊರಟರು. ರುಕ್ಮಾಯಿ ಕೈಯಾಡಿಸುತ್ತ
"ಬೈಬೈ ತಾತ' ನಾನು ಆಗಾಗ ಬಂದು ನೋಡುತ್ತಿರುವೆ." ಎಂದಳು ಹಸನಾದ
ಎಳೆನಗುವನ್ನು ಸೂಸಿ.

"ಬೈ. ಬೈ."

ಉಳಿದ ಮಕ್ಕಳೂ ದನಿಗೂಡಿಸಿದರು "ಬೈ. ಬೈ."

ಕಾರು ಹೊರಟಿತು. ಭವ್ಯ ಬಂಗಲೆಯು ಅಕ್ಕರೆಯ ಯಜಮಾನನನ್ನು
ಬೀಳ್ಕೊಟ್ಟಿತು.

ಅತ್ತಿಗೆ ಅಣ್ಣಂದಿರ ವೈಭವಯುತ ಜೀವನದ ಮುಂದೆ ತಮ್ಮದೊಂದು
ಸರ್ವೇ ಸಾಮಾನ್ಯ ಜೀವನ ಸ್ವರೂಪವನ್ನು ತೋರಿಕೊಳ್ಳುವುದೇ ಬೇಸರವೆನಿ
ಸುವುದೊಂದಾದರೆ ಅಣ್ಣ ಅತ್ತಿಗೆಯರ ಸಣ್ಣ ಮನದ ತಾತ್ಸಾರ ಮನೋಭಾವ
ಇನ್ನೊಂದು. ಹೀಗಾಗಿ ಮೂವರು ಹೆಣ್ಣು ಮಕ್ಕಳು ಬಂದು ಹೋಗುವುದು
ಈಗೀಗ ಕಡಿಮೆ. ತಾಯಿಯಿದ್ದಾಗಿನ ದಿವಸಗಳು ಅಕ್ಕರೆಯಿಂದ ಕೈವೀಸಿ ಕರೆ
ಯುತಿದ್ದುವು. ಹೋಗಿ ಬರುವ ಆಸೆ ಗರಿಗೆದರುತಿತ್ತು. ಆಗಾಗ ಹೋಗಿ ತಾಯಿ
ಯೊಂದಿಗೆ ಸ್ವಲ್ಪ ಸಮಯ ಕಳೆದು ಬರುತಿದ್ದರು. ಬಾಂಧವ್ಯ ಉಳಿದು ಬೆಳೆದು
ಕೊಂಡಿತ್ತು. ಅನಂತರ ನೀರಿಲ್ಲದ ಕೆರೆಯಂತೆ ಒಣಗಿ ಬತ್ತುತ್ತ ಕೊನೆಗೊಮ್ಮೆ

ಪ್ರೇಮ-ಸ್ನೇಹಗಳ ಬಾಂಧವ್ಯದ ಬಳ್ಳಿ ಆಸರೆ ತಪ್ಪಿದಂತೆ ಕೆಳಗೆ ಬಿದ್ದು ಹೋಯಿತು.

o o o o

ಅಂದು ಕೊನೆಯ ಮಗಳು–ಸತ್ಯ ತಂದೆಯನ್ನು ನೋಡಲು ಅಕ್ಕನ ಮನೆಗೆ ಬಂದಾಗ ರಮಾಕಾಂತ ವರಾಂಡದಲ್ಲಿ ಕುಳಿತು ಪುಸ್ತಕಾವಲೋಕನದಲ್ಲಿ ಮನವಿಟ್ಟದ್ದ. ಮಗಳನ್ನು ಕಂಡು ಮನಸ್ಸು ಹೂವಿನಂತೆ ದಳಬಿರಿದು ಅರಳಿತು.

"ಏನಮ್ಮಾ ಹೇಗಿದ್ದೀ ?"

"ಹೇಗಿರಬೇಕೋ ಹಾಗಿದ್ದೇವೆ. ಮುಖ್ಯವಾಗಿ ನೀವು ಚೆನ್ನಾಗಿದ್ದರೆ ಸಾಕು."

"ನನ್ನದೇನು ಬಿಡು, ಸಾಯುವ ಮುದುಕ; ಹೇಗಿದ್ದರೇನು?"

"ಹಾಗೆಂದರೇನು? ಈಗ ಅಮ್ಮ ಇಲ್ಲ. ನೀವೊಬ್ಬರೇ ನಮ್ಮ ಪಾಲಿಗೆ-"

ಆ ಮಾತು ಎದೆಯಾಳಕ್ಕೆ ಇಳಿಯಿತು......ನಿಜವಾಗಿಯೂ ತನ್ನಿಂದ ಈ ಮಕ್ಕಳಿಗೆ ಅನ್ಯಾಯವೇ ಆಗಿದೆ. ಆದರೂ ಎಂತಹ ಅಮೋಘವಾದ ಪ್ರೇಮ, ಎನಿಸಿದಾಗ ಎದೆಯಾಳದಿಂದ ನಿಟ್ಟುಸಿರೊಂದು ಹೊರಹೊಮ್ಮಿತು. ಸೀತಾ ಹೊರಬಂದು ತಂಗಿಯ ಕ್ಷೇಮ ಸಮಾಚಾರ ತಿಳಿದುಕೊಂಡು ಅವ ರೊಂದಿಗೆ ಅಲ್ಲಿಯೇ ಕುಳಿತುಕೊಂಡಳು.

"ನಿಮಗೆ ದೊಡ್ಡ ಮನೆಯಲ್ಲಿದ್ದು, ಈ ಚಿಕ್ಕ ಮನೆಯಲ್ಲಿ ಕಾಲಾಡು ವುದು ಕಷ್ಟವಾಗುವುದೇನೋ..." ಎಂದಳು ಸತ್ಯ ಸಣ್ಣ ಕಿರುನಗೆ ಸೂಸಿ.

"ಕಷ್ಟ ಎನ್ನುವುದಕ್ಕಿಂತ ನನ್ನ ಅತುಲ ಸಂಪತ್ತೆಲ್ಲ ಒಬ್ಬನ ಕೈಗೇ ಸೇರಿ ಹೋಯಿತಲ್ಲ ಎಂಬ ದುಃಖ ಅಪಾರ. ನಾನಾಗ ಕಾಹಿಲೆ ಬೀಳದಿದ್ದಿದ್ದರೆ ಹೀಗಾ ಗುತ್ತಿರಲಿಲ್ಲ. ನೀವು ಮೂವರಿಗೂ ಏನಾದರೂ ಮಾಡಲೇಬೇಕು ಎಂಬ ಯೋಚನೆಯಿತ್ತು. ನಿಮ್ಮಮ್ಮ ಯಾವಾಗಲೂ ನನಗೆ ಹೇಳುತ್ತಲೇ ಇದ್ದಳು. ಈಗ ನಾನು ಬರಿಗೈಯಾಗಿಬಿಟ್ಟೆ. ಹಣ ಅಧಿಕಾರ ಮಹೇಶನ ಕೈ ಸೇರಿತು. ಮಕ್ಕಳು ಎಲ್ಲರೂ ಸಮಾನಸ್ಕಂದರು. ಆಸ್ತಿ ನಾಲ್ವರಿಗೂ ಹಂಚಿಕೆಯಾಗು

ವುದು ನ್ಯಾಯವೇ. ನೀವು ಮೂವರೂ ಮಹೇಶನನ್ನೊಮ್ಮೆ ನಿಮಗೂ ಸಮ ಪಾಲು ಕೊಡುವಂತೆ ಕೇಳಿ ನೋಡಿ. ಈ ಆಸ್ತಿ ನನ್ನ ಸ್ವಯಾರ್ಜಿತ. ನಾನು ಇಷ್ಟಪಟ್ಟರೆ ಯಾರಿಗಾದರೂ ದಾನ ಮಾಡಬಹುದು. ಹೀಗಿರುವಲ್ಲಿ ಮಹೇಶನ ದುರಾಸೆ-ದುರ್ಬುದ್ಧಿ ವಿಪರೀತವಾಯ್ತು. ನೀವು ಪ್ರತಿಭಟಿಸಿದರೆ ನಿಮಗೆ ದಕ್ಕೀತು. ಇಲ್ಲದಿದರೆ ಇಲ್ಲ. ಆದ್ದರಿಂದ ನೀವು ಮೂವರೂ ಒಂದಾಗಿ ನಿಲ್ಲಿ.... ನನ್ನ ಕಾಲದಲ್ಲಿ ತಪ್ಪಿಹೋಯ್ತು ನಿಜ. ಈಗ ನೀವು ಒಗ್ಗೂಡಿದರೆ ನಾನೂ ಬಾಯಿ ಬಿಟ್ಟೇನು...ನಿಮಗೂ ಭುಜಬಲ ಬರುತ್ತೆ."

"ನೀವೇ ಕೈಯೆತ್ತಿ ಕೊಟ್ಟಿದ್ದಿದ್ದರೇನೋ ಒಂದು ರೀತಿ. ಈಗ ಕೇಳುವು ದೆಂದರೆ ನಮಗೆ ಸಂಕೋಚವೇ...ಏನು ಮಾಡೋಣ ಹೇಳಿ ಅಪ್ಪಾ?"

"ಹರೆ ರಾಂ ! ಸಂಕೋಚವೇಕೆ ? ನಾನು ಹೇಳುವುದು ಮೂವರೂ ಒಟ್ಟಾಗಿ ನಿಲ್ಲಿ ಅಂತ. ನೀವು ಒಡ ಹುಟ್ಟಿದವರಲ್ಲವೇ?"

ಸೀತಾ ತನ್ನಲ್ಲೇ ಯೋಚಿಸಿ ಹೇಳಿದಳು "ನಾವಾಗಿ ಹೋಗಿ ಕೇಳುವುದ ಕ್ಕಿಂತ ನೀವೇ ನಾಲ್ವರಿಗೂ ಸಮಭಾಗವಿರುವಂತೆ, ಮೂವರು ಹೆಣ್ಣುಮಕ್ಕ ಳಿಗೂ ಸಾಕಷ್ಟು ಹಣ ಅಥವಾ ಮನೆ ಕಟ್ಟಿಕೊಡಬೇಕೆಂದು ಉಯಿಲು ಮಾಡಿಬಿಡಿ. ಸ್ವಯಿಚ್ಛೆಯಿಂದ ಮಾಡಿದರೆ ಒಳ್ಳೆತಲ್ಲವೇ?"

"ಹೌದು ಅಪ್ಪಾ, ಅದೇ ಸರಿಯಾದ ಕ್ರಮ." ಎಂದಳು ಸತ್ಯ ಲಗುಬಗೆ ಯಿಂದ.

ರಮಾಕಾಂತ ಆಲೋಚನಾಪರವಶನಾದ. ಅಂತರಂಗ ಕೂಗಿ ಹೇಳಿತು "ಹೌದು, ಅದೇ ಸರಿಯಾದ ಕ್ರಮ. ಹಿಂದೂಸ್ಥಾನದಲ್ಲಿ ಸ್ತ್ರೀ ಸ್ವಾತಂತ್ರ್ಯ ವಿಲ್ಲ. ಆದ್ದರಿಂದ ಅವಳಿಗೆ ಆಸ್ತಿಯಲ್ಲಿ ಹಕ್ಕಿಲ್ಲ. ಪುರುಷ ಪ್ರಧಾನವಾದ ರಾಷ್ಟ್ರ ದಲ್ಲಿ ಹೆಣ್ಣೊಂದು ಭೋಗವಸ್ತುವಾಗಿರಬೇಕೇ ಹೊರತು ಸ್ವತಂತ್ರ ಜೀವಿ ಯಾಗುಳಿಯುವುದು ಸರ್ವಥಾ ಸಾಧ್ಯವಿಲ್ಲ....ಸಾಧ್ಯವಿಲ್ಲ ! ಅವಳು ಅಂಗೈಲಾ ಡುವ ಗಿಳಿಯಾದರೇನೇ ಬದುಕು ನಿರಾಳ. ಇಲ್ಲದಿದ್ದರೆ ನರಕ ಕುಂಡ...!

"ಅಪ್ಪಾ, ಇನ್ನೊಂದು ವಿಷಯ ಜ್ಞಾಪಕದಲ್ಲಿಟ್ಟುಕೊಳ್ಳಿ. ನೀವು ಇಲ್ಲಿ ದ್ದಾಗ ಏನಾದರೂ ಈ ಸುದ್ದಿ ಎತ್ತಿದರೆ ಹೆಣ್ಣುಮಕ್ಕಳಿಂದ ಪ್ರಚೋದಿತ

ಎಂಬ ದೂರು ಬರುತ್ತದೆ. ನೀವು ಅಲ್ಲಿಗೆ ಹಿಂದಿರುಗಿದ ನಂತರ ನಿಮ್ಮ ಅಭಿಪ್ರಾಯವನ್ನು ಮಹೇಶನ ಮುಂದಿಟ್ಟು, ಅನಂತರ ಉಯಿಲು ಬರೆಯಿರಿ."

"ಮಗಳೇ ಅವನು ಒಪ್ಪುತ್ತಾನೆಯೇ? ಈಗೀಗ ಬಕಪಕ್ಷಿಗಿಂತ ಬಕಪಕ್ಷಿಯಾಗಿದ್ದಾನೆ!"

ಸ್ವಲ್ಪ ಹೊತ್ತು ಮೌನಮುದ್ರೆ ಆವರಿಸಿತು. ರಮಾಕಾಂತ ಚಿಂತಾಕ್ರಾಂತನಾದ. ಚಿತ್ತಭಿತ್ತಿಯಲ್ಲಿ ತನ್ನ ಶ್ರಮ ಸಾಧನೆಯ ಜೀವನ ಚಲನಚಿತ್ರದಂತೆ ಸುಳಿಸುಳಿದು ಮಾಯವಾಯಿತು.

ಂ ಂ ಂ ಂ

ರುಕ್ಮಾಯಿ ಡಾ|| ರಾಮಕೃಷ್ಣನೊಡನೆ ಬಂದಾಗ ರಮಾಕಾಂತ ತುಂಬು ಹೃದಯದಿಂದ ಸ್ವಾಗತಿಸಿ 'ಸೀತಾ ಯಾರು ಬಂದಿದ್ದಾರೆ ನೋಡು' ಎಂದು ಕೂಗಿ ಹೇಳಿದ. ಒಳಗಡೆ ಕೆಲಸದಲ್ಲಿದ್ದ ಮಗಳು ಅಷ್ಟಕ್ಕೆ ಬಿಟ್ಟು ಬಂದು ನವಜೋಡಿಯನ್ನು ನೋಡಿ ಸಂತಸದಿಂದ "ನನಗೊಬ್ಬ ಮಗನಿದ್ದಿದ್ದರೆ ರಾಮಕೃಷ್ಣ ನಿನ್ನ ದೂರದಿಂದ ನಿಂತು ನೋಡಬೇಕಿತ್ತು" ಎಂದಳು ಹಾಸ್ಯ ಪ್ರಧಾನವಾಗಿ ಅವಳ ಕೆನ್ನೆಯನ್ನು ಚಿವುಟಿ.

"ಅದಕ್ಕೇ ನಿಮಗೆ ಮಗ ಹುಟ್ಟಲಿಲ್ಲ ಬಿಡಿ."

ಇಬ್ಬರೊಳಗೆ ಯಾರೆಂದರೋ ಆ ಮಾತನ್ನು? ಎಲ್ಲರ ಮುಖದಲ್ಲೂ ಕುಲುಕುಲು ನಗೆಯ ಲಹರಿ ಉಕ್ಕಿ ಹರಿಯಿತು. ಆನಂದವನ್ನೇ ಆನಂದಿತಗೊಳಿಸುವಂತಹ ಸುಗಳಿಗೆಯಲ್ಲಿ.

"ಏನಪ್ಪಾ ರಾಮಕೃಷ್ಣ, ಅತ್ತೆಯ ಮಗಳು ಸುಖ ಸಾಮ್ರಾಜ್ಯದಲ್ಲಿ ಬೆಳೆದವಳು. ಅವಳನ್ನು ಹೂವಿನಂತೆ ಇಟ್ಟುಕೊಳ್ಳಬೇಕು ತಿಳಿಯಿತೇ ?" ಎಂದಳು ಸೀತಾ.

"ಸರಿ, ಸರಿ. ಹೂವಿನಂತಿದ್ದರೆ ಒಂದೇ ದಿನಕ್ಕೆ ಮುಗಿಯುತ್ತೆ ಜೀವನ. ಪಾಪಾಸು ಕಳ್ಳಿಯಂತಿದ್ದರೆ ನೋವು ನಿಡಿಗಳಿಲ್ಲ; ಬಹು ಕಾಲ ಬಾಳುತ್ತೆ!" ಹಾಸ್ಯದ ಚಟಾಕಿ ಹಾರಿಸಿದ ರಾಮಕೃಷ್ಣ.

"ಅಹೆಹೆ, ಪರವಾಗಿಲ್ಲ ಜಾಣ !" ಎಂದು ತಮಾಷೆಯ ಹೂ ಪೆಟ್ಟೊಂದನ್ನು ಹಾಕಿದಳು ರುಕ್ಮಾಯಿ. ಎಲ್ಲರ ಮುಖದಲ್ಲೂ ಮತ್ತೆ ಕುಲುಕುಲು ನಗು.

"ರುಕ್ಮೀ, ನೀನು ಎಲ್ಲಿದ್ದರೂ ನಿನ್ನ ನಿವಾಸ ಸ್ವರ್ಗವಾಗುತ್ತದೆ. ದೇವರು ನಿನಗೆ ಪೂರ್ಣಾಯುಸ್ಸು ಕೊಡಲಿ" ದನಿಯನ್ನು ಎದೆಯಾಳದಿಂದ ಹೊರಬಿಟ್ಟ. ರಮಾಕಾಂತ ಭಾವಾವಿಷ್ಟನಾದ.

ರಾಮಕೃಷ್ಣ ಮುಂದಾಗಿ "ಹಾಗಾದರೆ ನನಗೆ?" ಎಂದು ಕಣ್ಣರಳಿಸಿದ.

"ನಿನಗೂ ಕೂಡ. ನೀನೊಬ್ಬನೇ ನಮ್ಮ ಕುಲಕ್ಕೆ ಡಾಕ್ಟರು. ನಿನಗೆ ಶುಭ ಹಾರೈಸದಿದ್ದರಾದೀತೇ ? ನೀವಿಬ್ಬರೂ ನೂರ್ಕಾಲ ಬಾಳಿ ಮನೆ ತುಂಬ ಮಕ್ಕಳಾಗಿ ಸುಖ ಸಂ......." ಅಷ್ಟೆನ್ನುವುದರೊಳಗೆ ಬಳಿಗೆ ಚಿಮ್ಮಿ ಬಂದ ರುಕ್ಮಾಯಿ ತಾತನ ಬಾಯಿ ಮುಚ್ಚಿ ಹಿಡಿದಳು, ಮುಂದೆ ಮಾತು ಹೊರಡದಂತೆ.

"ತಾತ, ನಿಮ್ಮ ಆಶೀರ್ವಾದ ತುಂಬ ಉದ್ದವಾಯಿತು." ಕೊರಳು ಕೊಂಕಿಸಿ ನುಡಿದಳು ರುಕ್ಮಾಯಿ.

"ಅಷ್ಟು ಹೇಳದಿದ್ದರೆ ಅದು ಆಶೀರ್ವಾದವೇ ಅಲ್ಲ ರುಕ್ಮೀ. ಮನೆಯಲ್ಲಿ ಹೇಳಿ ಬಂದಿದ್ದೀಯೇನಮ್ಮಾ ? ಮತ್ತೆ ನಿನ್ನ ಅಪ್ಪ–ಅಮ್ಮ ಕೋಪಿಸಿಕೊಂಡಾರು."

"ಬೇಗನೆ ಹೋಗುವೆ....ತಾತ" ಹುಬ್ಬೇರಿಸಿ ನುಡಿದಳು ರುಕ್ಮಾಯಿ.

ಸೀತಾ ಎಲ್ಲರಿಗೂ ಸಿಹಿ ಕಾರಗಳೊಂದಿಗೆ ಚಹ ನೀಡಿ ಉಪಚರಿಸಿದಳು.

ರಾಮಕೃಷ್ಣ ಚಹವಾದನಂತರ ಹೊರಡುವ ಮುನ್ನ ರಮಾಕಾಂತನ ಕಾಲಿಗೆ ನಮಸ್ಕರಿಸಿ "ಆಶೀರ್ವದಿಸಿ ತಾತ!" ಎಂದ, ಅತ್ಯಂತ ಹೃದಯವಂತಿಕೆಯಿಂದ.

"ಸತ್ಕೀರ್ತಿವಂತನಾಗು ಮಗನೇ!"

ಮೈಯ ಲವಲವಿಕೆಯೆಲ್ಲಾ ಮುಖಕ್ಕೆ ನುಗ್ಗಿ ಬಂದಂತೆ ಪ್ರಸನ್ನತೆ ಮೂಡಿತು ಮುಖಭಾವದಲ್ಲಿ.

ಹಿಂದೆಯೇ ನಮಸ್ಕರಿಸಿದ ರುಕ್ಮಾಯಿಗೆ "ದೀರ್ಘ ಸುಮಂಗಲೀ ಭವ" ಎಂದು ಪರಮ ಸಂತೋಷದಿಂದ ಆಶೀರ್ವದಿಸಿ ತಬ್ಬಿ ಆಲಂಗಿಸಿ ಹಣೆಗೆ ಹೂ ಮುತ್ತೊಂದನ್ನೊತ್ತಿದ ರಮಾಕಾಂತ.

ಎಲ್ಲರ ಹೃದಯ ಕಲಶಗಳೂ ಆನಂದದ ಹೆದ್ದೆರೆಯಿಂದ ತುಂಬಿ ತುಳುಕಿ ತುಯ್ಯ್ಯಾಡಿದುವು. ಸಣ್ಣ ಮನೆ ಧೀಂಕಿಡುವಂತೆ ನಗೆಯ ಹೊನಲು ಉಕ್ಕಿ ಹರಿಯಿತು.

o o o o

ಮೂರು ನಾಲ್ಕು ತಿಂಗಳು ಕಳೆದ ನಂತರ ರಮಾಕಾಂತ ಮನೆಗೆ ಹಿಂದಿರುಗಿದ. ಅಧಿಕತರ ಸ್ನೇಹ ಸಂಬಂಧದಿಂದಲೋ ಏನೋ ವೃದ್ಧ ಮಹಾಶಯನ ಮುಖಬಿಂಬದಲ್ಲಿ ಸುಪ್ರಸನ್ನತೆಯ ಮಧುರ ಲೇಪ ಹರಡಿದುದನ್ನು ಕಂಡು ಸರೋಜಿನಿಗೆ ಏನೋ ಒಂದು ಬಗೆಯ ಕಸಿವಿಸಿ......ಬಾಯಿ ಬಿಟ್ಟು ಏನೂ ಹೇಳಲಿಲ್ಲ, ಒಡಲೆಲ್ಲ ಉರಿ, ಮನದಲ್ಲಿ ಕಿಚ್ಚು.

ರಮಾಕಾಂತ ಉದ್ಯಾನದ ಹೊಂಬಿಸಿಲಿಗೆ ಮೈಗೊಟ್ಟು ಬೆಚ್ಚಗೆ ಮೈ ಕಾಯಿಸಿಕೊಳ್ಳುತಿದ್ದ. ಮನದಲ್ಲಿ ಉಯಿಲಿನ ವಿಚಾರ ತುಂಬಿ ಹೋಗಿತ್ತು. ಮಹೇಶನೊಡನೆ ಮುಖಾಮುಖಿಯಾಗಿ ಮಾತಾಡಿಯೇ ನಿರ್ಧರಿಸುವ ಯೋಚನೆಯಿಂದ ಸುಮ್ಮನಾಗಿದ್ದ. ಆದರೆ, ಮಹೇಶ ಒಂದು ಗಳಿಗೆಯಾದರೂ ಬಿಡುವಿನಿಂದ ಇರಬೇಕಲ್ಲ? ಯಾವತ್ತೂ ಸುತ್ತಮುತ್ತ ಅಪರಿಮಿತ ಗೆಳೆಯರು, ಕಾರ್ಯನಿರ್ವಾಹಕರು, ಗಿರಾಕಿಗಳು, ಮಡದಿಯ ಕುಟುಂಬಿಗರು ತುಂಬಿರುವುದರಿಂದ ಅವನನ್ನು ಈ ಗಂಭೀರವಾದ ವಿಷಯಕ್ಕೆ ಎಳೆಯುವುದು ಅಷ್ಟು ಸುಲಭವಲ್ಲ. ಸೂಕ್ತ ಸಮಯಕ್ಕಾಗಿ ಕಾಯುವುದು ದಿನಚರಿಯಲ್ಲೊಂದು. ಸೊಸೆಯ ಕಣ್ಣು ತಪ್ಪಿಸಿ ಮಾತಾಡುವುದು ದೊಡ್ಡ ಕಷ್ಟ. ಮೊಮ್ಮಕ್ಕಳ ಮುಂದೆ ಹೇಳಿಕೊಳ್ಳುವುದೂ ಇಷ್ಟವಿಲ್ಲ.

ಎಪ್ಪತ್ತರ ಹೊಸ್ತಿಲನ್ನು ಏರಿಯಾಯ್ತು. ಇನ್ನು ಯಾವ ಗಳಿಗೆಯಲ್ಲಿ ವಿಧಿಯ ಕರೆಯೋ ಯಾರಿಗೆ ಗೊತ್ತು? ಆದಷ್ಟು ಬೇಗ ಉಯಿಲು ಮಾಡುವುದು ಒಳ್ಳೆಯದು ಎನಿಸಿದರೂ ಹೇಗೆ ಎಂಬುದು ನುಂಗಲಾರದ ತುತ್ತು. ಇವನು

ಒಪ್ಪಿಕೊಳ್ಳದಿದ್ದರೆ ಹೆಣ್ಣುಮಕ್ಕಳು ಮುಂದೆ ನಿಂತು ಹೊಡೆದಾಡುವವರಲ್ಲ. ಅಂದಮೇಲೆ ಉಯಿಲು ಊರ್ಜಿತವಾಗುವುದು ಕಷ್ಟ. ವಿಷಯ ಹಗರಣಕ್ಕೀಡಾದರೆ ಕುಟುಂಬದ ಮರ್ಯಾದೆ ಗಾಳಿಯಲ್ಲಿ ತೂರಿ ಹೋಗುತ್ತದೆ. ಅದೇ ಕಷ್ಟ; ಅದೇ ಸಂಕಟವುಯು....ಇಂತಿಂತಹ ವಿಚಾರಸಾರಗಳನ್ನೆಲ್ಲ ನೆನೆದು ರಮಾಕಾಂತ ತೀವ್ರ ಭಾವನಾಶೀಲನಾದ.

ಒಮ್ಮೆ ಮಹೇಶ ಹೊರ ಹೊರಡುವ ಮುನ್ನ ರಮಾಕಾಂತ ಪ್ರಯತ್ನಪೂರ್ವಕವಾಗಿ ಅಂದ "ನಿನ್ನೊಡನೆ ಸ್ವಲ್ಪ ಮಾತಾಡುವುದಿತ್ತು ಮಹೇಶ್."

"ಓ, ಅದಕ್ಕೇನಪ್ಪಾ, ಎಂದಾದರೂ ಮಾತಾಡಬಹುದು" ಎಂದಷ್ಟು ನುಡಿದು ಹೊರಟೇ ಹೋದ. ಕ್ಷಣಾರ್ಧದಲ್ಲಿ ಬೆಂಜ್ ಕಾರು ಕಣ್ಮಾಯವಾಯಿತು. ಹಿಂದಿನಿಂದ ನೋಡಿದ ನಯನದ್ವಯಗಳು ಸಾಗರ, ನೀಲಿಯ ಕಾರಿನ ಬಣ್ಣ ಥಳಥಳ ಮಿಂಚಿದುದನ್ನು ಹೀರಿದುವು. ಮೌನಭಾರದಿಂದ ಒಳಹೋಗಿ ಸೆಜ್ಜೆಯನ್ನು ಸೇರಿದ.

ಎದುರಿನ ಗೋಡೆಯಲ್ಲಿ ಚಿತ್ರವಾಸಿನಿ ಮಡದಿ. ಯಾವುದೋ ವಿಶಿಷ್ಟ ಸಂದರ್ಭದಲ್ಲಿ ಅನನ್ಯ ಜಗತ್ತಿಗೆ ಪಯಣಿಸಿದ್ದು ಈಗಲೀಗ ಬಂದಾಳೇನೋ ಎಂಬಂತೆ ಜೀವಕಳೆಯಿಂದ ಬೆಳಗಿ ತೊಳಗುತಿದ್ದಾಳೆ. ಅವಳು ಅವ್ಯಾಹತವಾಗಿ ಹಿಡಿದ ಸಂಸಾರ ಸೂತ್ರ ಕುಂದಿಲ್ಲದ್ದು. ಮುತ್ತಿನಂತಹ ಸಂಸಾರ. ಮೂರು ಹೆಣ್ಣುಮಕ್ಕಳು ಸಾಲಾಗಿ ಹುಟ್ಟಿದಾಗ ಒಂದು ಗಂಡುಮಗುವಿಗಾಗಿ ಹಂಬಲಿಸಿ ಈಶ್ವರನಿಗೆ ಹರಕೆ ಹೊತ್ತು ಪಡೆದ ಕುಲಪುತ್ರ ಮಹೇಶ. ಈಶ್ವರನ ದಯೆಯಿಂದ ಜನಿಸಿದನೆಂಬ ನಂಬುಗೆ 'ಮಹೇಶ' ಎಂಬಹೆಸರು ಕೊಡಿಸಿತು ಮಗನಿಗೆ. ಸಂಸಾರಕ್ಕೆ ಕಣ್ಣಾಗಿ-ಬೆಳಕಾಗಿ ಬೆಳೆಸಿದ ಮಗ. ಏಕಮಾತ್ರ ಪುತ್ರನೆಂದು ಲಾಲಿಸಿ ಪಾಲಿಸಿದ ಮಗ......ವಂಶಕ್ಕೆ ಶೂಲವಾದಾನೆಂದು ಕನಸಿನಲ್ಲಿಯೂ ಭಾವಿಸಿರಲಿಲ್ಲ. ಐಶ್ವರ್ಯದ ತುತ್ತತುದಿಗೇರಿ ಸ್ವಾರ್ಥದ ಹಾದಿ ಹಿಡಿದನೇ...ಎಂಬ ಸಂಕಟ ಕಾಣದ ಕೈಗಳಿಂದ ಹೃದಯವನ್ನು ಹಿಸುಕುತ್ತದೆ.

ರಮಾಕಾಂತ ತೀರಾ ನಿಸ್ಸಹಾಯಕನಾಗಿ ನಿಟ್ಟುಸಿರು ಬಿಟ್ಟು ಮೈಮೇಲೆ ಹೊದ್ದಿಕೆಯನ್ನೆಳೆದುಕೊಂಡ.

...ರುಕ್ಮಾಯಿ-ರಾಮಕೃಷ್ಣನ ಕೈ ಹಿಡಿದುಕೊಂಡೇ ಒಳಬಂದಿದ್ದಾಳೆ. ನವ ಜೀವನದ ನವ ಹುರುಪಿನಿಂದ ನೂರ್ಮಡಿಯ ಲವಲವಿಕೆ ಮೈಯಲ್ಲಿ. ಕಣ್ಣಿಗೆ ನಿದ್ದೆಯ ಮಂಪರ ಮುತ್ತಿತು.

"ತಾತಾ! ನಾವಿಂದು ಮಧುಚಂದ್ರಕ್ಕೆ ಹೊರಡಲಿದ್ದೇವೆ!"

"ಎಲ್ಲಿ, ಯಾವ ಕಡೆಗೆ ಹೋಗಲಿದ್ದೀರಿ?"

"ಕಾಶ್ಮೀರದಲ್ಲೆ ಒಂದು ತಿಂಗಳಿರುವ ಇಚ್ಛೆ....ನೇಪಾಳ-ಡಾರ್ಜಿಲಿಂಗ್-ಹಿಮಾಲಯ ಮುಂತಾದ ಕಡೆಗಳಲ್ಲಿ ಎರಡು ತಿಂಗಳು ಸುತ್ತಾಡುವ ಯೋಚನೆ ಇದೆ."

"ಅಂದರೆ, ಉತ್ತರ ಭಾರತದ ಸಂಚಾರ...?"

"ಹೌದು..."

"ಸುಖವಾಗಿ ಹೋಗಿಬನ್ನಿ-"

"ಆಗಲಿ."

ಅವರು ಹೊರಟರು. ರಸ್ತೆಯ ತುದಿಯವರೆಗೂ ಕೈಕೈ ಹಿಡಿದುಕೊಂಡೇ ನಡೆಯುತಿದ್ದಾರೆ. ಸ್ವಲ್ಪ ಹೊತ್ತಿನೊಳಗಾಗಿ ಇಬ್ಬರೂ ಕಣ್ಮರೆಯಾದರು.

ರಮಾಕಾಂತ ಬಿರಿಬಿರಿ ಕಣ್ಣು ಬಿಟ್ಟು ನೋಡಿದ, ಕನಸಿನ ಚಿತ್ರ ಸ್ಪಷ್ಟ ವಾಯಿತು. ಹುಚ್ಚು ಹುಡುಗರು! ಇನ್ನೂ ಮದುವೆ ಆಗಿಲ್ಲ, ಆಗಲೇ ಮಧು ಚಂದ್ರ! ಎಂದುಕೊಂಡ ಮನದಲ್ಲಿ.

ಒಂದೆರಡು ವಾರಗಳು ಉರುಳಿದುವು.

ಒಂದು ಸುಂದರವಾದ ಬೆಳಿಗ್ಗೆ ಹಠಾತ್ತನೆ ಮಹೇಶ ಬಳಿಗೆ ಬಂದು ಹೇಳಿದ "ಅಪ್ಪಾ ರುಕ್ಮಾಯಿಗೆ ಹೈದರಾಬಾದಿನಲ್ಲಿ ಬಹಳ ಸ್ಥಿತವಂತನಾಗಿ ರುವ ವರ ಸಿಕ್ಕಿದ್ದಾನೆ. ಇಷ್ಟರಲ್ಲೇ ನಿಶ್ಚಿತಾರ್ಥ ಮಾಡಲಿದ್ದೇವೆ."

"ಹರೇ ರಾಂ! ಹುಡುಗಿ ಒಪ್ಪಿದ್ದಾಳೆಯೇ?"

"ಅವಳಿಗಿನ್ನೂ ಹುಡುಗಾಟ. ಹೂ, ಹಾ ಎನ್ನುತ್ತಾಳೆ. ಅವರ ಸ್ಥಿತಿ ನೋಡಿದರೆ ಬೇಡ ಎನ್ನುವುದೇ ಇಲ್ಲ ಬಿಡಿ. ಅರಮನೆಯಂತಹ ಮನೆಯಲ್ಲಿ ವಾಸ."

"ನೀನು ದೊಡ್ಡ ಮನಸ್ಸು ಮಾಡಿದ್ದಿದ್ದರೆ ರಾಮಕೃಷ್ಣನ ಮನೆಯ ದೀಪ ಬೆಳಗುತಿತ್ತು. ಅವನು ಖಂಡಿತ ನೊಂದುಕೊಳ್ಳುತ್ತಾನೆ. ನೀನು ಅಷ್ಟು ಯೋಚಿಸಲಾರದೇ ಹೋದುದು ದುರದೃಷ್ಟ."

ಅಷ್ಟೆನ್ನುವುದರೊಳಗಾಗಿ ನಾಲಿಗೆಯ ಹಸಿ ಒಣಗಿ ಹೋಯಿತು, ರಮಾಕಾಂತ ತತ್ತರಿಸಿದ.

"ನಿಮಗೊತ್ತಿಲ್ಲ, ರಾಮಕೃಷ್ಣ ಸ್ಥಿತಿವಂತನಾಗಬೇಕಾದರೆ ಹತ್ತು ವರ್ಷ ಬೇಕು. ಅಲ್ಲಿಯತನಕ ರುಕ್ಮಿಯ ಗತಿಯೇನು ? ನಾನೇ ಕೈತುಂಬ ಕೊಟ್ಟು ಅವನ ಜೀವನವನ್ನು ನಡೆಸುವ ಸ್ಥಿತಿಯಲ್ಲಿಲ್ಲ ಎಂದರೆ ನೀವು ನಂಬುತ್ತೀರೋ ಇಲ್ಲವೋ. ಇರಲಿ, ನಾನಂತೂ ಅಂತಹ ತೊಂದರೆಯನ್ನು ಹೊತ್ತುಕೊಳ್ಳುವಷ್ಟು ಮೂರ್ಖನಲ್ಲ . ಇರುವಷ್ಟು ಕಾಲ ನಾವು ನಿಶ್ಚಿಂತೆಯಿಂದ ಉಸಿರಾಡಬೇಕು. ಅಂತ್ಯಕಾಲದಲ್ಲಿ ಮಕ್ಕಳು ಸುಖವಾಗಿದ್ದರೆ ಮನಸ್ಸಿಗೆ ನೆಮ್ಮದಿ."

ಆ ಮಾತು ಮನದಾಳಕ್ಕೆ ಇಳಿದು ಕೂರಿಗೆಯಂತೆ ಕೊರೈಸಿತು. ನೂರು ಮಂದಿ ಹೆಣ್ಣುಮಕ್ಕಳು ಬಡತನದ ಬವಣೆಯಲ್ಲಿ ಬೇಯುತಿದ್ದಾರೆ. ಭಗವಂತ ನನ್ನನ್ನೇಕೆ ಉಳಿಸಿದ್ದಾನೋ...ಎಂದು ತನ್ನಲ್ಲೇ ಕೊರಗಿದ. ತುಟಿಗಳು ಬಿರಿಯಲಿಲ್ಲ.

"ನಾನು ಆರು ಮಂದಿ ಮಕ್ಕಳಿಗೆ ನನ್ನ ಸಂಪತ್ತನ್ನು ಹಂಚಿದರೆ ಒಬ್ಬೊಬ್ಬರಿಗೆ ಎಷ್ಟು ಬಂದೀತು? ಅದರಲ್ಲಿ ಎಲ್ಲರ ಜೀವನ ನಡೆದೀತೇ ? ಯೋಚಿಸಿ ನೋಡಿ ಅಪ್ಪಾ."

ರಮಾಕಾಂತ ಮಾತಾಡಲಿಲ್ಲ. ಅವನೊಮ್ಮೆ ಹೊರಹೋಗಿದ್ದರೆ ಸಾಕಾಗಿತ್ತು.

"ನಿಮ್ಮ ಕಾಲವಿದ್ದಂತಿಲ್ಲ ಈ ಕಾಲ. ನಾನು ಜೀವನವನ್ನು ಇಷ್ಟಾದರೂ ನಡೆಸಿಕೊಳ್ಳಬೇಕಾದರೆ ಎಷ್ಟೆಷ್ಟು ಶ್ರಮ ವಹಿಸುತ್ತೇನೆ ಗೊತ್ತೇ?

ಈಗಿನ ದುಷ್ಟ ಸರಕಾರದ ಲಂಚಗುಳಿತನ, ಈ ಕರಭಾರ ಇವನ್ನೆಲ್ಲ ನಿಬಾಯಿಸಿ ಈ ಉದ್ದಿಮೆ ಬೆಳೆಸಬೇಕಾದರೆ ನ್ಯೆನೆತ್ತರೆಲ್ಲಾ ಸೋರಿ ಹೋಗುತ್ತದೆ. ನಾವು ಕಷ್ಟಪಟ್ಟು ಗಳಿಸಿದ್ದೆಲ್ಲಾ ಕಂಡವರ ಹೊಟ್ಟೆ ತುಂಬುವುದರಲ್ಲೇ ಸರಿ ಹೋಗುತ್ತೆ."

"......"

"ಈಗ ನೋಡಿ. ವರನ ಕಡೆಯವರು ಸಿರಿವಂತರಾದುದರಿಂದ ನಾವು ಮದುವೆಯನ್ನು ಒಳ್ಳೆ ಅದ್ಧೂರಿಯಿಂದಲೇ ಮಾಡಬೇಕು. ನಮ್ಮ ಕಷ್ಟ ಹೇಳಿ ಕೊಂಡು ಕೈ ಬಿಗಿ ಮಾಡಿದರೆ ನಮಗೇ ನಾಚಿಗೆಗೇಡು! ಸಮಯೋಚಿತವಾಗಿ ವರ್ತಿಸುವುದರಲ್ಲಿ ಜಾಣ್ಮೆಯಿದೆ."

ರಮಾಕಾಂತ ಮೌನಭಾರ ವಹಿಸಿದ. ಒಡಲಾಳದಲ್ಲಿ ಸಂಕಟದ ವ್ಯಾಪಾರ ಹೊರಹೊಮ್ಮದಷ್ಟು ಸೂಕ್ಷ್ಮವಾಗಿ ನಡೆಯುತ್ತಿದ್ದರೂ ನಾಲ್ಕಾರು ಕಂಬನಿಗಳು ತಟಪಟನೆ ಉದುರಿದುವು. ತಲೆ ಬಾಗಿ ಪತ್ರಿಕೆಯ ಮೇಲೆ ಬೀಳುವಷ್ಟು ಜಾಣ್ಮೆ ತೋರಿದ.

"ಈ ಮದುವೆ ನನಗೆ ಸುಖದಾಯಕ ಎಂದುಕೊಳ್ಳಬೇಡಿ. ಸಾಲದ ಹೊರೆ ಹೊರದೆಯೆ ಆಗುವುದಿಲ್ಲ. ದೇವರ ಮೇಲೆ ಭಾರ ಹಾಕಿರುವೆ."

ರಮಾಕಾಂತನ ರುದ್ರಮೌನ ಉತ್ತರ ನೀಡಿತು.

o o o o

ರಮಾಕಾಂತ ನಡುಗುವ ಕೈಗಳಿಂದ ಕೆಲವೇ ಪಂಕ್ತಿಗಳಲ್ಲಿ ಉಯಿಲು ಬರೆದು ನಾಲ್ಕಾರು ಪ್ರತಿಗಳನ್ನು ನೂಡಿದ. ಅಂದೇ ರಿಜಿಸ್ಟ್ರಾರ್‌ರವರ ಆಫೀಸಿಗೆ ಹೋಗಿ ರಿಜಿಸ್ಟರ್ ಮಾಡಿಸಿ ಅದರ ಪ್ರತಿಗಳನ್ನು ನಾಲ್ವರು ಮಕ್ಕಳಿಗೂ ರಿಜಿಸ್ಟರ್ ಪೋಸ್ಟ್ ಮೂಲಕ ಕಳುಹಿಸಿದ.

ಮಹೇಶ್ ದಂಪತಿಗಳು ತಮ್ಮ ಗೆಣೆಯ ಬಂಧುಗಳ ದೊಡ್ಡ ಪರಿವಾರವನ್ನೇ ಕಟ್ಟಿಕೊಂಡು ಹೈದರಾಬಾದಿಗೆ ಪಯಣಿಸಿದ್ದಾರೆ. ಮನೆಯಲ್ಲಿ ಅದ್ಧೂರಿಯ ಕೆಲಸ ಕಾರ್ಯಗಳು ಆರಂಭವಾಗಿವೆ. ರಿಪೇರಿ, ಸುಣ್ಣ ಬಣ್ಣ ಅಚ್ಚುಕಟ್ಟು ಎಣೆಯಿಲ್ಲದೆ ನಡೆಯುತ್ತಿವೆ. ಎಲ್ಲರೂ ಹೈದರಾಬಾದಿನಿಂದ ಹಿಂದಿರುಗಿದ

ನಂತರ ನಿಶ್ಚಿತಾರ್ಥ ಮನೆಯಲ್ಲಿ. ನಿಶ್ಚಿತಾರ್ಥವೆಂದರೆ ಸಾಮಾನ್ಯವೇ? ಸಾವಿರಾರು ಜನರ ಸಮಾರಂಭ.

ರುಕ್ಮಾಯಿ ಚೆಂದುಟಿಗಳಲ್ಲಿ ಕುಲುಕುಲು ನಗೆಯ ಚೆಲುವನ್ನು ಚೆಲ್ಲಿ ನುಡಿದಳು "ತಾತಾ! ಸ್ವಾತಂತ್ರ್ಯ–ಸಂಪ್ರೀತಿ–ಸುಸಂಬದ್ಧ–ಸಾಂಪ್ರತ ಇಂತಿಂತಹ ಶಬ್ದಗಳಿಗೇನಾದರೂ ನಿಜವಾದ ಅರ್ಥವಿದೆಯೇ? ಅಥವಾ ನಮ್ಮನಮ್ಮ ಹೃದಯ ನಿಘಂಟು ಅರ್ಥೈಸಲಾರದೋ ಅದೇ ತಿಳಿಯುವುದಿಲ್ಲ. ಈಗ ನೋಡಿ ಈ ಮದುವೆ, ಈ ಅಟಾಟೋಪ ಭವಿಷ್ಯದ ಶಾಂತಿ ಸಂತೋಷಗಳ ಸಮುದಾಯಕ್ಕಲ್ಲ. ದರ್ಪ–ಆಡಂಬರಗಳ ವೈಭವೀಕರಣಕ್ಕೆ. ಅಂದಮೇಲೆ ಈ ಅಶಾಶ್ವತವಾದ ಶರೀರಗಳನ್ನು ಆಶ್ರಯಿಸಿದ ಕಾಮ–ಪ್ರೀತಿ ವಿಶೇಷಗಳಿಗೆ ಏಕೆ ಬೆಲೆ ಕೊಡಬೇಕು ?

"ಸಾಮಾಜಿಕ ರೂಢಿಬದ್ಧವಾದ ಆಚಾರದ ಶಾಸ್ತ್ರ ಸೂತ್ರಗಳಿಗೆ ಬದ್ಧರಾಗಿ ಒಲ್ಲದ ಬಾಳುವೆ ಹೂಡಿ ನರಳುವುದಾದರೂ ಏಕೆ? ಶ್ರೀಮಂತಿಕೆಯನ್ನೇ 'ಆದರ್ಶ' ಎಂದು ನಂಬಿ ನಾವು ಬಾಳಬೇಕೆಂದರೆ ಸಮಾಜದಲ್ಲಿ ವಿಷಾದ ಕ್ರಾಂತಿಯನ್ನು ಎದುರಿಸಲೇಬೇಕಾಗುತ್ತದೆ. ಆಗ ದುಃಖ–ಸಂಕಟ ಅನಿವಾರ್ಯ. ಯಾರ ಶುಭ ಹಸ್ತಗಳಲ್ಲಿ ಆತ್ಮಾರ್ಪಣೆ ಮಾಡಿಕೊಳ್ಳುತ್ತೇವೋ, ಆ ಹಸ್ತಗಳ ಬಳಿಯೇ ಈ ದೇಹವೂ ಇರಲೇಬೇಕೆಂಬ ಸಿದ್ಧಾಂತವನ್ನು ಒರೆಗೆ ಹಚ್ಚಿ ನೋಡಿ. ಒಂದುವೇಳೆ ಆಂತರಂಗಿಕ ಜ್ವಾಲೆ ಕೈದೀವಿಗೆಯಾಗಿ ಅರ್ವಾಚೀನ ರೀತ್ಯ ದಾರಿ ತೋರುವಾಗ ಎಲ್ಲವೂ ಅಂಗೈ ನೆಲ್ಲಿಕಾಯಿಯಂತೆ ಸುಸ್ಪಷ್ಟ. ಆದರ್ಶ–ಸ್ವಯಿಚ್ಛೆ ಸ್ವತಂತ್ರ ಕೇವಲ ಗಂಡಸಿನ ಸ್ವತ್ತಲ್ಲ. ಈ ರಹಸ್ಯ ಜಾಗತಿಕ ಸ್ತ್ರೀಜನರ ತಪೋಬಲ....ಇನ್ನು ಮತ್ತೊಂದು ಮಾತು ಹೇಳಲಾರೆ........ನೀವೂ ಕೇಳಬೇಡಿ."

ರಮಾಕಾಂತ ಮೊಮ್ಮಗಳ ದೃಢ ನಿಲುವಿಗೆ ಸಂತೋಷದ ಉದ್ಗಾರ ತೆಗೆದ.

"ನಡೆಯಿರಿ ತಾತಾ!" ಎನ್ನುತ್ತ ತಾತನ ಕೈ ಹಿಡಿದುಕೊಂಡು ಅತ್ತೆಯ ಮನೆಯ ಹಾದಿಯನ್ನು ಹಿಡಿದಳು ರುಕ್ಮಾಯಿ.

— ೦ —

# ಮೃತ್ಯು ಮಾಧುರಿ

೯

ಸನ್ನಿಹಿತೇ ಕಾಲೇ ನಹಿ ನಹಿ ರಕ್ಷತಿ

ಪೂರ್ವೀ ದಿಗ್ದೇಶದ ತಟಾಂತ ಲಗ್ನದಲ್ಲಿ ಚಂದನರಾಗದ ಮುಗಿಲುಗಳು ಬೃಹದ್ ಗುಡಿ ಗೋಪುರಗಳನ್ನು ನಿರ್ಮಿಸಿವೆ ಸಲ್ಲಕ್ಷಣವಾಗಿ. ಪಕ್ಷಿಗೊರಳಿನ ಉದಯ ರಾಗಾಲಾಪನೆ ಕೊನೆ ಮೊದಲಿಲ್ಲದಂತೆ ಹರಿಯುತ್ತಿದೆ. ಎಲ್ಲಿಂದ ಎಲ್ಲಿಯವರೆಗೂ ಹಬ್ಬಿ ಹರಡಿದ ಪ್ರಶಾಂತಿಯಿಂದ ಪ್ರಾತಃಕಾಲದ ಸೌಂದರ್ಯವೇ ಸೌಂದರ್ಯ.

ಈ ಜೀವ ಜಗತ್ತಿನಲ್ಲಿ ಮೃತ್ಯುಮಾಧುರಿಯ ಅಕಾಂಡತಾಂಡವಉತ್ತಾಲ ನರ್ತನ ಎಲ್ಲಿ, ಯಾವೆಡೆಯಲ್ಲಿ ಯಾವ್ಯಾವ ಸಮಯದಲ್ಲಿ ನಡೆಯುತ್ತೆ ಎಂಬುದನ್ನು ಬಲ್ಲವರಾರು ? ಜೀವನಮಾರ್ಗಯೋಗದಲ್ಲಿ ಕಹಿ ಸಿಹಿಗಳು ಒಟ್ಟಾಗಿಯೇ ಸಾಗುತ್ತವೆ. ಆದರೂ ಸಹ ಕೇವಲ ಸಿಹಿಯನ್ನು ಅರಸ ಹೋಗಿ ಕಹಿ ಗುಳಿಗೆಯನ್ನು ನುಂಗುವುದು ಅನಿವಾರ್ಯ ಎಂಬುದರ ಅರಿವಾಗುವುದು ಅನುಭವಿಸಿದ ಮೇಲೆಯೇ.

ನಾವೊಂದು ಬಯಸಿದರೆ ವಿಧಿ ಇನ್ನೊಂದು ಬಯಸುತ್ತದೆ.

ಈ ಪ್ರಪಂಚ ಇಷ್ಟೆ....

ಅದ್ದೂರಿಯ ಕಾರೊಂದು ಹೊತ್ತು ಮೇಲೇರುವುದರೊಳಗೆ ಆಸ್ಪತ್ರೆಯ ಬಾಗಿಲಿಗೆ ಬಂದು ನಿಂತಿತು. ಸಮವಸ್ತ್ರದ ಚಾಲಕ ತೆಕ್ಕನೆ ಇಳಿದು ಕಾರಿನ ಬಾಗಿಲನ್ನು ತೆಗೆದ. ರಮೇಶ ಮಡದಿಯೊಂದಿಗೆ ಇಳಿಯಲಾರದೇ ಇಳಿದ. ಮುಖ ಬಾಡಿ ಕಂದಿ ಕುಂದಿತ್ತು. ತಲೆಬಾಗಿಲ ಕರೆ ಗಂಟೆಗೆ ಉತ್ತರವಾಗಿ

ಧಾವಿಸಿ ಬಂದ ಗೃಹಿಣಿ ರಮೇಶ ದಂಪತಿಗಳನ್ನು ಪ್ರಸನ್ನ ಮುಖದಿಂದ ಆತ್ಮೀಯವಾಗಿ ಬರಮಾಡಿಕೊಳ್ಳುತ್ತ "ಹೊತ್ತಿಗೆ ಮುಂಚೆ ದರ್ಶನ ಭಾಗ್ಯ ಕೊಟ್ಟುದುದು ವಿಶೇಷವೇ. ಮುಖ ಬಾಡಿದೆ. ಮತ್ತೆ ಹೊಟ್ಟೆನೋವು ಬಂದಿದೆಯೇ ಹೇಗೆ ?" ಎಂದಳು ಸ್ನೇಹ-ಪ್ರಿತಿಗಳ ಗಣಿಯಾಗಿ.

"ಹೌದಮ್ಮಾ, ಈ ಗೋಳು ಯಾರಿಗೆ ಬೇಕು? ರಾತ್ರಿಯೆಲ್ಲಾ ಹೊಟ್ಟೆನೋವು. ಅವೇಳೆಯಲ್ಲಿ ತೊಂದರೆ ಕೊಡಬಾರದೆಂದು ಸಹಿಸಲಾರದೆ ಸಹಿಸಿಕೊಂಡೆ. ಎಲ್ಲಮ್ಮಾ, ಧನ್ವಂತರಿ?"

"ರಾತ್ರಿ ಕರೆಯಬಹುದಾಗಿತ್ತಲ್ಲ, ಅದಕ್ಕೇಕೆ ಸಂಕೋಚ?"

"ಇರಲಿ, ಅದರಿಂದಾಗಿಯೇ ಬೆಳಿಗ್ಗೆಯೇ ಬಂದದ್ದು. ಶಂಕರ್ ಇದಾನೆಯೇ? ಅಥವಾ ಗಾಳಿ ಸವಾರಿ ಹೊರಟಿದಾನೆಯೇ?"

"ಹೊರ ಹೋಗಿಲ್ಲ. ಶೌಚಾಲಯದಲ್ಲಿರಬಹುದು. ಕುಳಿತುಕೊಳ್ಳಿ, ಕರೆಯುವೆ. ಸ್ವಲ್ಪ ಕಾಫಿ–ಟೀ ಏನಾದರೂ ತೆಗೆದುಕೊಳ್ಳುವಿರಾ?"

ಸೌಭಾಗ್ಯಳ ಪ್ರಶ್ನೆಗೆ ರತ್ನಾಲಿ ನುಡಿದಳು "ಎಲ್ಲಾ ಆಗಿದೆ. ನೀವು ಆ ತೊಂದರೆ ತೆಗೆದುಕೊಳ್ಳಬೇಡಿ ಸೌಭಾಗ್ಯ."

ಅಷ್ಟು ಮಾತುಕತೆ ಮುಗಿಯುವುದರೊಳಗಾಗಿ ಡಾ|| ಶಂಕರ್ ಮುಖ ಒರಸಿಕೊಳ್ಳುತ್ತಲೇ ಬಂದ. ಪರಸ್ಪರ ದರ್ಶನ ಲಾಭದಿಂದ ಎಲ್ಲರ ಮುಖದಲ್ಲೂ ಹೂ ನಗೆ ಚೆಲ್ಲಿತು.

"ಏನಪ್ಪಾ, ರಮೇಶ; ಈ ಸಲಿ ಹಿಂಜರಿಯಬೇಡ. ನೀನು ಆಪರೇಷನ್ ಮಾಡಿಸಿಕೊಳ್ಳದಿದ್ದರೆ ನೋವು ಶಮನವಾಗುವುದಿಲ್ಲ. ಖಂಡಿತ ಧೈರ್ಯ ಮಾಡು."

ಡಾ|| ಶಂಕರ್ ಮತ್ತು ರಮೇಶ್ ಒಟ್ಟಿಗೆ ಓದಿ ಒಡನಾಡಿದವರು, ಶಂಕರನದು ವೈದ್ಯಕೀಯ ಕ್ಷೇತ್ರ. ರಮೇಶನದು ಉದ್ದಿಮೆಯ ಕ್ಷೇತ್ರ. ಅಂದಿಂದಿಗೂ ಶಂಕರನೇ 'ಫ್ಯಾಮಿಲಿ ಡಾಕ್ಟರ್' ರಮೇಶನಿಗೆ. ಇಬ್ಬರ ವಾತ್ಸಲ್ಯ

ಕೇವಲ ಮೂರು ನಾಲ್ಕು ಮೈಲಿಗಳ ಅಂತರದಲ್ಲಿ. ಹೃನ್ಮನಗಳಿಗೆ ಆ ಅಂತರವೂ ಇಲ್ಲ. ಸಮಯಾಸಮಯಗಳಲ್ಲೂ ನಗೆ ಚಟಾಕಿ ಹಾರುತ್ತಿರುತ್ತದೆ ಆತ್ಮೀಯ ಗೆಳೆತನದ ಮಧ್ಯೆ. ಎರಡೂ ಜೀವಗಳು ಸಾನಂದದಿಂದ ನಲಿಯುತ್ತವೆ ಪ್ರಸಂಗೋಚಿತವಾಗಿ.

o o o o

"ಗಾಲ್ ಬ್ಲಾಡರ್‌ನಲ್ಲಿ ಬಲಿತ ಕಲ್ಲು ಎಂದರೆ ಆಪರೇಷನ್ ಸರಿಯಾದ ಚಿಕಿತ್ಸೆ. ಅದು ಕಳೆಯುವವರೆಗೂ ನಿನಗೆ ನೋವಿನಿಂದ ಬಿಡುಗಡೆ ಇಲ್ಲವೇ ಇಲ್ಲ" ಎಂದ ಡಾ|| ಶಂಕರ್.

"ಈ ಸಲಿ ನನ್ನನ್ನು ನಿನಗೆ ಸಂಪೂರ್ಣ ಒಪ್ಪಿಸಿ ಕೊಂಡಿರುವೆ. ಆಪರೇಷನ್ ಮಾಡಿಬಿಡು. ದೈವೇಚ್ಛೆ ಇದ್ದಂತಾಗಲಿ ಶಂಕರ್." ರಮೇಶ ಶುಷ್ಕ ತುಟಿಗಳನ್ನು ನಾಲಿಗೆಯಿಂದ ಒರಸಿಕೊಳ್ಳುತ್ತ, ಒಣ ನಗೆಯನ್ನು ಪ್ರಯತ್ನಪೂರ್ವಕವಾಗಿ ಅರಳಿಸಿದ.

"ಭೇಷ್! ನೀನು ಅಷ್ಟು ಧೈರ್ಯ ಮಾಡಿದ್ದೇ ವಿಶೇಷ" ಎಂದ ಬಳಿಕ ರತ್ನಾಲಿಯನ್ನು ಕುರಿತು "ನಿಮ್ಮ ಯಜಮಾನನಂತ ಪುಕ್ಕಲು ವ್ಯಕ್ತಿ ನಮ್ಮ ಬಳಗದಲ್ಲಿಲ್ಲ. ಇಲ್ಲಿ ಆಪರೇಷನ್ನಿಗೆ ಬರುವವರೆಲ್ಲಾ ನಗುನಗುತ್ತಲೇ ಬಂದು ನಗುನಗುತ್ತಲೇ ಹೋಗುತ್ತಾರೆ. ಈ ಕಾಲದಲ್ಲಿ ಸೈನ್ಸ್ ದಿನದಿನಕ್ಕೂ ಮುಂದೆ ಹೋಗುತ್ತಲೇ ಇದೆ. ಈವರೆಗೆ ಜೀವ ಒಂದನ್ನು ಸೃಷ್ಟಿ ಮಾಡಲಿಲ್ಲ. ಮುಂದೆ ಅದೂ ಆಗಬಹುದೇನೋ ಯಾರಿಗೆ ಗೊತ್ತು?"

ಎಲ್ಲರ ಮುಖದಲ್ಲೂ ಮಂದಹಾಸ ಮಿನುಗಿ ಮಾಯವಾಯಿತು.

ರಮೇಶ್ ಆಪರೇಶನ್ ಮಾಡಿಸಿಕೊಳ್ಳಲು ಒಪ್ಪಿಗೆ ನೀಡಲು ಕಾರಣ ಬಹಳ ದಿನಗಳಿಂದಲೂ ನೋವು ನುಂಗಿದ್ದು. ಯಾವ ರೀತಿಯಿಂದಲೂ ಗುಣಪಡಿಸಿಕೊಳ್ಳಲು ಸಾಧ್ಯವಾಗದೇ ಬಳಲಿದ್ದ. ಜೊತೆಗೆ ಡಾ|| ಶಂಕರನ ಒತ್ತಾಸೆ ಮತ್ತು ಬಂಧು ಬಳಗದವರ ಒತ್ತಾಸೆ ಧೈರ್ಯದ ಹೊನಲನ್ನು ಹರಿಸಿತು ಎದೆಯಲ್ಲಿ.

ರಮೇಶ್ ಅಂದೇ ಆಸ್ಪತ್ರೆಗೆ ದಾಖಲಾದ. ಅತ್ಯಂತ ಸುಖೀ ಸೌಕರ್ಯವಿದ್ದ ಕೊಠಡಿಯು ಅವನಿಗಾಗಿ ಬಿಡುಗಡೆಯಾಯಿತು. ರಮೇಶನ ತಾಯಿ

ಮನೆಯ ಮೇಲ್ವಿಚಾರಣೆ ನೋಡುವುದರಿಂದ ರತ್ನಾಲಿಗೆ ಕೈತುಂಬಾ ಬಿಡುವು. ಆಸ್ಪತ್ರೆಯಲ್ಲಿ ಪತಿಯೊಡನೆ ಉಳಿದಳು. ಸಾಯಂಕಾಲದಲ್ಲಿ ತಾಯಿಯೊಂದಿಗೆ ಮಕ್ಕಳು ಬರುತ್ತಾರೆ. ಡಾ॥ ಶಂಕರನ ಮಕ್ಕಳೊಂದಿಗೆ ಕೂಡಿ ಅಂಗಳದ ತುಂಬಾ ಕುಣಿದು ನಲಿದು ಚೆಂಡಾಟದಲ್ಲಿ ಪಾಲ್ಗೊಳ್ಳುತ್ತಾರೆ. ಅಂತೆಯೇ ಸೌಭಾಗ್ಯ ರತ್ನಾಲಿಯೂ ಸಹ. ಮೊದಲಿನಿಂದ ಆತ್ಮೀಯ ಬಾಂಧವ್ಯ ಬೆಳೆಸಿ ಕೊಂಡವರು. ಆದ್ದರಿಂದ ಅದು ಆಸ್ಪತ್ರೆ ಎನಿಸುವುದೇ ಇಲ್ಲ.

೦ ೦ ೦ ೦

ಡಾ॥ ಶಂಕರ್‌ಗೆ ಆಸ್ಪತ್ರೆ-ಮನೆಗಳು ವಿಶಾಲವಾದ ಭೂಮಿಯಲ್ಲಿ ಒಂದೇ ಕಡೆ ಬೆಳೆದು ಬೀಡು ಬಿಡಲು ಕಾರಣ ಪಿತ್ರಾರ್ಜಿತವಾದ ಆಸ್ತಿ. ಡಾ॥ ಶಂಕರ ನಲ್ಲಿ ಅತೀವ ಶ್ರದ್ಧೆ ಮತ್ತು ದಕ್ಷತೆಗಳಿದ್ದುದರಿಂದ ಆಸ್ಪತ್ರೆ ನಿರಾತಂಕವಾಗಿ ಬೆಳೆದು ಉಚ್ಛ್ರಾಯ ಸ್ಥಿತಿಗೇರಿತು; ಹಲವಾರು ರೋಗಿಗಳಿಗೆ ಸುಖಾಶ್ರಯದ ನೆಲೆಯಾಗಿ.

ರಮೇಶನ ಶರೀರ ಪ್ರಕೃತಿಯನ್ನು ಹಲವು ಬಗೆಯ ಪರೀಕ್ಷಾ ಘಟಕ ಗಳಿಗೆ ಒಪ್ಪಿಸಿದ್ದಾಯ್ತು. ಎಲ್ಲಾ ಪರೀಕ್ಷೆಗಳ ಫಲಿತಾಂಶವೂ ಸಮರ್ಪಕವಾಗಿ ದ್ದರೂ ಮೈಯಲ್ಲಿ ಸ್ವಲ್ಪ ಜಾಂಡೀಸ್ ಇದ್ದುದರಿಂದ ಅದು ಪರಿಹಾರವಾಗುವ ವರೆಗೆ ಆಪರೇಶನ್ ಮುಂದೂಡಲ್ಪಟ್ಟಿತು. ಚಿಕಿತ್ಸೆ ನಡೆಯುತಿತ್ತು. ದೈಹಿಕ ವ್ಯಾಪಾರ ಸಮರ್ಪಕ ಸ್ಥಿತಿಗೆ ಬರುವ ತನಕ ನಿತ್ಯ ವಿರಾಮ. ಸ್ನೇಹಾನುರಾಗ ದಿಂದ ಬಿಡುವಿನ ಹೊತ್ತು ಕಳೆಯುತಿತ್ತು, ಗೆಳೆತನದ ಮಧ್ಯೆ ಸಾನಂದದಿಂದ.

ವಾರವೆರಡು ಉರುಳಿ ಹೋದುವು ಸರಾಗವಾಗಿ.

ಅಸ್ಪತ್ರೆಯಲ್ಲಿದ್ದುಕೊಂಡೇ ತನ್ನ ವ್ಯವಹಾರವನ್ನು ಮುಂದುವರಿಸಿದ ರಮೇಶ್. ಸೆಕ್ರೆಟರಿ ಬಂದು ಹೋಗುತಿದ್ದ. ಪತ್ರವ್ಯವಹಾರ ನಡೆಯುತಿತ್ತು. ಮಗಳು ಶಾಲಿನಿ ನಾಲ್ಕನೇ ಇಯತ್ತೆಯಲ್ಲಿ ಓದುತ್ತಾಳೆ. ಚಿಕ್ಕವನಾದ ಶೈಲೇಶ ನಿಗೆ ಇನ್ನೂ ನಾಲ್ಕು ವರ್ಷ. ಬೆಳಗಿನ ಹೊತ್ತು ನರ್ಸರಿ ಸ್ಕೂಲಿಗೆ ಹೋಗಿ ಬಂದರೆ ಮುಗಿಯಿತು. ತಾಯಿ ತಂದೆಗಳಿಗೆ ಸಾಕು ಎನಿಸುವಷ್ಟು ಪುಂಡತನ. ತುಂಟ ಮಾತುಗಳು. ಬಾಲಲೀಲೆಗಳಿಂದ ಕೂಡಿದ ಮೋಹಕ ರೂಪು ಎಲ್ಲ ರಿಗೂ ಅಚ್ಚುಮೆಚ್ಚು.

ಸಾಯಂಕಾಲದ ಹೊತ್ತು ತಾಯಿ ಬರುತ್ತಾಳೆ. ಆಫೀಸಿನ ಸಿಬ್ಬಂದಿ ಅಲ್ಲದೆ ಗೆಳೆಯ ವೃಂದವೂ ಬಂದು ಕೂಡುತ್ತದೆ. ಸಮಯ ಸರಾಗವಾಗಿ ಉರುಳುತ್ತದೆ. ಆಸ್ಪತ್ರೆಯಲ್ಲಿದ್ದರೂ ಮನಃಚಿತ್ತಗಳು ಕಲಕಲಮಯವಾದುದರಿಂದ ನೋವು ನಿಡಿಗಳ ಉಪಟಳವಿಲ್ಲ.

o o o o

ಶೈಲೇಶ ತಂದೆಯ ತೊಡೆಯ ಮೇಲೆ ಕುಳಿತು ಮುದ್ದು ಮುದ್ದಾದ ಮಾತುಗಳಿಂದ ಕೇಳಿದ "ಅಣ್ಣಾ! ಆಪರೇಷನ್ ಎಂದರೆ ಏನು?"

"ಹೊಟ್ಟೆ ಕೊಯ್ದು ಒಳಗಿನ ಹುಣ್ಣು ತೆಗೆಯುತ್ತಾರೆ."

"ನೋವಾಗುವುದಿಲ್ಲವೇ?"

"ಆಗುತ್ತೆ...ಸಹಿಸಿಕೊಳ್ಳಬೇಕು."

ಆಗ ಶಾಲಿನಿಯೆಂದಳು "ತಂಟೆ ಮಾಡಿದವರಿಗೆಲ್ಲಾ ಹೊಟ್ಟೆ ಕೊಯ್ಯುತ್ತಾರೆ ಡಾಕ್ಟರು."

"ಹಾಗಾದರೆ ಅಪ್ಪ ತಂಟೆ ಮಾಡಿದ್ದರೆ....?"

"ಹೌದು...!"

ಎಲ್ಲರ ಮುಖದಲ್ಲೂ ಎಳೆನಗು ಮೂಡಿತು.

"ಹಾಗಾದರೆ ನನ್ನ ತಂಟೆಕೋರ ಎನ್ನಬಾರದು. ಅಣ್ಣ ತಂಟೆ ಮಾಡಿದ ಮೇಲೆ ನಾನೇಕೆ ಮಾಡಬಾರದು?"

ಎಲ್ಲರೂ ನಕ್ಕುಬಿಟ್ಟರು. ಶೈಲೇಶ್ ಚಪ್ಪಾಳೆ ತಟ್ಟಿ ಕೇಕೆ ಹಾಕಿದ.

ರಾತ್ರಿಯೂಟ ಮುಗಿಸಿದ ಬಳಿಕ ಎಲ್ಲಾ ವಾರ್ಡುಗಳೂ ಕದ ಮುಚ್ಚಿಕೊಂಡುವು. ಮಾತಿನ ಮರ್ಮರ ಅಡಗಿತು. ಬಹುತೇಕ ದೀಪಗಳೂ ಆರಿದುವು. ಬಾಗಿಲನ್ನು ಭದ್ರಪಡಿಸಿ ಶಯ್ಯಾಪ್ರಾಂತದಲ್ಲಿ ಕುಳಿತು ರತ್ನಾಲಿ ನುಡಿದಳು,

"ಈಗೀಗ ಫ್ಯಾಕ್ಟರಿಯಲ್ಲಿ ಕೆಲಸ ನಿಧಾನವಾಗುತ್ತಿದೆ. ಯಾರಿಗೂ ಕೈತುಂಬ ಕೆಲಸ ಮಾಡುವಮನಸ್ಸೇ ಇಲ್ಲ. ಸುಮ್ಮನೇ ಕಾಲಹರಣ ಮಾಡಿ ತಿಂಗಳ ಕೊನೆಯಲ್ಲಿ ಪಗಾರಎಣಿಸುವ ಇಚ್ಛೆ. ಮಾತಾಡಿದರೆ ಒಗ್ಗಟ್ಟು–

ಯೂನಿಯನ್ ಈ ಗೋಳು. ನಾವು ಆದಷ್ಟು ಎಚ್ಚರಿಕೆ ವಹಿಸದಿದ್ದರೆ ಮುಂದೆ ಕಷ್ಟವೇ. ಈ ಸೋಮಾರಿತನಕ್ಕೆ ಮದ್ದೇನು?"

"ಈ ದೇಶದ ಬಡತನಕ್ಕೆ ಹೇಳಿ ಮಾಡಿಸಿದ ಜನ. ಇವರು ಹೀಗಿರುವುದರಿಂದಲೇ ರಾಷ್ಟ್ರದ ಪ್ರಗತಿ ಕುಂಠಿತ. ಸೋಮಾರಿತನ-ಅಸಡ್ಡೆ-ಅಶ್ರದ್ಧೆ ರಾಷ್ಟ್ರ ವ್ಯಾಪ್ತಿಯಾಗಿದೆ. ಸ್ವಾತಂತ್ರ್ಯಾನಂತರ ಜನ ಎಚ್ಚೆತ್ತುಕೊಳ್ಳಬೇಕಿತ್ತು. ಇದು ತುಂಬಾ ವಿಷಾದಕರ."

"ಈ ಜನಜಂಗುಳಿಯನ್ನು ಸುಧಾರಿಸಬೇಕಾದರೆ ಆಕರ್ಷಕ ಬಹುಮಾನಗಳನ್ನಿಡುವುದು; ಮೇ ದಿನಾಚರಣೆ ಆಚರಣೆಗೆ ತರುವುದು; ಇಂತಹ ಕೆಲವೊಂದು ಸುಧಾರಣೆಗಳನ್ನು ಮಾಡಿ ನಿವ್ವಳ ಲಾಭ ಬಂದಾಗ ವರ್ಷಾಂತ್ಯದಲ್ಲಿ ಉಡುಗೊರೆ ಕೊಟ್ಟು ಸಂತೋಷಪಡಿಸುವ ಕಾರ್ಯಕ್ರಮ ರೂಪಿಸುವುದು ಒಳ್ಳೆಯದು. ಆದರೆ, ರೌಡಿಯಿಜಂ ಇದೆಯೆಲ್ಲಾ ಅದೇ ಕಷ್ಟ. ಮಾತಾಡಿದರೆ ಕತ್ತಿ ಚೂರಿಗಳ ಸಂಸ್ಕೃತಿ ಭಾರತದ ಮುಖಕ್ಕೆ ಮಸಿ ಬಳಿಯುವ ಹೀನಾಚಾರ. ಸಾಕಪ್ಪಾ; ಸಾಕು. ಇದರಿಂದ ಪಾರಾಗುವ ಮಾರ್ಗವೇ ತೋರುತ್ತಿಲ್ಲ..." ಎಂದಳು ಅವಳು ಕಳಕಳಿಯಿಂದ.

"ಈ ನಾಗರಿಕ ಕಾಲಮಾನದಲ್ಲಿ ಭ್ರಾತೃತ್ವ ನಶಿಸಿರುವುದು ಶೋಚನೀಯ."

"ಅದೇ ಕಷ್ಟ....ಭಾರತದಾದ್ಯಂತ ನಮ್ಮ ಸಂಸ್ಕೃತಿ ದಿನೇದಿನೇ ನಶಿಸುತ್ತಿದೆ."

○ ○ ○ ○

ರತ್ನಾಲಿ ದೀಪ ನಂದಿಸಿ ಪಕ್ಕದ ಪಲ್ಲಂಕದ ಮೇಲೆ ಮಲಗಿದಳು.

ಸೊಳ್ಳೆ ಪರದೆಯ ಸುತ್ತ ಕುಂಯ್ ರಾಗಮಾಲೆ ಹರಿಸುತ್ತ ಹಾರಾಡುವ ಸೊಳ್ಳೆಗಳ ಹಿಂಡು ಜೋಗುಳಿಸುತ್ತವೆ. ಆಗಾಗ ನಾಯಿಗಳು ಬೊಗಳುವ ಸದ್ದು ಕೇಳಿಬರುತ್ತದೆ. ಅದಷ್ಟನ್ನು ಬದಿಗೊತ್ತಿದರೆ ಮತ್ತೆಲ್ಲವೂ ಮೂಕ ಮೌನಶಾಂತಿಯ ಅವತರಣವೇ.

ಮೃತ್ಯು ಮಾಧುರಿ-೧೬೫

...ಅದೇ ಫ್ಯಾಕ್ಟರಿ...ಅದೇ ಜನ. ಗದ್ದಲ–ಗಲಾಟೆ–ಸಂಪು. ಕಿವಿ ಗಡ ಚಿಕ್ಕುವಂತಹ ಕೂಗಾಟ. ರಮೇಶ್ ತಟ್ಟನೆ ಎದ್ದು ಶಾಲಿನಿಯ ಕೈ ಹಿಡಿದು ಕೊಂಡು ಹೊರಟುಬಿಟ್ಟ. ಹಿಂದಿನಿಂದ ರತ್ನಾಲಿ "ತಾಳಿ.......ತಾಳಿ ನಾನೂ ಬರುವೆ" ಎಂದು ಚೀರಿದಳು. ಆದರೆ, ಅವನು ಆಗಲೇ ಹೋಗಿಬಿಟ್ಟಿದ್ದಾನೆ!

"ತಾ....ಳೀ!"

ಆ ಕೂಡಲೇ ಎಚ್ಚೆತ್ತ ರಮೇಶ್ "ರತ್ನ...ರತ್ನಾ ಏನಾಯ್ತು...? ಏಕೆ ಕೂಗುತ್ತೀ?" ಎಂದು ಕೇಳಿದ. ರತ್ನಾಲಿ ಬಿರಿಬಿರಿ ಕಣ್ಣು ಬಿಟ್ಟು ನೋಡಿ ದಳು. ಕನಸಿನ ಚಿತ್ರ ಅಳಿಯಿತು. "ಅಯ್ಯೋ, ಹಾಳು ಕನಸು ಬಿಡಿ" ಎಂದಳು ಮೆಲುದನಿಯಲ್ಲಿ.

"ಏನಾಯ್ತು?"

"ಅದೇ ಲೇಬರ್ ಗಲಾಟೆ. ರಾತ್ರಿ ಮಲಗುವಾಗ ಮಾತಾಡಿದ್ದೇ ಕನಸಿ ನಲ್ಲಿ. ಏನಿಲ್ಲ ನೀವು ಮಲಗಿಕೊಳ್ಳಿ" ಎಂದು ಮಗ್ಗುಲಾಗಿ ಮಲಗಿದಳು ರತ್ನಾಲಿ, ಮತ್ತೆ ನಿದ್ದೆ ಬರಲಿಲ್ಲ.

ಎಂದಿನಂತೆಯೇ ಸುಪ್ರಭಾತವಾಗಿ ಹಕ್ಕಿಗಳು ಚಿಲಿಪಿಲಿಗುಟ್ಟಿದುವು.

ಇಂದು ಗುರುವಾರ. ರಮೇಶನ ಆಪರೇಶನ್ ಒಂಭತ್ತು ಗಂಟೆಗೆ. ರತ್ನ ಳಿಗೆ ಮನದಲ್ಲಿ ತಳಮಳವಿದ್ದರೂ ತೋರಗೊಡದೆ ಧೈರ್ಯದ ಸೋಗು ಹಾಕಿ ದ್ದಳು. ಬಂಧುಗಳು ಗೆಳೆಯರು ಬಂದು ಕಾದಿದ್ದರು. ಹನ್ನೊಂದರ ಹೊತ್ತಿಗೆ ಆಪರೇಶನ್ ಮುಗಿದು ಸಫಲವಾಯಿತು. ಒಮ್ಮೆಗೇ ಎಲ್ಲರ ಎದೆಯ ಭಾರವು ಇಳಿದು ಹಗುರವಾಗಿ ಉಸಿರಾಡಿತು.

ಮಧ್ಯಾಹ್ನದ ಹೊತ್ತಿಗೆ ರಮೇಶನನ್ನು ವಾರ್ಡಿಗೆ ಸ್ಥಳಾಂತರಿಸಿದರು. ಕಳೆದ ನಾಲ್ಕಾರು ವರ್ಷಗಳಿಂದ ಅನುಭವಿಸಿದ ನೋವಿನ ತೊಟ್ಟನ್ನು ಕಳ ಚಿದ ಸಂತಸ ಮನವನ್ನು ಅರಳಿಸಿತು. ಇಂದೆಲ್ಲಾ ಹಾಯಾಗಿ ನಿದ್ದೆ ಮಾಡೋಣ ಎಂಬಷ್ಟು ಸಮಾಧಾನ ರಮೇಶನಿಗೆ. ಮಿತ್ರರು ಬಂಧುಗಳು ಹೊರಗಡೆ ಉಳಿದಿದ್ದಾರೆ. ಒಳಗಡೆ ಸದ್ದಿನ ಸೊಲ್ಲಿಲ್ಲ. ತಣ್ಣಗೆ ಉರುಳುತ್ತಿದೆ ಹೊತ್ತು.

ಡಾ|| ಶಂಕರ್ ಬಂದು ಒಳಗಿನ ವ್ಯವಸ್ಥೆಯನ್ನು ಕಣ್ಣನೋಟದಿಂದ ಅಳೆಯುತ್ತ ಬಳಿಗೆ ಬಂದು ಕೇಳಿದ "ಹೇಗಿದ್ದೀ ರಮೇಶ್?"

"ಪರವಾಗಿಲ್ಲ...ನೋವಿದೆ. ಇಂದು ಇರಲೇಬೇಕಲ್ಲ. ತುಂಬ ಥ್ಯಾಂಕ್ಸ್ ಡಾಕ್ಟರ್."

"ಆಪರೇಶನ್ ಮಾಡಿದ್ದು ಡಾ|| ಹೆಗ್ಗಡೆ. ಬಾಲ್ಯದಿಂದ ಬೆಳೆದ ಸ್ನೇಹ ಸಂಬಂಧವೇನಾದರೂ ತಬ್ಬಿಬ್ಬು ಮಾಡೀತು ಎಂಬ ಯೋಚನೆ ಬಂದುದರಿಂದ ಮನಸ್ಸು ಅಳುಕಿತು. ಅದಕ್ಕೇ ಹೆಗ್ಗಡೆಗೆ ಬಿಟ್ಟುಕೊಟ್ಟು ಅವನಿಗೆ ನಾನು ಸಹಾಯಕನಾಗಿ ನಿಂತೆ." ಮುಗುಳು ನಕ್ಕ ಶಂಕರ್.

ರಮೇಶನ ತುಟಿಗಳಲ್ಲೂ ಪ್ರತಿಯಾಗಿ ಮುಗುಳು ನಗೆ ಮೂಡಿತು. ಎರಡೂ ಕೈಗಳು ಆತ್ಮೀಯತೆಯಿಂದ ಬಿಗಿ ಹಿಡಿದುಕೊಂಡವು.

ಡಾ|| ಹೆಗ್ಗಡೆ ಮತ್ತು ಅಸಿಸ್ಟೆಂಟ್‌ಗಳು ಆಗಮಿಸಿದರು. ಎಲ್ಲರನ್ನೂ ನೋಡಿ ಮುಗುಳು ನಗೆಯ ಸ್ವಾಗತ ನೀಡಿದ ರಮೇಶ.

o o o o

ಮೂರು ನಾಲ್ಕು ದಿನಗಳು ಸರಾಗವಾಗಿ ಉರುಳಿದುವು. ರಮೇಶ್ ಎದ್ದು ಶೌಚಾಲಯಕ್ಕೆ ಹೋಗಿ ಬರುತಿದ್ದ. 'ಡ್ರಿಪ್' ತೆಗೆದುದರಿಂದ ಎಷ್ಟೋ ಭಾರ ಹರಿಯಿತು. ಶಾಲಿನಿ ಅಂದಿನಿಂದಲೂ ಶಾಲೆಗೆ ಚಕ್ಕರ್ ಕೊಟ್ಟಿದ್ದಾಳೆ. ಪ್ರೀತಿ–ವಿಶ್ವಾಸ, ಆಸೆ-ಆಕಾಂಕ್ಷೆಗಳ ಅತಿರೇಕದ ಬೇಡಿಕೆ ಮಕ್ಕಳ ರಜೆಗೆ ಅನುಮತಿ ದೊರಕಿಸಿತು. ಹಗಲೆಲ್ಲಾ ಆಸ್ಪತ್ರೆಯಲ್ಲಿದ್ದು ರಾತ್ರಿ ಅಜ್ಜಿಯೊಂದಿಗೆ ಮನೆಗೆ ಹೋಗುತಿದ್ದರು ಮಕ್ಕಳು.

"ಈಗ ಅಣ್ಣ ಚೆನ್ನಾಗಿದ್ದಾರೆ. ನಾಳೆಯಿಂದ ನೀನು ಶಾಲೆಗೆ ಹೋಗಬೇಕು ತಿಳಿಯಿತೇ?" ಎಂದಳು ರತ್ನಾಲಿ ಮಗಳನ್ನು ಕುರಿತು.

"ಆಗಲಿ, ನಾಳೆ ಒಂದಿನ ಹೋಗಿ ಬಂದರೆ ನಾಡಿದ್ದು ಶನಿವಾರ ಭಾನುವಾರ ಬಂದುಬಿಡುತ್ತೆ. ಮತ್ತೆರಡು ದಿನ ರಜ" ಕಣ್ಣರಳಿಸಿದಳು ಶಾಲಿನಿ.

ಮುದ್ದು ಮುಖ ಅರಳಿ ಮಂದಾರ ಹೂವಾಗಿ ಎಳೆಯ ಮನಸ್ಸು ನಿಗಿನಿಗಿ ನಲಿಯಿತು. ಕಣ್ಣುಗಳಲ್ಲಿ ಆಸೆಯ ಮಿಂಚು ಹೊಳೆಯಿತು ಫಳಫಳನೆ.

ತಾಯಿ ಮಗಳ ಕೆನ್ನೆಯನ್ನು ಮೃದುವಾಗಿ ಮುದ್ದಿಟ್ಟುಕೊಂಡಳು. ಹೃದ್ಗಡಲು ಉಕ್ಕೇರಿ ಪ್ರೇಮರಸವಾಗಿ ಹರಿಯಿತು, ಮಗುವಿನ ಮೇಲೆ.

ರತ್ನಾಲಿ ಪ್ರಾತಃರ್ವಿಧಿಯನ್ನು ಪೂರೈಸಿದ ರಮೇಶನಿಗೆ ಹಾರ್ಲಿಕ್ಸ್ ಕೊಟ್ಟು ಮನೆಗೆ ಹೊರಟಳು ತಿಂಡಿ ತರಲು. ಕಾರು ಅಣಿಯಾಗಿತ್ತು ಕೆಲವೇ ನಿಮಿಷಗಳಲ್ಲಿ ಕಾರು ಮನೆಯನ್ನು ಮುಟ್ಟಿ ಪೋರ್ಟಿಕೊವಲ್ಲಿ ನಿಂತಿತು.

"ರಾತ್ರಿಯೆಲ್ಲಾ ಹೊಟ್ಟೆನೋವಿನಿಂದ ನರಳಿದಳು ಶಾಲಿನಿ. ನಿನ್ನೆ ಮೂರು ಲಡ್ಡು ತಿಂದಿದ್ದಾಳೆ. ಬೇಡವೆಂದರೂ ಕೇಳಲಿಲ್ಲ" ವಿಷಯುವನ್ನು ವರದಿ ಮಾಡಿದಳು ತಾಯಿ.

ರತ್ನಾಲಿ ಒಳಹೋಗಿ ನೋಡಿದರೆ ಸೊಗಸಾದ ನಿದ್ದೆ ಶಾಲಿನಿಗೆ. ಅವಳು ಎಚ್ಚರವಾಗುವವರೆಗೆ ಆಸ್ಪತ್ರೆಗೆ ಬೇಕುಬೇಕಾದುದನ್ನೆಲ್ಲಾ ತೆಗೆದುಕೊಂಡು ಮನೆಗೆಲಸದಲ್ಲಿ ಅಷ್ಟಿಷ್ಟು ಕೈಯಾಡಿ, ಆಳುಗಳಿಗೆ ಹೇಳಬೇಕಾದುದನ್ನು ಹೇಳಿ ತಾಯಿಯೊಂದಿಗೆ ತಿಂಡಿ ಮುಗಿಸಿದಾಗಲೇ ಶಾಲಿನಿ ಎದ್ದು ಬಂದಳು. ಮುಖ ಬಿಂಬದಲ್ಲಿ ಆಲಸ್ಯ–ನೋವುಗಳ ಮುದ್ರೆ ಮೂಡಿತ್ತು. ನಳಿದೋಳುಗಳಿಂದ ತಾಯಿಯನ್ನು ತಬ್ಬಿದಳು ಮಾತಾಡಲಿಲ್ಲ.

"ರಾತ್ರಿ ಏನಾಯ್ತು ಚಿನ್ನಾ?"

"ಹೊಟ್ಟೆನೋವು...ಊ ಊ."

"ಈಗ ಇದೆಯೇ?"

"ಹೂ...ಊ"

"ಬೇಗ ಮುಖ ತೊಳೆ. ಈಗಲೇ ಆಸ್ಪತ್ರೆಗೆ ಹೋಗೋಣ."

ಶೈಲೇಶ್ ತಿಂಡಿ ತಿನ್ನದೆ ಮೊಂಡು ಹೂಡಿದ್ದ.

"ಬಿಡು, ಹಸಿವಾದಾಗ ಆಸ್ಪತ್ರೆಯಲ್ಲೇ ತಿನ್ನಬಹುದು" ಎಂದಳು ರತ್ನಾಲಿ.

ಮೊಮ್ಮಕ್ಕಳೊಂದಿಗೆ ಅಜ್ಜಿಯೂ ಹೊರಟಳು.

ರಮೇಶ್ ಶಾಲಿನಿಯನ್ನು ನೋಡಿ "ಈ ದಿನ ಶಾಲೆಗೆ ಹೋಗಲಿಲ್ಲವೇ?" ಎಂದ, ಕಣ್ಣುಗಳಲ್ಲಿ ಅಚ್ಚರಿಯ ನೆರೆ ಉಕ್ಕಿತು.

"ರಾತ್ರಿಯಿಂದ ಹೊಟ್ಟೆನೋವಂತೆ. ಡಾಕ್ಟರಿಗೆ ತೋರಿಸಲೆಂದು ಕರೆ ತಂದೆ. ಇನ್ನು ಸೋಮವಾರವೇ ಸ್ಕೂಲು."

"ಬಾ ಮಗೂ, ಮುಖವೆಲ್ಲಾ ಬಾಡಿದೆ. ತುಂಬಾ ನೋವೆ?"

"ಹೌದು....ಅಣ್ಣಾ."

ಶಾಲಿನಿ ಹಾಸಿಗೆಯ ಬದಿಯಲ್ಲಿ ಕುಳಿತುಕೊಂಡಳು. ತಂದೆಯೊಡನೆ ಮಕ್ಕಳೂ ಲಘು ಫಲಾಹಾರ ಮಾಡಿದರು. ಸಾನಂದದಿಂದ ಮಾತುಕತೆಯಲ್ಲಿ ಹೊತ್ತು ಕಳೆಯುತ್ತಿರುವಾಗಲೇ ಡಾ|| ಶಂಕರ್ ಆಗಮಿಸಿದ.

"ನಿನಗೆ ಇನ್ನೊಂದು ಪೇಷೆಂಟ್."

"ಯಾರಪ್ಪಾ, ಅದು? ಎಲ್ಲರೂ ಚೆನ್ನಾಗೇ ಇದ್ದಾರಲ್ಲಾ?"

"ಶಾಲಿನಿಗೆ ರಾತ್ರಿಯೆಲ್ಲಾ ಹೊಟ್ಟೆನೋವಂತೆ........ಸ್ವಲ್ಪ ನೋಡಿ ಬಿಡಪ್ಪಾ" ಎಂದ ರಮೇಶ ಗೆಳೆಯನನ್ನು ಕುರಿತು.

ಅಲ್ಲೇ ಪಕ್ಕದ ಮಂಚದ ಮೇಲೆ ಮಲಗಿಸಿಕೊಂಡು ಹೊಟ್ಟೆಯನ್ನು ಪರೀಕ್ಷಿಸಿದ ಬಳಿಕ ಅವನೆಂದ, "ನಿನ್ನೆ ಏನು ತಿಂದೆ ಹೇಳು ಮುದ್ದು ಮರಿ!"

"ಅಂಕಲ್ ಅವಳು ನಿನ್ನೆ ಮೂರು ಲಡ್ಡು ತಿಂದಿದ್ದಾಳೆ!" ಶೈಲೇಶ್ ಕೇಕೆ ಹಾಕಿದ "ಅದಕ್ಕೇ ಅವಳಿಗೆ ಹೊಟ್ಟೆನೋವು."

"ಹೌದೇನಮ್ಮಾ?" ಕೆನ್ನೆಯನ್ನು ಮುದ್ದಿಸಿದ ಶಂಕರ್.

ಅವಳು 'ಹೌದು' ಎಂಬಂತೆ ತಲೆಯಾಡಿಸಿದಳು. ಮುಖಬಿಂಬ ಮ್ಲಾನ ವಾಗಿತ್ತು. ಮುದ್ದು ಮಾತುಗಳಲ್ಲಿ ನುಡಿದಳು "ಅಂಕಲ್, ರಾತ್ರಿಯೆಲ್ಲಾ ತುಂಬಾ ಇತ್ತು. ಈಗ ಕಡಿಮೆಯಿದೆ. ಮತ್ತೆ ನೀವೇನೂ ನೋವು ಮಾಡ ಬೇಡಿ ನನಗೆ."

"ಇಲ್ಲಮ್ಮಾ."

"ಅಣ್ಣಂಗೆ ಕೊಯ್ದಂತೆ ನನಗೂ ಕೊಯ್ಯಬೇಡಿ."

"ಛೆ:! ಛೇ! ಇಲ್ಲವೇ ಇಲ್ಲ."

ಅವಳನ್ನು ಎದೆಯ ಮೇಲೆ ಎತ್ತಿಕೊಂಡು ಮುದ್ದಿಸಿ ಮುದ್ದು ಕೊಟ್ಟು ಹಾಸ್ಯದ ಧಾಟಿಯಲ್ಲಿ ನುಡಿದ "ನನ್ನ ಮಗ ಶ್ರೀಶನನ್ನು ನಿಮ್ಮಮ್ಮನಿಗೆ ಕೊಟ್ಟು ನಿನ್ನನ್ನು ನಾನು ಇಟ್ಟುಕೊಳ್ಳುವೆ ಆಯ್ತೇ?"

"ನೋ....ನೋ... ಅಂಕಲ್."

"ಹಾಗಾದರೆ ನನಗೊಂದು ಸೀ ಮುತ್ತು" ಕೆನ್ನೆ ಒಡ್ಡಿದ ಶಂಕರ್.

ಅವಳು ಹೂ ಮುತ್ತು ಕೊಟ್ಟಳು. ಆನಂದದಿಂದ ಮುಖಬಿಂಬ ಅರಳಿತು.

ಮಾತ್ರೆಯನ್ನು ತಿಂದನಂತರ ನೋವು ಅಡಗಿದುದರಿಂದ ಶಾಲಿನಿಗೆ ಲವಲವಿಕೆ ಮೂಡಿತು; ಎಂದಿನಂತೆಯೇ ಶೈಲೇಶನೊಂದಿಗೆ ಗೋಲಿ ಆಟದಲ್ಲಿ ಕಳೆಯಿತು ಹೊತ್ತು.

೦ ೦ ೦ ೦

ಸೌಭಾಗ್ಯ ಬಿಡುವಿನ ವೇಳೆಯಲ್ಲಿ ಬಂದು ಅಲ್ಲಿಯೇ ಕೂಡುತ್ತಾಳೆ. ಅವಳಿಗೆ ಮೂರು ಗಂಡುಮಕ್ಕಳಾದುದರಿಂದ ಶಾಲಿನಿಯಲ್ಲಿ ಅಪಾರವಾದ ಪ್ರೀತಿ-ವಾತ್ಸಲ್ಯ. ಅವಳನ್ನು ಎಷ್ಟು ಮಾತಾಡಿಸಿದರೂ ಸಾಲದು; ಎಷ್ಟು ಮುದ್ದಿಸಿದರೂ ಪೂರೈಸದು. ಅವಳಿಗೂ ಆಂಟಿಯಲ್ಲಿ ಅನುಪಮ ಪ್ರೀತಿ, ಅನನ್ಯ ವಾತ್ಸಲ್ಯ. ಇವರೆಲ್ಲ ಆಸ್ಪತ್ರೆಯಲ್ಲಿ ಇರುತ್ತಿದ್ದರೆ ಅವಳಿರುತಿದ್ದುದು ಡಾಕ್ಟರ ಮನೆಯಲ್ಲಿ. ಅಲ್ಲಿದೂ ಇಲ್ಲಿಗೂ ಓಡಾಟವೇ ಓಡಾಟ. ಮುದ್ದು ಮಾತುಗಳ ಸುರಿಮಳೆ. ಆನಂದವನ್ನೇ ಆನಂದಿತಗೊಳಿಸುವಂತಹ ಮನಮೋಹಕ ರೂಪು.

ಶಾಲಿನಿ ಪುನಃ ಹೊಟ್ಟೆನೋವು ಎಂದಾಗ ಶಂಕರ್ ಬಂದು ನೋಡಿ ಒಂದು ಚಿಕ್ಕ ಮಾತ್ರೆ ಕೊಟ್ಟು ಮಲಗಿಸಿ ಹೋದ. ನೋವು ಶಮನವಾಗಲಿಲ್ಲ ಮತ್ತೆ ಡಾಕ್ಟರಿಗೆ ಕರೆ ಹೋಯಿತು.

ಅಂದು ಆಪರೇಶನ್ ಡೇ.

ನಾಲ್ಕೈದು ಆಪರೇಶನ್ ಪಟ್ಟಿಯಲ್ಲಿದ್ದುವು. ಡಾ|| ಶಂಕರ್ ಶಾಲಿನಿ
ಗಾಗಿ ಒಮ್ಮೆ ಹೊರಬಂದು ಒಳ ಹೋಗಿದ್ದ. ಮಗುವಿಗೆ ಕಾಲಪ್ರವೃತ್ತಿ ಆಗಿರ
ಲಿಲ್ಲವಾದ್ದರಿಂದ ಒಂದು ಸಣ್ಣ ಎನಿಮಾ ಕೊಟ್ಟುಬಿಡಿ ಎಂದಿದ್ದ. ಮಗು
ವನ್ನು ಆಪರೇಷನ್ ಥಿಯೇಟರಿನ ಮಗ್ಗುಲಿನ ಕೋಣೆಗೆ ಕರೆದೊಯ್ದು
ಎನಿಮಾ ಕೊಟ್ಟರು. ಲೇಡಿ ಡಾಕ್ಟರಿದ್ದಾರೆ; ನರ್ಸ್ ಇದ್ದಾಳೆ. ತಾಯಿ
ಇದ್ದಾಳೆ. ಎಲ್ಲರ ಕಣ್ಮುಂದೆಯೇ ಎನಿಮಾ ಕೊಟ್ಟ ಪರಿಣಾಮವಾಗಿ ಅನಾ
ಹುತ ನಡೆದು ಹೋಯಿತು.

ಶಾಲಿನಿಯ ಪ್ರಾಣ ನಿಮಿಷಾರ್ಧದಲ್ಲಿ ಹಾರಿ ಹೋಯಿತು ಚಿಕಿತ್ಸೆಗೆ
ಕಿಂಚಿತ್ ಅವಕಾಶ ಕೊಡದೆ.

ಡಾ|| ಶಂಕರ್ ಥಿಯೇಟರ್ ಬಿಟ್ಟು ಧಾವಿಸಿ ಬಂದ. ಆತ್ಮೀಯರೆಲ್ಲ
ಸುತ್ತಮುತ್ತ ಮುತ್ತಿದರು. ಯಾರಿದ್ದರೇನು? ಶಾಲಿನಿ ಸ್ವರ್ಗ ಧಾಮವನ್ನು
ಆಗಲೇ ಸೇರಿದ್ದಾಳೆ.

ಒಮ್ಮೆಲೇ ದುಃಖದ ಕೋಡಿ ಹರಿಯಿತು.

ಆದರೆ, ರಮೇಶ್‌ಗೆ ಆಪರೇಷನ್ ಆಗಿ ಆರನೆಯ ದಿನ ಇನ್ನೂ ಹೊಲಿಗೆ
ಬಿಚ್ಚಿಲ್ಲ. ಅವನಿಗೆ ಸುದ್ದಿ ಮುಟ್ಟಿದರೆ ಮತ್ತೊಂದು ಅನಾಹುತವಾಗುವುದು
ದಿಟ. ಮುಚ್ಚಿಡುವುದೂ ಸಹ ಸಾಮಾನ್ಯವಲ್ಲ. ಡಾ|| ಶಂಕರನೇ ರತ್ನಾಲಿ
ಯೊಂದಿಗಿದ್ದು ಶವವನ್ನು ಮನೆಗೆ ಸಾಗಿಸಿದ. ತನ್ನ ಸಿಬ್ಬಂದಿಗೆ ರಮೇಶನಿಗೆ
ಸುದ್ದಿ ಬಿಡಕೂಡದೆಂದು ಕಟ್ಟಪ್ಪಣೆ ಮಾಡಿದ್ದ. ಮಗುವಿಗೆ ಎನಿಮಾ ಕೊಡ
ಬಾರದಿತ್ತು, ಎಂದು ಕಂಬನಿ ಮಿಡಿದ. ಕಣ್ಣುಗಳು ಮತ್ತೆ ಮತ್ತೆ
ತೊಯ್ದುವು. ಕೈ ಮಿಂಚಿದ ಕಾರ್ಯ. ಮಗುವನ್ನು ಕೈಯ್ಯಾರ ಕೊಂದಂ
ತಾಯ್ತು. ರಮೇಶನಿಗೆ ಏನೆಂದು ಹೇಳಲಿ? ಎಂದು ತನ್ನೊಳಗೇ ಅಗಾಧವಾದ
ಚಿಂತೆಗೊಳಗಾದ. 'ಅಂಕಲ್-ಆಂಟೀ' ಎಂದು ಕರೆಯುತಿದ್ದ ಮೃದು ಮಧುರ
ದನಿ ಕಿವಿಗಳಲ್ಲಿ ಮೊರೆಯುತ್ತಲೇ ಇದೆ. ತಾಳಲಾರ-ತಳ್ಳಿಹಾಕಲಾರ,
ಜೀವಶ್ಶವವಾದ ಡಾ|| ಶಂಕರ್.

o o o o

ಆ ದಿನವೆಲ್ಲಾ ರಮೇಶ್ ಶಾಲಿನಿಯೆಲ್ಲಿ ? ರತ್ನ ಎಲ್ಲಿ ? ಯಾರೂ ಬರಲಿಲ್ಲ ವಲ್ಲಾ ? ಎಂದು ಕೇಳುತ್ತಲೇ ಇದ್ದ. ಹಗಲೆಲ್ಲಾ ತಡೆಹಿಡಿದರೂ ಸಂಜೆಯ ಬಳಿಕ ಹೇಳದೆ ವಿಧಿಯಿರಲಿಲ್ಲ. ಹೇಳಲಾರದೇ ಹೇಳಿದ "ರಮೇಶ್ ಕ್ಷಮಿಸು. ಆಗಬಾರದುದು ಆಗಿದೆ. ದಯವಿಟ್ಟು ಮನಸ್ಸಿಗೆ ಹಚ್ಚಿಕೊಳ್ಳಬೇಡ" ಎಂದು ಬೇಡಿಕೊಂಡನಂತರ ವಿಷಯವನ್ನು ಮುಂದಿಟ್ಟ. ದುಃಖದ ಕೋಡಿ ಹರಿಯಿತು.

ಮಗುವಿನ ಶವವನ್ನು ಮಣ್ಣು ಮಾಡುವ ಮುನ್ನ ತಂದು ತೋರಿಸಿದ್ದೂ ಆಯಿತು. ಆ ತಣ್ಣನೆಯ ಮುಖವನ್ನು ಮುದ್ದಿಟ್ಟು ಕಂಬನಿ ಕರೆದ ರಮೇಶ. ಪ್ರಾಣ ಕುಂಡಲಿನಿ ಹೌಹಾರಿ ಮಿಡಿಯಿತು ಈಗಲೀಗ ಸಿಡಿಯುವಂತೆ.

० ० ० ०

ರಮೇಶನ ಅಶಕ್ತ ಶರೀರ ತಾಳಲಾರದಾಯಿತೇನೋ......ಮೂರ್ಛೆ ಹೋದ. ಹೃದಯ ಆಯ ತಪ್ಪಿ ಮಿಡಿಯ ಹತ್ತಿತು. ಎಲ್ಲಾ ಡಾಕ್ಟರುಗಳೂ ಅಲ್ಲಿಯೇ ಸುತ್ತಿಕೊಂಡರು. ಕೈಲಾದ ಪ್ರಯತ್ನ ನಡೆಯುತ್ತಿದೆ. ಹೊರಗಿನ ಹಿರಿಯ ವೈದ್ಯರುಗಳೂ ಕೂಡಿಕೊಂಡಿದ್ದಾರೆ. ಚಿಕಿತ್ಸೆಗೆ ಹತ್ತೂ ಕೈಗಳೂ ಸಹಾಯ ನೀಡುತ್ತಿವೆ. ಉಸಿರನ್ನು ಬಿಗಿ ಹಿಡಿದು ಚಿಕಿತ್ಸೆ ನಡೆಯುತ್ತಿದೆ ಗಂಭೀರ ಗತಿಯಲ್ಲಿ.

ಆದರೆ........

ಮತ್ತೆ ಮೂರು ದಿನಗಳು ನಿದ್ದೆಯ ಮಂಪರದಲ್ಲೇ ಇರಿಸಿದರು ಅವನನ್ನು. ಆದರೂ ಹೃದಯ ಸ್ಥಿಮಿತಕ್ಕೆ ಬರಲಿಲ್ಲ. ರಕ್ತದ ಒತ್ತಡ ಏರುಪೇರಾಗುತಿತ್ತು. ಚಿಕಿತ್ಸೆಗೆ ಸರಿಯಾದ ಪರಿಣಾಮವನ್ನು ತೋರಿಸುತ್ತಲಿಲ್ಲ, ಶರೀರ ಪ್ರಕೃತಿ.

ಡಾ|| ಶಂಕರ್ ಭೂಮಿಗೆ ಇಳಿದು ಹೋದ. ಸಧ್ಯ, ತಾನು ಡಾಕ್ಟರೆಂಬುದೂ ಮರೆತು ಹೋಯಿತು. ದೈಹಿಕ ಸ್ಥಿತಿಯು ಹದಗೆಡುವಷ್ಟು ಮಾನಸಿಕ ಕ್ಷೋಭೆ....ನಾನು ಎಂತಹ ಕಷ್ಟಕ್ಕೆ ಸಿಕ್ಕಿದೆ ಎಂದು ತನ್ನೊಳಗೇ ತಳಮಳಿಸಿದ, ಮನಃಪ್ರಾಣಗಳು ಮೌನವಾಗಿ ರೋದಿಸಿದುವು.

ಮಡದಿ ಹಲವಾರು ದೇವರಿಗೆ ಹರಕೆ ಹೊತ್ತಳು.

ತಾಯಿ ಸುಭ್ರಮಣ್ಯ ದೇವಸ್ಥಾನದಲ್ಲಿ ಮೃತ್ಯುಂಜಯ ವ್ರತ ಹಿಡಿಸಿದಳು. ಎದೆಯ ಹಕ್ಕಿ ನೂರಾರು ದೇವತೆಗಳಿಗೆ ಹರಕೆ ಹೊತ್ತಿತು. ಕಂಬನಿಯ ಕೋಡಿ ಎಣೆಯಿಲ್ಲದೆ ಹರಿಯುತ್ತಿದೆ. ಮುಗಿದ ಕೈ ಇಳಿಸಲಿಲ್ಲ. ಹಗಲಿರುಳು ಧ್ಯಾನ ಪೂಜೆ ವ್ರತಗಳು ಏಕಪ್ರಕಾರವಾಗಿ ನಡೆದುವು.

ಮರುದಿನ ಎಚ್ಚರಗೊಂಡಾಗ ರಮೇಶ್ ಸ್ವಲ್ಪ ಚೇತರಿಸಿಕೊಂಡಿದ್ದ. ತನ್ನನ್ನು ತಾನು ಸಾವರಿಸಿಕೊಳ್ಳಲು ಬಹಳವಾಗಿ ಪ್ರಯತ್ನಿಸಿ ಸಫಲನಾಗಿದ್ದ. ಬಹಳ ಕಷ್ಟದಿಂದ ಕೆಲವು ಮಾತಾಡಿ ಧೈರ್ಯ ಪ್ರದರ್ಶನ ಮಾಡಿದ. ಕಣ್ಣುಗಳು ತೊಯ್ದರೂ ತುಟಿಗಳಲ್ಲಿ ನೀರಸ ದನಿ ಹೊಮ್ಮುತ್ತದೆ. ಸ್ನೇಹ–ಬಂಧು–ಜೀವ ವಲಯದಲ್ಲಿ ಆಗಿ ಹೋದ ಅನಾಹುತ ಸರಿಪಡಿಸುವಂತಾದ್ದಲ್ಲ. ಹಾಗೆಂದು ಸುಲಭದಲ್ಲಿ ಕಳೆದುಕೊಳ್ಳುವಂತಾದ್ದೂ ಅಲ್ಲ. "ಡಾಕ್ಟರ್ ಅಂಕಲ್-ಡಾಕ್ಟರ್ ಅಂಕಲ್" ಎಂದು ತೊಡೆಯನ್ನೇರುತಿದ್ದ ಜೀವನ ಕುಸುಮದ ತೊಟ್ಟು ಕಳೆಯಲು ಕಾರಣ ವೈದ್ಯಕೀಯ ಅಚಾತುರ್ಯ...ಎಂದು ಮಾನಸ ಪಕ್ಷಿ ಎಡೆಬಿಡದೆ ಚೀರುತ್ತಲೇ ಇರುತ್ತದೆ. ಅದನ್ನು ತಳ್ಳಿ ಹಾಕುವುದೇ ಅಸಾಧ್ಯವಾದ ಸಂಕಟ...ಡಾ|| ಶಂಕರ್ ಆತ್ಮೀಯನಾಗಿ....ಹಾ !

ತಾಯಿ-ರತ್ನಾಲಿ ಬಳಿಯಲ್ಲೇ ಇದ್ದರೂ ಪರಸ್ಪರ ತುಟಿಗಳು ಬಿರಿಯವು. ಸ್ಮಶಾಣ ಮೌನ ಮುದ್ರೆ ಮುಖದ ಮೇಲೆ. ಶೈಲೇಶ್-ಏನೊಂದೂ ಅರಿಯದ ಶೈಲೇಶ್ "ನನಗೆ ಆಟವಾಡಲು ಶಾಲಿನಿ ಬೇಕು. ಎಲ್ಲಿದ್ದಾಳೆ?" ಎಂದು ಕೇಳುತ್ತಲೇ ಇರುವ. ಹಠ ಹಿಡಿದು ಅಳುವ. ಅವನಿಗೆ ತಿಳಿಯ ಹೇಳುವುದೂ ಕಷ್ಟ–ಸುಧಾರಿಸುವುದೂ ಕಷ್ಟ. ಅಂದಿನಿಂದ ಸೌಭಾಗ್ಯ ರತ್ನಾಲಿಯ ಬಳಿಯೇ ಇದ್ದಾಳೆ. ಯಾರಿದ್ದರೂ ನಷ್ಟವನ್ನು ತುಂಬಿಕೊಡಲಾರರು. ಡಾ|| ಶಂಕರ್ ಮೌನ ಭಾರದಿಂದ ಕೆಲಸ ನಿರ್ವಹಿಸುವ. ಯಾಂತ್ರಿಕವಾಗಿ ನಡೆಯುತ್ತದೆ ಚಲನಮಯ ಶರೀರ. ಸಂಕಟವೇ ಮೈವೆತ್ತು ಬಂದಂತಹ ಮಾನಸಿಕ ಸ್ಥಿತಿಯನ್ನು ಎಂತಹ ಮೂರ್ಖನೂ ಅರಿತುಕೊಳ್ಳಬಹುದಾದ ಚಿತ್ರ.

ಇಂದು, ರಮೇಶನ ಆಪರೇಷನ್ನಿನ ಹೊಲಿಗೆಗಳಲ್ಲಿ ಕೆಲವನ್ನು ತೆಗೆಯಲಾಯ್ತು. ಗಾಯ ಮಾಗುತ್ತ ಬಂದಿದೆ. ಆದರೂ ಇನ್ನೂ ಕೆಲವು ದಿನ ಇದ್ದು

ಹೋಗದೆ ವಿಧಿಯಿಲ್ಲದಷ್ಟು ನಿತ್ರಾಣ. ಒಳ ಹೊರಗೆ ತಿರುಗಾಡಲೂ ಆರ. ಮಾತುಕತೆಯಲ್ಲೂ ತೊಡಗಲಾರ. ದಿನವೆಲ್ಲಾ ರುದ್ರಮೌನ ರಾಜ್ಯವಾಳುತ್ತದೆ. ಬಂಧುಗಳು ಎಡೆಬಿಡದೆ ಕಾದಿದ್ದು ಎಲ್ಲ ರೀತಿಯಿಂದಲೂ ಧೈರ್ಯದ ಹೊನಲನ್ನು ಹೃದಯ ಕಲಸಕ್ಕೆ ಹರಿಸುತ್ತಲೇ ಇದ್ದಾರೆ.

ಮತ್ತೆರಡು ದಿನಗಳು ಸಂದುವು.

ಗಾಯದಲ್ಲಿ ಉಳಿಸಿರ್ದ ಮತ್ತೆ ಕೆಲವು ಹೊಲಿಗೆಗಳನ್ನು ತೆಗೆದು ಬ್ಯಾಂಡೇಜ್ ಸುತ್ತಿದ ಡಾ|| ಶಂಕರ್. ದೇಹಸ್ಥಿತಿ ಸ್ವಲ್ಪ ಸುಧಾರಿಸಿತ್ತು. ಒಂದೆರಡು ದಿನಗಳಲ್ಲಿ ಮನೆಗೆ ಹಿಂದಿರುಗಿಸುವ ಯೋಚನೆ ಡಾ|| ಶಂಕರನಿಗೆ.

ಅಂದು ರಾತ್ರಿ ಹನ್ನೊಂದು ಗಂಟೆಯುವರೆಗೂ ವಾರ್ಡಿನಲ್ಲಿದ್ದು ನಂತರ ಮನೆಗೆ ಹಿಮ್ಮರಳಿದ ಡಾ|| ಶಂಕರ್.

ವಾರ್ಡಿಗೆ ಹೊಂದಿಕೊಂಡ ಅತಿಥಿಯರ ಕೊಠಡಿಯಲ್ಲಿ ತಾಯಿ ಮೊಮ್ಮಗನೊಂದಿಗೆ ಪವಡಿಸುತ್ತಾಳೆ. ಪಕ್ಕದ ಮಂಚದಲ್ಲಿ ರತ್ನಾಲಿಯ ಶಯನ. ಕೊಠಡಿಯ ದೀಪ ನಂದಿದಾಗ ಗಡಿಯಾರದ ಮುಳ್ಳು ಹನ್ನೊಂದರ ಅಂಚನ್ನು ದಾಟಿಯಾಗಿತ್ತು. ಎಲ್ಲಾ ಸಾಲಾಗಿನ ವಾರ್ಡುಗಳೂ ದೀಪಗಳನ್ನು ನಂದಿಸಿ ಗಾಢ ನಿದ್ದೆಯಲ್ಲಿ ಮೈಮರೆತಿವೆ. ನರ್ಸ್‌ಗಳೂ, ವಾರ್ಡ್ ಬಾಯ್‌ಗಳೂ ತಮ್ಮ ತಮ್ಮ ವಿಶ್ರಾಂತಿ ಕೊಠಡಿಯನ್ನು ಹೊಕ್ಕು ವಿಶ್ರಾಂತಿಗೆ ತೆಕ್ಕೆ ಬಿದ್ದಿದ್ದಾರೆ.

ಇರುಳು ತಣ್ಣಗೆ ತಂಪಿನ ಆಗರವಾಗಿ ಕಳೆದುದು ದಿಟ.

ಅರುಣೋದವಾಯಿತು ಮೂಡಣದಲ್ಲಿ. ಪಕ್ಷಿಗೊರಳ ಉದಯ ರಾಗ ಉಕ್ಕಿ ಹರಿಯಿತು, ಎಲ್ಲಾ ದಿಶೆಯಿಂದಲೂ ಎದೆಯಾಳಕ್ಕೆ ಇಳಿಯುವಂತೆ ಮನೋಹರ ಶೈಲಿಯಲ್ಲಿ.

ಇಡೀ ಲೋಕವೇ ಎಚ್ಚೆತ್ತರೂ ಮಗ್ಗುಲಾಗಿ ಮಲಗಿದ್ದ ರಮೇಶ ಏಳಲೇ ಇಲ್ಲ. ದೀರ್ಘ ನಿದ್ರೆಯಲ್ಲಿ ಮುಳುಗಿ ಲೋಕದ ಹಂಗನ್ನು ತೊರೆದಿದ್ದ.

— ೦ —

# ಕಮಲಾನಿ

## ೧೦

### ಭವಿತವ್ಯಂ ಭವತ್ಯೇವ

ಮೀನಾಕ್ಷಿಪುರದ ಶಾಲೆಗೆ ಮುಖ್ಯ ಮಾಸ್ತರಾಗಿ ಬಂದವರು ಅಚ್ಚಣ್ಣ.

ನಾಲ್ಕಾರು ವರ್ಷಗಳಲ್ಲಿ ಊರಿನ ಸಮಶೀತೋಷ್ಣ ವಾತಾವರಣಕ್ಕೆ ಮತ್ತು ಮುಗ್ಧದುಗ್ಧಮನಮತಿಗಳ ಜನರಾಶಿಗೆ ಮಾರುಹೋದರು ಅಚ್ಚಣ್ಣ ಮಾಸ್ತರು. ಹತ್ತು ಎಕರೆ ಜಮೀನನ್ನು ಕೊಂಡು ಜಮೀನಿನ ಪಕ್ಕದ ಎತ್ತರದ ದಿಬ್ಬದ ಮೇಲೆ ಮನೆಕಟ್ಟಿ ಅಲ್ಲೇ ವಾಸ್ತವ್ಯ ಹೂಡಿದರು. ಶಾಲೆಯ ಮಕ್ಕಳಲ್ಲಿ ಶ್ರದ್ಧೆ–ಪ್ರೇಮ–ನಿಷ್ಠೆ–ಆಸ್ಥೆಗಳನ್ನು ಬೆಳೆಸಿ ಉತ್ತಮ ಬಂಧುತ್ವ ಬೆಳೆಸಿಕೊಂಡವರು. ಮಕ್ಕಳಿಗೂ ಅವರಲ್ಲಿ ಅಷ್ಟೇ ಸ್ನೇಹ ಪ್ರವೃತ್ತಿ ಗುರುಗಳಲ್ಲಿ. ಅಚ್ಚಣ್ಣ ಮಾಸ್ತರು ಶಾಲೆಯ ಮಕ್ಕಳಿಗೆ ಮಾತ್ರ ಗುರುಗಳಲ್ಲ ಊರಿನ ಮಂದಿಗೂ ಗುರುಗಳೇ. ಸಹಾಯ–ಸಹಕಾರಗಳಿಗೆ ಸದಾ ಚಾಚಿದ ಹಸ್ತ ಅವರದು. ಅವರು ಎಷ್ಟೆಷ್ಟು ಕಡೆ ಗುರುಗಳಾಗಿ ಸೇವೆ ಸಲ್ಲಿಸಿದ್ದರೋ, ತಮ್ಮ ಭವಿಷ್ಯವನ್ನು ಕಂಡುಕೊಂಡುದುದು ಮಾತ್ರ ಮೀನಾಕ್ಷಿಪುರದಲ್ಲಿ.

ಅಚ್ಚಣ್ಣ ಮಾಸ್ತರಿಗೆ ಒಬ್ಬಳೇ ಕುಮಾರ್ತಿ ಮುದ್ದು ಕಮಲಾನಿ. ಅವಳೇ ಅವರ ಕಣ್ಬೆಳಕು. ಅವಳೇ ಅವರ ಜೀವಾಳ. ಅವಳು ಓದುತಿದ್ದುದೂ ಅದೇ ಶಾಲೆಯಲ್ಲಿ. ಕಾಲೇಜಿನ ವಿದ್ಯಾಭ್ಯಾಸಕ್ಕೆ ಪರವೂರಿಗೆ ಕಳುಹಿಸುವ ಯೋಜನೆ ಕನಸಿನಲ್ಲೂ ಸುಳಿಯದು. ಅಷ್ಟೇ ಮುಗ್ಧ ಮನಸ್ಸಿನ ಕಮಲಾನಿಯೂ ಅದಕ್ಕೆ ವ್ಯತಿರಿಕ್ತವೇನೂ ಅಲ್ಲ.

ಸದಾನಂದ ಅದೇ ಊರಿನ ಸಿರಿವಂತ ರೈತರ ಕುವರ. ಅವನ ಸದಾಚಾರ ಸದ್ಗುಣಗಳಿಂದ ಯುವಕರ ಗುಂಪು ಬೆಳೆದಿತ್ತು ಸುತ್ತಮುತ್ತ. ಊರಿನ

ಪ್ರಗತಿಗೆ ಗಮನವಿಡುತಿದ್ದ ಅವನಿಗೆ ಮುಖಂಡತ್ವಲಾಭ ಕಟ್ಟಿಟ್ಟ ಬುತ್ತಿ. ಅಧ್ಯಯನದ ವಿಷಯದಲ್ಲಿ ಯಾವೊಂದು ತೊಡಕು ಮೂಡಿದರೂ ಮಾಸ್ತರ ಮನೆಗೇ ನೇರವಾಗಿ ಹೋಗಿ ಬಿಡುವ. ಪಾಠಪ್ರವಚನ ನಡೆಯುವಾಗ ದುಂಬಿ ಕಣ್ಣುಗಳ ಸುಂದರ ಹುಡುಗಿ ಲಂಗದ ನಿರಿಯನ್ನು ಚಿಮ್ಮುತ್ತ ತಣ್ಣನೆಯ ಪಾನಕವನ್ನೋ ಚಹವನ್ನೋ ತಂದುಕೊಟ್ಟು ಹೋಗುತಿದ್ದುದುಂಟು. ಆಟದ ಅರಗಿಳಿಯಾದ ಅವಳ ವದನಬಿಂಬದಲ್ಲಿ ಪ್ರಸನ್ನತೆ ಹೊರತು ಮತ್ತೊಂದಿಲ್ಲ. ಸದಾನಂದ ಅವಳ ವ್ಯಕ್ತಿತ್ವವನ್ನು ಮನವಾರೆ ಮೆಚ್ಚಿಕೊಂಡಿದ್ದ. ಆದರೇನು? ಅವರು ಯಾವತ್ತೂ ಅತ್ಯಂತ ಸಂಪ್ರದಾಯಸ್ಥ ಬ್ರಾಹ್ಮಣರಾದುದರಿಂದ ಹೆಜ್ಜೆ ಮುಂದಿಡುವಂತಿಲ್ಲ. ಅವರ ಕಟ್ಟಾ ಬ್ರಾಹ್ಮಣ್ಯವಾದಿತ್ವ ನಡೆ ನುಡಿಗಳಲ್ಲಿ ಸ್ಫುರಿಸುತ್ತದೆ. ಆದರೂ, ಮನಸ್ಸು ಮರ್ಕಟ. ಸದಾನಂದ ಮನದಲ್ಲೇ ಕೊರಗಿದರೂ ಸಧ್ಯ ಹೆಜ್ಜೆ ಮುಂದಿಟ್ಟು ಅವಮಾನವಾಗಬಾರದು ಎಂಬ ಆತ್ಮ ನಿರ್ಣಯಕ್ಕೆ ಮಣಿದ. ಸುಖದುಃಖಗಳ ಯಮಪಾಶದಲ್ಲಿ ಸಿಲ್ಕಿ ಒಳಗಿಂದೊಳಗೇ ಕೊರಗುತ್ತಿದ್ದ. ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಳ್ಳಲು ಸರ್ವಸಾಹಸ ಹೆಣಗುತಿದ್ದ.

ಅಂದು, ಸದಾನಂದ ಮಾಸ್ತರ ಮನೆಗೆ ಹೋದಾಗ ಮನೆಯಲ್ಲಿ ಯಾರೂ ಇರಲಿಲ್ಲ. ಮುಚ್ಚಿದ ಬಾಗಿಲನ್ನು ಒಂದು ಗಳಿಗೆ ನೋಡಿ ಹಿಂದಿರುಗಲಿದ್ದಾಗ ಮನೆಯ ಮಗ್ಗುಲಲ್ಲಿ ಹೂಗಿಡಗಳಿಗೆ ನೀರೆರೆಯುತಿದ್ದ ಕಮಲಾನಿ ದೃಷ್ಟಿಗೆ ಬಿದ್ದಳು. ಸದಾನಂದ ಮುಂದಿಟ್ಟ ಹೆಜ್ಜೆಯನ್ನು ಹಿಂತೆಗೆದು ಕೇಳಿದ,

"ಮಾಸ್ತರು ಮನೆಯಲಿಲ್ಲವೇ?"

"ಅವರಿಗೆ ಜ್ವರ ಬಂದಿತ್ತು. ವೈದ್ಯರನ್ನು ಕಾಣಲು ಆಸ್ಪತ್ರೆಗೆ ಹೋಗಿದ್ದಾರೆ."

"ಓ .... ಹಾಗೋ? ..."

"ಆಗಲೇ ಹೋಗಿದ್ದಾರೆ ... ಇಷ್ಟರಲ್ಲೇ ಬರಬಹುದು."

"ಸರಿ .... ಹಾಗಾದರೆ ಸ್ವಲ್ಪಹೊತ್ತು ಕಾಯಬಹುದೇ?"

ಅವಳು ಬಿಂದಿಗೆಯನ್ನು ಅಲ್ಲಿಯೇ ಇಟ್ಟು "ಇವತ್ತೇನು ಸಮಸ್ಯೆ ನಿಮ್ಮದು? ಅಣ್ಣನನ್ನು ಕಾಯಲಿಕ್ಕೆ?" ತುಟಿಗಳಲ್ಲಿ ಸಣ್ಣ ತುಂಟ ನಗೆ ತೇಲಿತು. ಹುಬ್ಬೆತ್ತಿ ನೋಡಿದಳು.

ಅವನು ಒಂದು ಕ್ಷಣ ಯೋಚಿಸಿ ಆನಂದ ಪ್ರಸನ್ನತೆಯಿಂದ ನುಡಿದ "ಸಮಸ್ಯೆ ಇರುವುದೇನೋ ಹೌದು. ಆದರೆ, ಅದನ್ನು ಬಿಡಿಸುವವರು ಮಾಸ್ತರಲ್ಲ; ಮಾಸ್ತರ ಮಗಳು!"

"ಮಾಸ್ತರ ಮಗಳು ... ?" ಆಶ್ಚರ್ಯಚಕಿತಳಾಗಿ ಕೇಳಿದಳು ಅವಳು.

"ಹೌದು .... ಅದನ್ನು ಬಿಡಿಸುವವಳು ನೀನೇ !"

"ಏನದು, ಸ್ವಲ್ಪ ಬಿಡಿಸಿ ಹೇಳಿರಿ." ಅರಳಿದ ಕಣ್ಣುಗಳಲ್ಲಿ ಆಶ್ಚರ್ಯ ಚಿನ್ಹೆ ಮೂಡಿತು.

"ಕಮಲಾನಿ, ನಾನೊಂದು ಪ್ರಶ್ನೆ ಕೇಳಿದರೆ ನಿನಗೆ ಕೋಪ-ಬೇಸರಗಳು ಮೂಡುವುದಿಲ್ಲವಷ್ಟೇ? ನೀನು ಕೋಪಿಸಿಕೊಳ್ಳದಿದ್ದರೆ ಹೇಳುವೆ." ದನಿಯಲ್ಲಿ ದೈನ್ಯತೆಯು ಧಾರಾಳವಾಗಿ ಹರಿದು ಬಂತು. ಅವಳ ಮುಖಬಿಂಬದ ಮೇಲೆ ಕಣ್ಣಿಟ್ಟು ಸೂಕ್ಷ್ಮಾತಿಸೂಕ್ಷ್ಮವಾಗಿ ಹಾವಭಾವಗಳನ್ನು ಗಮನಿಸಿದ. ಎದೆಯಲ್ಲಿ ಆಶಾಪಾಶಗಳು ಧುಮಧುಮಿಸುತ್ತಿವೆ. ಭವಿಷ್ಯದ ರಂಗದಮೇಲೆ ಅಂಡಲೆಯುತಿತ್ತು ಮನಸ್ಸು.

"ಎಂದಿಗಿಂತಲೂ ನಿಮ್ಮ ವರ್ತನೆ ವಿಚಿತ್ರವಾಗಿ ತೋರುತ್ತಿದೆ. ಸಹಜ ವಾದದ್ದು ಹೇಳಿದಿರಾದರೆ ಕೋಪ-ಬೇಸರಗಳು ಮೂಡುವುದಕ್ಕೆ ಕಾರಣವೇ ಇಲ್ಲವಲ್ಲಾ?" ಎಂದಳು ಕಮಲಾನಿ ಶುದ್ಧ ಸ್ನೇಹಭಾವದ ವೈಖರಿಯಲ್ಲಿ. ಕಣ್ಣು ಮುಖಗಳಲ್ಲಿ ಪರಿಹಾಸ್ಯದ ನೆರೆ ಉಕ್ಕಿತು.

"ಪ್ರಶ್ನೆ ಅಂತಹ ದೋಷ ಪೂರಿತವಲ್ಲ. ಪ್ರಾಪಂಚಿಕ ವ್ಯವಹಾರವನ್ನು ನಾನೇನೂ ಮೀರಿ ಹೋಗುತ್ತಿಲ್ಲ, ಬಿಡು. ನನ್ನ ಮನದಾಸೆಯೊಂದನ್ನು ನಿನ್ನ ಮುಂದಿಡುವೆ ಅಷ್ಟೆ. ಅದನ್ನು ನೀನು ಹೇಗೆ ಸ್ವೀಕರಿಸುವೆಯೋ ತಿಳಿಯದು ಅದಕ್ಕಾಗಿಯೇ ಮೊದಲೇ ಕೇಳಿಕೊಂಡದ್ದು ನಿನ್ನನ್ನು, ಬೇಸರಿಸಬಾರದು

ಎಂದು, ಮತ್ತೇನಿಲ್ಲ." ಎದೆಯಾಳದ ಆಶಾಭಾವ ದನಿಯಲ್ಲಿ ಹರಿದು ಬಂತು ಆಸಕ್ತಿಯಿಂದ ಪ್ರತ್ಯುತ್ತರವನ್ನು ಗಮನಿಸಿದ.

"ಆಗಲಿ, ಹೇಳಿರಿ. ಏನೆಂದು ತಿಳಿಯೋಣ." ಎಂದಾಗಲೇ ಎರಡೂ ಕೆನ್ನೆಗಳು ರಂಗುರಂಗಾಗಿ ಚೆಂಗುಲಾಬಿಗಳಾದುವು. ಗಿಡದ ಚಿಗುರೆಲೆಗಳಲ್ಲಿ ಬೆರಳಾಡಿಸ ತೊಡಗಿದಳು ತಲೆಬಾಗಿ.

"ನೀನು ನನ್ನನ್ನು ಕೈ ಹಿಡಿದು ಗೃಹಿಣಿಯಾಗಬಲ್ಲೆಯಾ ?"

ಅವಳು ತಟ್ಟನೆ ಉತ್ತರಿಸಿದಳು "ಅದನ್ನು ನಾನು ಹೇಗೆ ಹೇಳಲಿ? ಉತ್ತರಿಸಬೇಕಾದವರು ಅಪ್ಪ-ಅಮ್ಮ." ಆ ತಕ್ಷಣವೇ ಅಲ್ಲಿಂದ ಹಿತ್ತಿಲ ಬಾಗಿಲ ಕಡೆಗೆ ಓಡಿದಳು, ಮೈಯೆಲ್ಲಾ ಲಜ್ಜೆಯೇ ತಾನಾಗಿ. ಅವಳ ಮುದ್ದು ಮುದ್ದಾದ ದೇಹ ಪ್ರಕೃತಿಯ ಸೌಂದರ್ಯ ರಾಶಿಯನ್ನು ಮನದಲ್ಲಿ ತುಂಬಿ ಕೊಂಡು ಸದಾನಂದ ಮನೆಗೆ ಹಿಂದಿರುಗಿದ. ಮಾಸ್ತರಿಗಾಗಿ ಕಾಯಲಿಲ್ಲ.

o o o o

ಸದಾನಂದ ರಾಜಕೀಯ ಕ್ಷೇತ್ರದಲ್ಲಿ ಅವಿಶ್ರಾಂತ ವ್ಯಕ್ತಿ. ಎಲ್ಲೆಲ್ಲಿ ಜನರ ಪ್ರಾಣವನ್ನು ಸಂಕಟ-ಸಂಕಷ್ಟಗಳು ಆವರಿಸುತ್ತವೆಯೋ ಅಲ್ಲೆಲ್ಲಾ ಅವನು ಪ್ರತ್ಯಕ್ಷ. ನೊಂದವರಿಗಾಗಿ ದಯೆ–ಕರುಣೆಗಳ ಆಗರವಾಗಿ ತನ್ನಿಂದ ಏನೇನು ಸಾಧ್ಯವೋ ಅದನ್ನೆಲ್ಲಾ ಮಾಡುವುದರಲ್ಲಿ ಸದಾ ಮುಂದೆ. ಸಾಮಾಜಿಕ ಸುಧಾರಣೆಗಾಗಿ, ರಾಜಕೀಯ ಹಕ್ಕುಗಳ ರಕ್ಷಣೆಗಾಗಿ ಹೋರಾಟದಲ್ಲಿ ಸರಕಾರದ ರೀತಿ ನೀತಿಗಳನ್ನು ಕಟುವಾಗಿ ಟೀಕಿಸುತಿದ್ದ. ಸಕಲ ಕಾರ್ಯ ಯೋಜನೆಗೆ ಸಂಬಂಧಪಟ್ಟ ಅಧಿಕಾರಿಗಳನ್ನು ಕಂಡು ಕುಂದುಕೊರತೆಗಳ ನಿವಾರಣೆಗಾಗಿ ಪಟ್ಟು ಹಿಡಿಯುತಿದ್ದ.

ತರುಣ ವೃಂದಕ್ಕೆ ತುಂಟಗುರುವಾಗಿ ನಾನಾ ಕಾರ್ಯ ವಿಶೇಷಗಳಿಗೆ ಹುರಿ ದುಂಬಿಸಿ ಒಗ್ಗಟ್ಟಿನಿಂದ ಕಾರ್ಯ ಸಾಧಿಸುವುದು ದಿನಚರಿ. ಇಂತಹ ಸಂದರ್ಭ ದಲ್ಲಿ ಸರಕಾರವನ್ನು ಟೀಕಿಸಿದನೆಂದು ವಿಚಾರಣೆಗೆ ಗುರಿಪಡಿಸಿ ಎರಡು ವರ್ಷಗಳ ಕಠಿಣ ಶಿಕ್ಷೆಗೆ ಗುರಿಪಡಿಸಿತು ಸರಕಾರ. ಮನೆಯವರು–ಹಿಂಬಾಲಕರು ಎಷ್ಟೆಷ್ಟು ಪ್ರಯತ್ನಿಸಿದರೂ ಬಿಡುಗಡೆಯೂ ಆಗಲಿಲ್ಲ; ಶಿಕ್ಷೆಯ ಅವಧಿಯೂ

ಕಡಿಮೆಯಾಗಲಿಲ್ಲ. ಅವನ ತಾರುಣ್ಯ ಸಹಜವಾದ ಸುಂದರ ಶರೀರ ಕಠಿಣಾತಿ ಕಠಿಣ ಶಿಕ್ಷೆಯ ಫಲವಾಗಿ ಸೊರಗಿ ಸುಣ್ಣವಾದರೂ ಜಗ್ಗಲಿಲ್ಲ. ರಾಷ್ಟ್ರೀಯ ದುಸ್ಥಿತಿ ಹೆಜ್ಜೆ ಹೆಜ್ಜೆಗೂ ಉತ್ತೇಜನ ನೀಡುತಿತ್ತು ಮೈನೆತ್ತರು ಕೊತಕೊತ ಕುದಿಯುವಂತೆ. ಕಾರ್ಯ ಸಿದ್ಧಿಗಾಗಿ ಪಣತೊಡುತಿತ್ತು ಚಿತ್ತ ಪ್ರವೃತ್ತಿ. ಜೇಲಿನ ಒಳಗಿದ್ದುಕೊಂಡೇ ಹೊರಗಿನವರಿಗೆ ಮಾರ್ಗದರ್ಶನ ಮಾಡುತಿದ್ದ. ಮುಖಂಡನ ಜೇಲುವಾಸದಿಂದ ರಾಜಕೀಯ ಚಟುವಟಿಕೆ ಹಿಂಗಿ ಸ್ಥಗಿತ ಗೊಳ್ಳಲಿಲ್ಲ; ಕುಂದಿ ಕುಗ್ಗಲಿಲ್ಲ; ಮೀನಾಕ್ಷಿಪುರದಲ್ಲಿ.

ರಾಜಕೀಯ ಕಟ್ಟಾಳು ಸದಾನಂದನ ಹೆಸರು ಜನಜನಿತವಾಯಿತು. ಎಳೆವಯಸ್ಸಿನಲ್ಲಿಯೇ ಅತ್ಯಂತ ಕೀರ್ತಿಶಾಲಿಯಾದ. ಹಳ್ಳಿಯಲ್ಲಿ ಅವನಿದ್ದೆಡೆಗೆ ಎಳೆ ಸೇರಿಸಿ ಹೊಸೆದಂತೆ ಬಂದು ಕೂಡುತ್ತಾರೆ ಜನ. ಅವನ ಬಿಡುಗಡೆಯ ದಿನವನ್ನು ದಿವ್ಯಾಸ್ಥೆಯಿಂದ ಕಾಯುತ್ತದೆ ಜನರಾಶಿ.

o o o o

ಮಹಾ ರಾಜಕೀಯ ವಿಪ್ಲವ ವಿಶೇಷ ವಿಜೃಂಭಿಸಿತು ಕಾಲೋಚಿತವಾಗಿ.

ಕಾಲಚಕ್ರವುರುಳಿ ಎರಡು ಸಂವತ್ಸರಗಳು ಹೇಳ ಹೆಸರಿಲ್ಲದಂತೆ ಕರಗಿ ಹೋದುವು. ಸದಾನಂದ ಬಿಡುಗಡೆ ಹೊಂದುವ ದಿನ ಊರಿನ ಗೆಳೆಯ ವೃಂದ ಅವನನ್ನು ಹಾರ ತುರಾಯಿಗಳೊಡನೆ ಬರಮಾಡಿಕೊಂಡು ಆತ್ಮೀಯ ಪ್ರೇಮ ದಿಂದ ತೆರೆದ ವಾಹನದಲ್ಲಿ ಕೂರಿಸಿ ವಿಜೃಂಭಣೆಯಿಂದ ಮೆರವಣಿಗೆ ಮಾಡಿದರು. ದಾರಿಯುದ್ದಕ್ಕೂ ಹೂಹಾರಗಳಿಂದ, ಜಯಘೋಷಗಳಿಂದ ಅವನು ಮುಚ್ಚಿ ಹೋದ. ಅನಂತರ ಮುಂದಿನ ಕಾರ್ಯಕ್ರಮಗಳ ನಿರ್ಣಯಕ್ಕಾಗಿ ಸಭೆ ಕೂಡಿಸಿದ. ಎಲ್ಲರೂ ಕೂಡಿ ಒಮ್ಮನ–ಒಮ್ಮತಗಳಿಂದ ಸಾಮಾಜಿಕ ಸೇವೆ ಮಾಡುವ ಪಣ ತೊಟ್ಟರು.

ಸದಾನಂದ ಮೀನಾಕ್ಷಿಪುರದ ಬಸ್ಸು ಹತ್ತಿದ. ಜೊತೆಯಲ್ಲಿ ಯುವಕರ ತಂಡವೂ ಹೊರಟಿತು ಒಂದೆರಡು ದಿನ ಬಂಧುವರ್ಗ, ಗೆಣೆಯ ವರ್ಗವನ್ನು ನೋಡುವುದರಲ್ಲಿ ಕಳೆಯಿತೇನೋ. ಗದ್ದೆ ತೋಟಗಳ ಕಡೆಯೂ ಹೋಗಿ ಬಂದ. ತರುವಾಯ ಅಚ್ಚಣ್ಣ ಮಾಸ್ತರನ್ನು ನೋಡಿ ಬರಲು ಹೊರಟ. ಎರಡು ಮೈಲಿಗಳ ಅಂತರ ಸಲೀಸಾಗಿ ಕಳೆಯಿತು.

ಇನ್ನೂ ಬೆಳಗಿನ ಒಂಭತ್ತರ ಸಮಯ. ಎಳೆ ಬಿಸಿಲು ಬೆಚ್ಚನ್ನ ಮುದ್ದಿಡುತಿತ್ತು ತನುಮನಗಳಿಗೆ. ಅವರ ತೋಟ ಗದ್ದೆಯಂಚಿನ ದಿಬ್ಬದ ಮೇಲೆ ಸೂರ್ಯ ಏರುತಿದ್ದ. ಮಾಸ್ತರು ಮನೆ ಕಟ್ಟಲು ಒಳ್ಳೆಯ ಸ್ಥಳವನ್ನೇ ಆರಿಸಿದ್ದಾರೆ. ಸುತ್ತಮುತ್ತ ಸಾಕಷ್ಟು ವಿಶಾಲವಾದ ಅಂಗಣವನ್ನು ಹೊಂದಿದ ಚಿಕ್ಕಮನೆ. ಸಾಲು ಮೆಟ್ಟಿಲುಗಳನ್ನು ಹತ್ತಿ ಮನೆಯ ಜಗಲಿಗೆ ಪದಾರ್ಪಣೆ ಮಾಡಿದ ಸದಾನಂದ. ಅಚ್ಚಣ್ಣ ಮಾಸ್ತರು ಇರಲಿಲ್ಲ. ಅದೇ ಕುರ್ಚಿಯ ಮೇಲೆ ಕುಳಿತ ಅಪರಿಚಿತ ತರುಣ ವ್ಯಕ್ತಿ ಪುಸ್ತಕ ಪ್ರಪಂಚದಲ್ಲಿ ತೀವ್ರ ಮುಳುಗಿದ್ದುದು ಕಂಡುಬಂತು. ಅವನ ಗಮನವನ್ನು ಸೆಳೆದುಕೊಳ್ಳಲು ಸಣ್ಣ ಸದ್ದು ಮಾಡಿದ ಸದಾನಂದ.

ಅವನು ಕತ್ತೆತ್ತಿ ನೋಡಿ "ಯಾರನ್ನು ಕಾಣಲು ಬಂದಿದ್ದೀರಿ ?" ಎಂದ.

ಅರರೆ! ಎಂತಹ ಪ್ರಶ್ನೆ ಕೇಳುತಿದ್ದಾನೆ ಇವನು ? ನಾನು ಕಾಣಲು ಬಂದದ್ದು ಎಲ್ಲರನ್ನು ; ಎನಿಸಿತು ಮನವಲ್ಲಿ. ಇವನಾರೋ ದಿಕ್ಕುದೆಶೆ ಅರಿಯದವನಿರಬಹುದು. ಸೋದರಳಿಯನೋ ನೆಂಟನೋ ಯಾರೇ ಇರಲಿ, ಏನೋ ಒಂದು ರೀತಿಯ ಒರಟುತನವೇ ಕಾಣಿಸುತ್ತದೆ ... ಎಂದು ತನ್ನೊಳಗೇ ಯೋಚಿಸಿಕೊಂಡು ಕೇಳಿದ "ಅಚ್ಚಣ್ಣ ಮಾಸ್ತರು ಇದ್ದಾರೆಯೇ ?"

"ಇಲ್ಲ. ಹೊರಗಡೆ ಹೋಗಿದ್ದಾರೆ." ಉದಾಸೀನದಿಂದಲೇ ಹೊರಬಿತ್ತು ಧ್ವನಿ.

ಒಳಗಡೆಯಿದ್ದ ಮೋತಿನಾಯಿ ಹೊರಬಂದು ಮೂಸಿ ನೋಡಿ ಬಾಲ ಆಡಿಸಿತು.

ಅದರ ತಲೆಯನ್ನು ತಟ್ಟಿ "ಓಹೋ ನಿನಗೆ ಗುರುತು ಹತ್ತಿತೇ ?" ಎಂದ.

ಆಗಲೂ ಆ ತರುಣ ಮಾತಾಡಲಿಲ್ಲ. ತೀರಾ ಅಸಡ್ಡೆಯಿಂದಲೇ ಇದ್ದ.

ಒಂದೆರಡು ಕ್ಷಣ ನಿಂತಲ್ಲಿಂದ ಹಂದಲಿಲ್ಲ ಸದಾನಂದ. ಬಹುಶಃ ಮಾಸ್ತರು ಶಾಲೆಗೆ ಹೋಗಿದ್ದಾರೇನೋ ನಾನು ಅವೇಳೆಯಲ್ಲಿ ಬಂದುದು ತಪ್ಪಾಯ್ತು ಎಂದುಕೊಂಡಾಗಲೇ ಇಂದು ಭಾನುವಾರ ಎಂಬುದು ನೆನಪಾಯ್ತು. ಸದಾನಂದ ಹಾದಿಯ ನೇರಕ್ಕೆ ದೃಷ್ಟಿ ಹೊರಳಿಸಿದ. ಅಲ್ಲಿಯೂ

ಯಾರೂ ಕಾಣಿಸುತ್ತಲಿಲ್ಲ. ಮನೆಯ ಮಗ್ಗುಲಿನ ಹೂಗಿಡಗಳೆಡೆಗೆ ಹರಿಯಿತು ದೃಷ್ಟಿ. ಅಲ್ಲಿಯೂ ಯಾರ ಸುಳಿವಿಲ್ಲ. ಹೂಗಿಡಗಳು ಅಂದಿನಂತೆಯೇ ಪುಷ್ಪ ಭರಿತವಾಗಿ ಶ್ರೀಯುಕ್ತವಾಗಿ ನಳನಳಿಸುವ ದೃಶ್ಯ ಮನೋಹರ. ಅವುಗಳನ್ನು ಅಕ್ಕರೆಯಿಂದ ಆರೈಕೆ ಮಾಡುತಿದ್ದ ಒಡತಿ ಕಮಲಾನಿಯ ಸಂದರ್ಶನವಾಗಿ ದ್ದಿದ್ದರೆ ಸಾಕಾಗಿತ್ತು. ಅದೂ ಆಗಲಿಲ್ಲ. ಇನ್ನು ಹೊರಡುವುದೇ ಸರಿಯೆಂದು ಹೊಸ್ತಿಲು ದಾಟಿದಾಗಲೇ ಕೈಯಲ್ಲಿ ಹರಿವೆ ಸೊಪ್ಪಿನ ಕಂತೆಯೊಡನೆ ಎದುರಾದ ಸ್ವಾಮಿನಿ ಪ್ರಸನ್ನ ಮುಖಿಯಾಗಿ "ಓಹೋ ಯಾವಾಗ ಬಂದಿರಿ ? ನಿಮ್ಮ ಬಿಡುಗಡೆಯ ವಿಚಾರ ಪತ್ರಿಕೆಗಳ ಮೂಲಕ ತಿಳಿಯಿತು. ಚೆನ್ನಾಗಿದ್ದೀರಾ ? ಬನ್ನಿ ಬನ್ನಿ ..." ಅತ್ಯಂತ ಪ್ರೀತಿ–ವಿಶ್ವಾಸಗಳ ಗಣಿಯಾಗಿ ಆತ್ಮೀಯತೆಯಿಂದ ಬರಮಾಡಿಕೊಂಡು ಕುಳಿತುಕೊಳ್ಳಿ. ನಿಮ್ಮ ಸುದ್ದಿಯನ್ನು ಎಲ್ಲರ ಬಾಯಿ ಯಲ್ಲೂ ಕೇಳುತ್ತಿರುತ್ತೇವೆ. ನಿಮ್ಮಂತಹವರು ಹತ್ತು ಮಂದಿಯಿದ್ದರೆ ಒಂದು ಹಳ್ಳಿಯ ಉದ್ಧಾರವಾಗುತ್ತದೆ. ಈಗಿನ ಸರಕಾರದಲ್ಲಿ ಶ್ರದ್ಧೆ-ಬುದ್ಧಿಗಳು ಲುಪ್ತ ವಾಗಿದೆಯೇ ಎಂದು ಮೂರ್ಖರೂ ಆಶ್ಚರ್ಯಪಡುವಷ್ಟು ಅಸಡ್ಡೆ ಆಡಳಿತದಲ್ಲಿ. ನಿಮ್ಮಿಂದ ಎಷ್ಟೆಷ್ಟು ಉಪಕಾರವಾಗುತ್ತಿದೆ ....? ಇನ್ನು ಈ ಊರಿಗೆ ಕಾಲೇಜು ತರಿಸಿಬಿಡಿ. ಊರಿನ ಬಡ ಹೆಣ್ಣು ಮಕ್ಕಳು ಇದ್ದಲ್ಲೇ ವಿದ್ಯೆ ಕಲಿತು ಬುದ್ಧಿವಂತ ರಾಗಲಿ .... ಈ ಜನ ಇನ್ನೂ ಓಬೀರಾಯನ ಕಾಲದಲ್ಲೇ ಇದ್ದಾರೆ. ಇವರ ಸ್ಥಿತಿ ಗತಿಯನ್ನು ನೋಡಿದರೆ ವ್ಯಸನವಾಗುತ್ತದೆ. ಮಾನಸಿಕ ಬೆಳವಣಿಗೆ ಏನೇನೂ ಆಗಲಿಲ್ಲ ಬಿಡಿ ..."

"ಖಂಡಿತ. ಈ ದೀನ ದಲಿತ ಜನ ಬುದ್ಧಿಶೀಲರಾದರೆ ರಾಷ್ಟ್ರದ ಪ್ರಗತಿಗೆ ಅಡಿಗಲ್ಲು ಇಟ್ಟಂತೆ. ಅದಕ್ಕಾಗಿಯೇ ನಮ್ಮ ಹೋರಾಟ." ಹುಬ್ಬೇರಿಸಿದ ಸದಾನಂದ. ಮುಖಬಿಂಬ ಸಾನಂದದಿಂದ ಅರಳಿತು. "ಇಷ್ಟು ನಮ್ಮ ಜನ ಮಂಡಳಿ ಅರಿತುಕೊಂಡರೆ ಸಾಕು. ಇನ್ನೂ ತೀರಾ ಗೊಡ್ಡು ಸಂಪ್ರದಾಯದಲ್ಲೇ ಉಳಿದು ಬಿಟ್ಟಿದ್ದಾರೆ .... ಇದು ತೀರಾ ಶೋಚನೀಯ."

ಅನಂತರ ಸದಾನಂದ ಕೇಳಿದ "ಅಚ್ಚಣ್ಣ ಮಾಸ್ತರು ಚೆನ್ನಾಗಿದ್ದಾರೆಯೇ ?"

"ಚೆನ್ನಾಗಿದ್ದಾರೆ. ಇನ್ನೇನು ಬರಬಹುದು."

ಕಮಲಾನಿ ಹೊರಬಂದಳು ಸದಾನಂದನನ್ನು ನೋಡಿ ತುಸು ಲಜ್ಜಿತಳಾದರೂ ಸಾವರಿಸಿಕೊಂಡು ಕೇಳಿದಳು "ಹೇಗಿದ್ದೀರಿ? ಸರಕಾರದ ಆತಿಥ್ಯ ಹೇಗಿತ್ತು?" ತುಟಿಗಳಲ್ಲಿ ಎಳೆನಗು ಮೂಡಿ ಮಾಯವಾಯಿತು.

ಅವನು ಹುಬ್ಬೇರಿಸಿ ಅಂದ "ಹೇಗಿರಬೇಕೋ ಹಾಗಿತ್ತು!"

ಅವಳು ಒಳಹೋಗುತ್ತ "ಕುಳಿತುಕೊಂಡಿರಿ, ಚಹ ತರುವೆ."

"ಈಗ ಅದರ ಅಗತ್ಯವಿಲ್ಲ. ತೊಂದರೆ ತೆಗೆದುಕೊಳ್ಳುವುದು ಬೇಡ."

ಹಾಗೆಂದರೂ ಕೇಳದೆ ಅವಳು ಚಹವನ್ನು ತಂದುಕೊಟ್ಟಳು ಚುರುಕಾಗಿ.

ಅನಂತರ ಆ ಯುವಕ ತನ್ನನ್ನು ತಾನೇ ಪರಿಚಯಿಸುತ್ತ ನುಡಿದ "ನಮ್ಮ ಮಾವ ಈಗ ರಿಟೈರ್ಡ್ ಆಗಿದ್ದಾರೆ. ಅವರ ಸ್ಥಾನದಲ್ಲಿ ನಾನೇ ಈಗ ಶಾಲಾ ಮಾಸ್ತರು. ನಾನಿಲ್ಲಿಗೆ ಬಂದು ಒಂದೂವರೆ ವರ್ಷವಾಯಿತು. ಈ ಊರು, ಈ ಹವಾಮಾನ ನನಗೆ ತುಂಬಾ ಹಿಡಿಸಿದೆ."

ಅಷ್ಟರಲ್ಲಿ ಸ್ವಾಮಿನಿ "ಇವರನ್ನು ಪರಿಚಯಿಸುವುದನ್ನು ಮರೆತೆ. ಇವರೇ ನಮ್ಮ ಅಳಿಯಂದಿರು".

ಮಾತು ಮುಗಿಯುವುದರೊಳಗಾಗಿ ಅಚ್ಚಣ್ಣ ಮಾಸ್ತರು ಬಂದರು.

"ಓಹೊ, ಏನಪ್ಪಾ, ಸದಾನಂದ? ಹೇಗಿದ್ದಿ, ನಿನ್ನ ಬಿಡುಗಡೆಯಾದುದು ತಿಳಿಯಿತು. ನೀನು ತುಂಬಾ ಸೊರಗಿದ್ದಿ. ನೀವು ಹುಡುಗರು ಹುರುಪಿನಿಂದ ನುಗ್ಗಿ ಬಿಡುತ್ತೀರಿ. ನಿನ್ನ ತಂದೆ ತಾಯಿ ನಿನಗಾಗಿ ಎಷ್ಟೆಷ್ಟು ಪರಿತಪಿಸಿದರೋ ದೇವರಿಗೇ ಗೊತ್ತು. ನಿಮ್ಮ ಹುಚ್ಚು ಧೈರ್ಯದಿಂದ ಹೆತ್ತವರಿಗೆ ಸಂಕಟ. ಅದರೂ ನಾನು ನಿನ್ನ ದಾರಿಯನ್ನು ತಪ್ಪು ಎನ್ನಲಾರೆ. ನಿಮ್ಮಂತಹವರು ಮುನ್ನುಗ್ಗದಿದ್ದರೆ ಹೊಟ್ಟೆ ತುಂಬಿದ ಸರಕಾರ ಹಗಲ್ ನಿದ್ದೆ ಮಾಡುತ್ತೆ. ಈಗ ನಿಮ್ಮ ಒಗ್ಗಟ್ಟು ಒಳ್ಳೆಯ ಕೆಲಸ ಮಾಡಿಸುತ್ತಿದೆ. ಮುಂದೆಯೂ ಸಾಮಾಜಿಕ ಕಾರ್ಯಕ್ರಮ ಇಟ್ಟುಕೊಳ್ಳುವುದು ಮೇಲು. ಜನ ಮೂಢನಂಬಿಕೆಗಳಿಂದ, ಮತಿಮೌಢ್ಯದಿಂದ ತುಂಬಾ ಹಿಂದುಳಿದಿದ್ದಾರೆ. ಮುಖ್ಯವಾಗಿ ಈ ದಿಶೆಯಲ್ಲಿ ಸುಧಾರಣೆಯಾಗಬೇಕು."

"ನಿಜ ಮೇಷ್ಟ್ರರೇ, ಅದಕ್ಕಾಗಿಯೇ ನಾನು ತರುಣ ವರ್ಗವನ್ನು ಒಗ್ಗೂಡಿಸಿದ್ದು."

"ನಿಮ್ಮಂತಹವರು ಮುಂದಾಗದಿದ್ದರೆ ನಮ್ಮ ಸಮಾಜ ಜಡತ್ವವನ್ನು ನೀಗಿಕೊಳ್ಳುವುದೇ ಇಲ್ಲ. ಈಗೀಗ ವಿದ್ಯಾಭ್ಯಾಸದ ಕಡೆ ಹೆಚ್ಚುಹೆಚ್ಚು ಗಮನ ಕೊಡುತಿದ್ದಾರೆ. ಅಂತೂ ಸುಧಾರಿಸಿಕೊಳ್ಳಲು ಬಹಳ ಕಾಲಬೇಕು. ಜಡತ್ವ ಸಧ್ಯಕ್ಕೆ ಹರಿಯುವುದಿಲ್ಲ. ಮತಿಮಾಂದ್ಯತೆ ರಕ್ತಕ್ಕೆ ಅಂಟಿ ಹೋಗಿದೆ. ಈ ಜನ ಸಾಂದ್ರತೆಯನ್ನು ನೋಡಿದರೆ ದುಃಖ-ಸಂಕಟ ಎರಡೂ ಉಂಟಾಗುತ್ತವೆ."

"ನಿಜ ... ಇದು ತೀರ ವಿಶಾದಕರ."

ಸದಾನಂದ ಹೊರಡಲು ಎದ್ದು ನಿಂತಾಗಲೇ ಕಮಲಾನಿ ಆರೇಳು ತಿಂಗಳ ಮಗುವಿನೊಡನೆ ಹೊರಬಂದಳು. ಅಚ್ಚಣ್ಣ ಮಾಸ್ತರು ಮಗುವನ್ನು ಎದೆಯಮೇಲೆ ಎತ್ತಿಕೊಂಡು ನುಡಿದರು "ನಿನ್ನೊಡನೆ ಮಾತಾಡುವ ಆತುರದಲ್ಲಿ ಅಳಿಯನನ್ನು ಪರಿಚಯಿಸುವುದನ್ನು ಮರೆತು ಬಿಟ್ಟೆ. ಇವರೇ ಕಮಲಾನಿಯ ಯಜಮಾನರು. ಇದು ಕಮಲಾನಿಯ ಮಗು .... ಸಂತಸದಿಂದ ಹೇಳಿಕೊಂಡರು ಅಚ್ಚಣ್ಣ ಮಾಸ್ತರು. ಮಗು ತಾಯಿಯಂತೆಯೇ ಮುದ್ದು ಮುದ್ದಾಗಿತ್ತು. ಸದಾನಂದ ನೊಂದು ನೀರಾದ .... ಆಂತರಂಗಿಕ ನೋವನ್ನು ಕಿಂಚಿತ್ತೂ ತೋರಗೊಡದಂತೆ ಮಗುವನ್ನು ಮುದ್ದಾಡಿ ಸಿಹಿಮುತ್ತು ಕೊಟ್ಟು ಕೈಗೆ ನೂರು ರೂಪಾಯಿಯ ನೋಟನ್ನು ನೀಡಿ ಆ ಕ್ಷಣವೇ ಅಲ್ಲಿಂದ ಹೊರ ಬಿದ್ದ. ಹೃದಯ ಕಲ್ಲು ಹೊತ್ತಂತೆ ಭಾರಾತಿಭಾರ. ಮಾನಸಿಕ ಕಸಿವಿಸಿಯನ್ನು ತಾಳಲಾರ ಅನುಭವಿಸಲಾರ. ದುಃಖದುಗುಡಗಳ ಕೋಟೆಯಲ್ಲಿ ನರಳಿತು ಜೀವ. ಜೇಲಿನ ವಾಸಕ್ಕಿಂತಲೂ ಕಠಿಣವಾಯಿತು ಬಿಡುಗಡೆಯ ಬದುಕು. ಮನವೂ ಕತ್ತಲೆ. ಮನೆಯೂ ಕತ್ತಲೆ. ಹೃದಯಮಂದಿರವೂ ಕತ್ತಲೆ.

o o o o

ಪೂರ್ವ ದಿಗಂತದಲ್ಲಿ ಎಂದಿನಂತೆಯೇ ಸೂರ್ಯೋದಯವಾಯಿತು.

ಜಗತ್ತು ನಾಗಾಲೋಟದಿಂದ ದಿನಚರಿಯನ್ನು ಆಚರಿಸುತ್ತಿದೆ.

ದಿನದಿನವೂ ಉದಯಾಸ್ತಮಾನಗಳು ಸಂಭವಿಸುತ್ತಲೇ ಇವೆ. ಯಾರ ಭಂಗ–ಬನ್ನ, ನೋವು–ಸಾವು, ತಾಪ–ಪರಿತಾಪಗಳನ್ನು ಲೆಕ್ಕಿಸದೆ. ಆನಂದ ಭೋಗದೊಂದಿಗೆ ದುಃಖಭೋಗವೂ ಹೆಗಲೆಣೆಯಾಡುತ್ತದೆ, ದೈವಾಯತ್ತವಾಗಿ.

ಸದಾನಂದ ತೀವ್ರ ಚಿಂತಿತನಾದ... ಇನ್ನೂ ಹದಿ ಹರೆಯದ ಹುಡುಗಿಗೆ ಮದುವೆ–ಮಗು ಎಲ್ಲಾ ಆಗಿ ಹೋಗಿದೆ. ಮುಗ್ಧ ಬಾಲೆ, ಮುಗ್ಧ ಜೀವನ ಮುಗ್ಧಮಯವೇ ಎಲ್ಲ. ಇದಕ್ಕೆ ಯಾರು ಹೊಣೆ? ವಿಧಿಯೋ? ಮತಿ ಮಾಂದ್ಯವೋ?ಊಹಿಸಲಾರದೆ ತತ್ತರಿಸಿತು ಬುದ್ಧಿ. ಹುಡುಗ ಮನೆಮೆಟ್ಟಿಲು ಇಳಿಯಲಿಲ್ಲ. ತೀವ್ರ ಚಟುವಟಿಕೆಯ ಬೌದ್ಧಿಕ ಕೇಂದ್ರಕ್ಕೆ ಗೆದ್ದಲು ಹಿಡಿಯಿತು. ಜೇಲುವಾಸದ ಆಯಾಸ ತುಂಬಿದೆ. ವಿಶ್ರಾಂತಿ ಪಡೆಯಲಿ ಎಂದು ಆಶಿಸಿದರು ಜನ. ತಂದೆ–ತಾಯಿಗಳೂ ಅಷ್ಟೆ. ಹುಡುಗ ಹುರುಪು–ಧೈರ್ಯ ಸ್ಥೈರ್ಯಗಳ ಗಣಿ. ಕೆಲವು ಕಾಲ ವಿಶ್ರಾಂತಿ ಪಡೆದರೆ ಸರಿಹೋಗುತ್ತಾನೆ ಎಂದುಕೊಂಡರು. ಸದಾನಂದ ಒಳಗೊಳಗೇ ಕೊರಗುತಿದ್ದ. ಹೇಗೆ ಭರಿಸಲಿ ಎಂಬುದೇ ಅರ್ಥವಾಗದ ವಿಷಯ. ಮುಗಿದ ಅಧ್ಯಾಯ ಅಂದಮೇಲೆ, ಚಿಂತಿಸುವುದು ವ್ಯರ್ಥ ಎಂಬುದು ಆತ್ಮಗತ–ಮನೋಗತ. ಆದರೆ ... ಎಂಬಲ್ಲಿಗೆ ಬಂದ ಯೋಚನೆಯ ತೇಜಿ ನಿಂತುಹೋಯಿತು. ಪ್ರಯತ್ನಿಸಿದರೂ ಮುಂದೆ ಹರಿಯಲಿಲ್ಲ. ಹುಡುಗ ನಿರಾಸೆಯ ಕುಂಡದಲ್ಲಿ ಮುಳುಗಿ ಹೋದ.

ಮಾಸವೊಂದು ಉರುಳಿಹೋಯಿತು. ಊರಿನ ಅಣುಗರ ಸಂಗಡ ಸಾಮಾಜಿಕ–ರಾಜಕೀಯ ಚಟುವಟಿಕೆಯಲ್ಲಿ ಭಾಗವಹಿಸಿದರೂ ತನ್ನ ಹೃದಯವೇ ಕಳೆದು ಹೋದಷ್ಟು ಮಾನಸಿಕ ಹಿಂಸೆ ಸದಾನಂದನಿಗೆ. ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಳ್ಳುವ ಸಲುವಾಗಿಯೇ ಮುಂದೆ ಹೆಚ್ಚುಹೆಚ್ಚು ಕಾರ್ಯಕ್ರಮಗಳಲ್ಲಿ ಭಾಗವಹಿಸತೊಡಗಿದ; ಆಂತರಿಕ ವೇದನೆಯನ್ನು ತನ್ನಲ್ಲೇ ಹುಗಿದಿಟ್ಟುಕೊಂಡ. ಇತಿಮಧ್ಯೆ, ಅವನ ಮದುವೆಗಾಗಿ ಅಪ್ಪಅಮ್ಮ ತುಂಬಾ ಆಸ್ಥೆಯಿಂದ ಪ್ರಯತ್ನದ ಪಥ ಹಿಡಿದರು. ಹಿರಿಯಕ್ಕ ಮಗಳನ್ನು ಕೊಡಲು ಮುಂದೆ ಬಂದಿದ್ದಾಳೆ. ತಪ್ಪಿಸಿಕೊಳ್ಳುವುದು ಕಷ್ಟವೇ. ಏನೇನೋ

ನೆವಗಳನ್ನು ಹೇಳಿ ಹೇಳಿ ಸಾಕಾದುದರಿಂದ ಕೆಲವು ಕಾಲ ಹೊರಗಡೆ ಇರೋಣ ಎಂಬ ಯೋಚನೆ ಸದಾನಂದನಿಗೆ ಎಲ್ಲಿಗೆ ಹೋಗಲಿ, ಹೇಗೆ ಕಾಲಹರಣ ಮಾಡಲಿ ಎಂಬ ಚಿಂತೆಯೂ ಸಹ.

ಅಂದು, ಮಧ್ಯಾಹ್ನ ಮನೆಗೆ ಮರಳಿದಾಗಲೇ ಅಮ್ಮ ಹೇಳಿದಳು "ಮಧ್ಯಾಹ್ನ ಸರಸೂ ಬರುತ್ತಾಳೆ. ಎಲ್ಲಿಗೂ ಹೋಗಬೇಡ, ಮಗನೇ. ಅವಸರ ಬೇಡ, ನಿಧಾನವಾಗಿ ಯೋಚಿಸು."

"ಸರಸಕ್ಕ ಬಂದರೆ ನೀವಿದ್ದೀರಲ್ಲ. ಮಧ್ಯಾಹ್ನ ಮೀಟಿಂಗ್ ಇದೆ. ನಾನಿರುವಂತಿಲ್ಲ."

"ಅವಳು ಇಂದೇ ಹಿಂದಿರುಗಬೇಕಂತೆ."

"ನನಗೂ ಅಷ್ಟೇ ಕೆಲಸವಿದೆ. ಏನಮ್ಮಾ ಮಾಡಲಿ ?" ಮಾತು ಮುಗಿಯುವುದರೊಳಗಾಗಿ ಮೆಟ್ಟಿಲಿಳಿದ ಸದಾನಂದ. ಕ್ಷಣವೂ ನಿಲ್ಲದೆ, ಮರು ಮಾತಿಗೂ ಅವಕಾಶ ಕೊಡದೆ ಹೊರಟು ಹೋದ ಬಗೆ ಮನಕ್ಕೆ ಮುಳ್ಳು ಮುರಿಯಿತು ತಾಯಿಯ ಹೆತ್ತೊಡಲಿಗೆ. ಅತೀವ ಸಂಕಟದಿಂದ ನೊಂದು ನೋವುಂಡು ಮುದುಡಿತು ಮನಸ್ಸು. ನಯನದ್ವಯಗಳೆರಡೂ ಅವನು ಕಣ್ಮರೆಯಾಗುವವರೆಗೂ ನಿಟ್ಟಿಸಿ ಹಿಮ್ಮರಳಿದುವು. ಚಿದಾಕಾಶದಲ್ಲಿ ಮಳೆಮೋಡ ಆವರಿಸಿತು. ಅತ್ಯಂತ ಮ್ಲಾನ ಮುಖಿಯಾದಳು ತಾಯಿ. ಭವಿಷ್ಯದಲ್ಲಿ ಮೊಮ್ಮಗಳ ಸಹವಾಸದಿಂದ ಕಿಂಚಿತ್ ಸುಖ–ಶಾಂತಿಯನ್ನು ಕಾಣಬಹುದೆಂಬ ಸ್ವಾರ್ಥಮೂಲವಾದ ಆಸೆ–ಪ್ರತ್ಯಾಸೆಯ ಕುಡಿ ಮುರಟಿತು. ಮಗ ಯಾವ ಯ್ಯಾವ ಹುಡುಗಿಯನ್ನೋ ತಂದು ಮನೆದುಂಬಿಸಿಕೊಂಡರೆ ನಮ್ಮ ಗತಿಯೇನೋ ಈಗಿನ ಅಧಿಕ ಪ್ರಸಂಗಿ ಹುಡುಗಿಯರನ್ನು ನೋಡಿದರೆ ಎದೆ ತಲ್ಲಣಿಸುತ್ತೆ ಮುಂದೇನು ಗತಿಯೋ ಎಂಬೆಲ್ಲಾ ಯೋಚನೆಯ ಬಿರುಗಾಳಿ ಬೀಸ ತೊಡಗಿತು ಚಿದಾಕಾಶದಲ್ಲಿ.

ಸುಮ್ಮನೆ ಬೆಪ್ಪಾಗಿ-ಸೊಪ್ಪಾಗಿ ಜಗಲಿಯ ಮೇಲೆ ಕುಳಿತುಬಿಟ್ಟಳು ಸೋತು.

ಸ್ವಲ್ಪ ಹೊತ್ತಿನಲ್ಲಿ ಸರಸು ಸುಡು ಬಿಸಿಲಿನ ಝಳದಿಂದ ಸುಟ್ಟುರಿದು ಬೆವರು ಸುರಿಸುತ್ತಾ ಬಂದು ಮೆಟ್ಟಲೇರಿದಳು. ಮುಖಬಿಂಬ ಬಾಡಿ ಕಂದಿ ಹೋಗಿತ್ತು.

"ಬಿಸಿಲಲ್ಲಿ ಬಂದರೆ ಕಣ್ಣೇ ಮಂಜು ಮಂಜು" ಎಂದಳಾಕೆ.

"ನೀನು ಕೊಡೆ ತಂದಿದ್ದರೆ ಒಳ್ಳೆಯದಿತ್ತು" ನುಡಿಯಲಾರದೆ ನುಡಿದಳು ತಾಯಿ. ಮಗಳ ಆಗಮನ ಸಂತಸ ತಂದರೂ ವಿಷಯ ನಿಷ್ಠೆ ಮನಗೆಡಿಸಿತು.

"ಅಯ್ಯೋ, ಅಷ್ಟೆಲ್ಲಾ ಸುಮಾನ ಮಾಡಿಕೊಳ್ಳಲು ಸಮಯವಾದರೂ ಎಲ್ಲಿ? ಹೇಗೂ ಕೈಕಾಲು ಗಟ್ಟಿ ಇವೆ. ಸಧ್ಯ ನಿಭಾಯಿಸಿಕೊಳ್ಳಬಹುದು ಬಿಡಿ" ಮುಗುಳು ನಕ್ಕಳು ಅವಳು.

ಸರಸು ಕೈಕಾಲು ತೊಳೆದುಕೊಂಡು ಬಂದಳು. ಧೂಳೊತ್ತಿದ ಕೈಕಾಲು ಸ್ವಚ್ಛವಾದುವು.

"ಸದಾನಂದ ಎಲ್ಲಮ್ಮಾ?"

"ಮೀಟಿಂಗ್ ಇದೆ ಎಂದು ಹೊರಟೇ ಹೋದ. ಇನ್ನವನು ಸಿಕ್ಕುವುದು ರಾತ್ರಿಯೇ. ನೀನು ಬರುತ್ತಿ ಎಂದು ಹೇಳಿದ್ದೆ ಕೂಡ. ಅವನು ಹೋಗಿಯೇ ಬಿಟ್ಟ."

ಸರಸು ಮುಖ ಖಿನ್ನವಾಯಿತು. ತುಟಿಗಳು ಬಿರಿಯಲಿಲ್ಲ. ಒಡಲ ಸಂಕಟವೆಲ್ಲ ಮುಖ ಮುದ್ರೆಯಲ್ಲಿ ಹೊಮ್ಮಿತು.

"ಅವನು ಒಪ್ಪುವಂತೆಯೂ ತೋರಲಿಲ್ಲ. ನಾನು ಅಗಾಗ ಈ ಸುದಿಯನ್ನು ತಲೆಗೆ ಹಾಕುತ್ತಲೇ ಇರುವೆ. ಅವನು ಹೂ ಹಾ ಎನ್ನುವುದಿಲ್ಲ. ಬೆನ್ನು ತಿರುವಿ ಹೋಗುತ್ತಾನೆ."

ಸರಸು ಮತ್ತಷ್ಟು ಮ್ಲಾನ ಮುಖಿಯಾದಳು. ಆಸೆಯ ರೆಕ್ಕೆ ಮುರಿಯಿತು.

"ಒತ್ತಾಯ ಮಾಡಿದರೆ ಒಪ್ಪಿಯಾನೇನೋ......ಅವನ ಗೆಳೆಯರ ಮೂಲಕ ಹೇಳಿಸಿ ನೋಡಿದರೆ ಒಳ್ಳೆತು" ಎಂದಳು ನೊಂದು ನೀರಾದ ತಾಯಿ.

"ಅದನ್ನು ನೀವೇ ಮಾಡಿ ಅಮ್ಮ. ನಾನಿಂದು ಹಿಂದಿರುಗಲೇಬೇಕು. ಮನೆಯಲ್ಲಿ ಯಾರೂ ಇಲ್ಲ. ಸದಾನಂದ ಸಿಕ್ಕುತ್ತಾನೆಂಬ ಆಸೆಯಿಂದಲೇ ಬಂದೆ. ನಮ್ಮಿಂದಲೇ ನಮ್ಮ ಮನೆಯ ದೀಪ ಬೆಳಗಲಿ ಎಂಬ ಆಸೆಯಿತ್ತು. ಇವನು ಇಷ್ಟೊಂದು ಗಡಸು ಎಂದುಕೊಳ್ಳಲಿಲ್ಲ ನಾನು."

"ನನಗೂ ತುಂಬಾ ಮನಸ್ಸಿತ್ತು. ಮೊಮ್ಮಗಳಾದರೆ ಮುಂದೆ ನಮಗೆ ಅನುಕೂಲವೇ. ಅದನ್ನು ಅವನ ಮುಂದೆ ಹೇಳಿಯೂ ಆಗಿದೆ. ಅವನೇನು ಯೋಚಿಸಿದ್ದಾನೋ, ಅವನ ಮನಸ್ಸೆಲ್ಲಿದೆಯೋ ದೇವರಿಗೇ ಗೊತ್ತು. ಬಾಯೇ ಬಿಡುವುದಿಲ್ಲ. ಯಾವಾಗಲೂ ಗಂಭೀರ."

ತಾಯಿ ಮಗಳ ಸುಖದುಃಖವೆಲ್ಲ ತಮ್ಮತಮ್ಮೊಳಗೇ ಬಹಳ ಹೊತ್ತು ಕರಗಿದುವು. ಅನಂತರ ಮಗಳು ತಾಯಿಯೊಂದಿಗೆ ತಮ್ಮನನ್ನು ಒಪ್ಪಿಸುವಂತೆ ಬಾರಿಬಾರಿಗೂ ಹೇಳಿಕೊಂಡು ಹೊರಟಳು. ಗದ್ದೆಯಂಚಿನವರೆಗೂ ಹೋಗಿ ಕಳುಹಿಸಿ ಬಂದರು ತಾಯಿ ತಂದೆ.

ದೂರದ ಅಸ್ತಗಿರಿಯ ಮೇಲೆ ಸೂರ್ಯ ಥಳಥಳಿಸುತ್ತ ಮುಳುಗಿದ.

o o o o

ಪ್ರಾತಃಕಾಲೀನ ಶಾಂತ ಪ್ರಶಾಂತ ವಾತಾವರಣ.

ರೈತ ವರ್ಗವೆಲ್ಲ ಕೆಲಸಕ್ಕೆ ಗದ್ದೆ ತೋಟಗಳಿಗೆ ಇಳಿವ ಮುನ್ನ ಅರಳೀ ಕಟ್ಟೆಯ ಮೇಲೆ ಕುಳಿತು ಮಾತಾಡುತಿದ್ದಾರೆ. ಅಲ್ಲಿಂದ ಸ್ವಲ್ಪ ದೂರದಲ್ಲೇ ಮಾಸ್ತರ ಮನೆ. ಇದ್ದಕ್ಕಿದ್ದಂತೆಯೇ ಅಚ್ಚಣ್ಣ ಮಾಸ್ತರ ದನಿ ಜೋರಾಗಿ ಕೇಳಿಸಿತು.

"ಎಲ್ಲರೂ ಬನ್ನಿ. ಬೇಗ ಬಂದು ಉಪಕಾರ ಮಾಡಿ."

ಏನಿರಬಹುದೆಂದು ಎಲ್ಲರೂ ಎದ್ದು ಬಿದ್ದು ಓಡಿಹೋದರೆ ಮಾಸ್ತರ ಅಳಿಯ ಶ್ರೀಧರ ಮಾಸ್ತರು ನೆಲದ ಮೇಲೆ ಬಿದ್ದು ಹೊರಳಾಡುತ್ತ ಸಂಕಟದಿಂದ ನರಳುತಿದ್ದಾನೆ. ಮಾಸ್ತರು–ಮಡದಿ–ಮಗಳು ಕಂಗಾಲಾಗಿದಾರೆ. ಮಾಸ್ತರು ಹಣೆ ಚೆಚ್ಚಿಕೊಂಡು ಎಲ್ಲರನ್ನೂ ಕೈ ಮುಗಿದು ಅಂಗಲಾಚಿದರು "ಶ್ರೀಧರನಿಗೆ

ಹಾವು ಕಚ್ಚಿದೆ. ಯಾರಾದರೂ ಮದ್ದುಕೊಟ್ಟು ಜೀವ ಉಳಿಸಿರಿ. ಕಾಪಾಡಿ.... ಕಾಪಾಡಿ!" ಎಂದು ಒಂದೇ ಸಮನೆ ಮಾಸ್ತರು ಕೈಮುಗಿದು ಬೇಡಿಕೊಳ್ಳುತ್ತಿದ್ದಾರೆ. ಅವರು ಅಂಗಲಾಚುವಿಕೆ ಅತ್ಯಂತ ಕರುಣಾಜನಕವಾಗಿತ್ತು, ಕರುಳು ಕತ್ತರಿಸುವಂತೆ. ಅಳಿಯನ ಪ್ರಾಣಾಂತಕ ಗೋಳು. ತಾಯಿ ಮಗಳ ರೋದನ ಎದೆಯೊಡೆಸುವಷ್ಟು ಅಸಹನೀಯ.

ಸುದ್ದಿ ಬಿರುಗಾಳಿಯಂತೆ ಊರಿನಲ್ಲಿ ಹರಡಿ, ಜನ ಓಡೋಡುತ್ತ ಬಂದರು. ಮದ್ದು ಬಲ್ಲವರು ಹಸುರು ಮದ್ದಿನ ಸಹಿತ ಬಂದರು. ಯಾರು ಯಾರೋ ಯಾವುಯಾವುದೋ ಮದ್ದನ್ನು ಕುಡಿಸಿ ಗಾಯಕ್ಕೂ ಕಟ್ಟಿ ತಮ್ಮ ತಮ್ಮ ಕೈಲಾದ ಪ್ರಯತ್ನ ಮಾಡಿದರು. ಉಗ್ರ ವಿಷದ ಜ್ವಾಲೆ ಇನಿತೂ ತಗ್ಗಲಿಲ್ಲ. ಊರಿಗೇ ಊರೇ ನೆರೆಯಿತು. ಮಾಸ್ತರಿಗಾಗಿ ಎಲ್ಲರ ಕಣ್ಣಿನಲ್ಲೂ ಬಳಬಳ ನೀರು. ಅಚ್ಚಣ್ಣ ಮಾಸ್ತರ ಸ್ನೇಹಾನುರಾಗ ಎಲ್ಲರನ್ನೂ ಕಂಬನಿಯ ಕೋಡಿಯಲ್ಲಿ ಮುಳುಗಿಸಿತು. ಸ್ವಲ್ಪ ಸಮಯದೊಳಗಾಗಿ ಶ್ರೀಧರ ಮಾಸ್ತರು ಸ್ವರ್ಗದ ಬಾಗಿಲನ್ನು ತಟ್ಟಿದ. ಎಲ್ಲರೂ ಅಚ್ಚಣ್ಣ ಮಾಸ್ತರಿಗೆ ಅನುಕಂಪ ತೋರುವವರೇ. ಒಳ್ಳೆಯ ಮಾತಾಡಿ ಸಾಂತ್ವನ ನೀಡುವವರೇ. ಆದರೇನು? ಅಳಿಯ ಹೋಗಿಯೇ ಬಿಟ್ಟ. ಅಂತ್ಯ ಸಂಸ್ಕಾರವೂ ನಡೆಯಿತು. ಅವರ ನೋವು-ದುಃಖ–ಸಂಕಟ ವರ್ಣನಾತೀತ.

ಸದಾನಂದ ಅವರ ಸಂಕಷ್ಟದಲ್ಲಿ ಸಮಭಾಜನನಾದ. ತೋಟ ಗದ್ದೆಗಳ ಉಸ್ತುವಾರಿಯೂ ಅವನದೇ. ಮಾಸ್ತರ ಕುಟುಂಬಕ್ಕೂ ಸಾಂತ್ವನದ ಮಾತುಗಳನ್ನಾಡಿ ಧೈರ್ಯ ತುಂಬುವವನೂ ಅವನೇ. ತಂದೆಯಿಲ್ಲದ ಮಗು–ನಂದಿನಿ ಸದಾನಂದನಿಗೆ ಹೆಚ್ಚುಹೆಚ್ಚಾಗಿ ಹೊಂದಿಕೊಂಡಿತು. ಅವನು ಬಂದೊಡನೆಯೇ ಓಡುತ್ತಲೇ ಹೋಗಿ ಎದೆಯನ್ನು ಏರುತಿತ್ತು. ಅವನು ಮರೆತರೂ ಅದು ಮರೆಯುವಂತಿಲ್ಲ. ಜೊಲ್ಲು ಸುರಿಸುತ್ತಾ "ಅಣ್ಣಣ್ಣಾ!" ಎನ್ನುವುದು ನಿತ್ಯ ಕ್ರಮ. ಅವನ ಮುಖ ನೋಡದಿದ್ದರೆ ಮಗುವಿನ ಗೋಳು ಮೇರೆ ಮೀರುತಿತ್ತು. ಸದಾನಂದ ಗದ್ದೆತೋಟಗಳ ಕಡೆ ಎತ್ತಿಕೊಂಡು ಹೋಗಿ ಬರುವ. ಅವನು ಎಷ್ಟೇ ಸಹಕಾರ ನೀಡಿದರೂ ಅವರ ದುಃಖ ಅರುಗಾಗದು. ಸಂಕಟ

ಪರಿಹಾರವಾಗದು. ಸದಾ ತವುಗಾಗಿ ಎಲ್ಲಿಲ್ಲದ ಶ್ರಮವಹಿಸುತಿದ್ದುದನ್ನು ಕಂಡು ಸದಾನಂದನ ಮೇಲೆ ಎಲ್ಲಿಲ್ಲದ ಪ್ರೀತಿ ಮಾಸ್ತರಿಗೆ.

ಸದಾನಂದ ಅತ್ತ ತನ್ನ ಮನೆಯ ಕೆಲಸ ಕಾರ್ಯಗಳನ್ನೂ ನಿರ್ಲಕ್ಷಿಸದೆ, ಸಮಾಜ ಸೇವಾ ಕಾರ್ಯಗಳಲ್ಲೂ ಭಾಗವಹಿಸುತ್ತ ಮಾಸ್ತರಿಗೂ ನೆರವು ನೀಡುತಿದ್ದ. ಮಾಸ್ತರಿಗಲ್ಲದಿದ್ದರೂ ನಂದಿನಿಗಾಗಿ ಒಮ್ಮೆಯಾದರೂ ಮುಖ ತೋರಿಸಲೇಬೇಕಾಗಿ ಬಂತು ಅವನಿಗೆ.

ಸಿರಿವಂತರ ಮಗ ತಮಗಾಗಿ ತೆಗೆದುಕೊಳ್ಳುವ ಶ್ರಮವನ್ನು ನೆನೆದರೆ ಸುಖ ದುಃಖಗಳಿಂದ ತುಂಬಿ ಹೋಗುತ್ತದೆ ಒಡಲು. ಮಗುವಿನಿಂದಾಗಿ ಕಮಲಾನಿ ಹೊರಬಂದು ಒಂದೊಂದು ಮಾತಾಡುತ್ತಾಳೆ. ದುಃಖ ಸಂಕಟವನ್ನು ತನ್ನಲ್ಲೇ ಹುಗಿದುಕೊಂಡರೂ ಸಮಾಧಾನದ ಹಿನ್ನೆಲೆಯಲ್ಲಿ ದುಃಖದ ಛಾಯೆ ಸುಸ್ಪಷ್ಟ.

"ಕಮಲಾನಿ ನಿನ್ನಂತಹ ಅಭಾಗಿನಿಯರ ಸೇವೆಗೆ ನೀನು ಮುಂದಾಗು. ಮನೆಮನೆಯಲ್ಲೂ ತೀರಾ ದುಃಖಿನಿಯರು ಮೂಲೆಯಲ್ಲಿರುತ್ತಾರೆ. ನೀನು ಅವರ ಸಂಕಟವನ್ನು ನೋಡಿ, ನಿನ್ನನ್ನು ನೀನು ಸುಧಾರಿಸಿಕೊಳ್ಳಬೇಕು. ನೀನು ಸೊರಗಿದರೆ ಹೇಗೆ ? ನಂದಿನಿಗೆ ತಾಯಿ ಬೇಡವೇ ? ನೀನು ಹೀಗೆ ಕೊರಗಬಾರದು," ಎಂದ ಆತಂಕಿತವಾಣಿಯಲ್ಲಿ ಸದಾನಂದ.

ಕಮಲಾನಿಯೂ ಪ್ರಯತ್ನಪೂರ್ವಕವಾಗಿ ಹುಬ್ಬೆತ್ತಿ ನೋಡಿದರೂ ನಿರುತ್ತರೆ. ತುಟಿಗಳು ಬಿರಿಯಲಿಲ್ಲ. ಒಮ್ಮೊಮ್ಮೆ ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡುತ್ತದೆ. ಅವಳದನ್ನು ತೋರಗೊಡದಿರಲು ಸರ್ವ ಸಾಹಸಾ ಪ್ರಯತ್ನಿಸುತ್ತಾಳೆ. ದುಃಖವನ್ನು ಮರೆಯಬೇಕು ; ಮರೆಯಲಾರಳು.

"Please, ಅದೆಲ್ಲಾ ಕೂಡದು. ನೀನಿರುವುದು ನಾಗರಿಕ ಕಾಲಮಾನದಲ್ಲಿ...ಜೀವನಕ್ಕೆ ಅಧಿಕ ಮಾರ್ಗಗಳಿವೆ. ಚಿಂತಿಸಬೇಡ."

ಕಮಲಾನಿ ತನ್ನೊಳಗೇ ನೋವನ್ನು ನುಂಗಿಕೊಂಡಳು, ಮುಖವನ್ನು ಬೇರೆಡೆಗೆ ತಿರುಗಿಸಿ. ತಲೆಯೆತ್ತಿ ನೋಡಲಾರಳು ಕೂಡ.

ಕಾಲಮಾನ ಉರುಳುತ್ತಲೇ ಇದೆ, ಯಾರ ನೋವಿಗೂ ಸ್ಪಂದಿಸುವ ಗೋಜಿಲ್ಲ. ನೋವು ನಿಡಿಗಳ ಸೋಂಕಿಲ್ಲ.

ಕಮಲಾನಿ ಆತನ ಸ್ನೇಹೋಪಚಾರಕ್ಕೆ ಮಣಿದರೂ ಭವಿಷ್ಯವನ್ನು ಕುರಿತು ಎಂದೂ ಯೋಚಿಸಲಿಲ್ಲ. ಈ ಜೀವನ ಇಷ್ಟೆ... ನಾವೊಂದು ನೆನೆದರೆ ದೈವವೊಂದು ನೆನೆಯುತ್ತದೆ ಎಂಬ ನಿರಾಶಾಯುಕ್ತ ಭಾವನಾತರಂಗಗಳಲ್ಲಿ ಮುಳುಗಿ ಕೊಚ್ಚಿ ಹೋಗುತ್ತಾಳೆ ಎಂದಿನಂತೆಯೇ.

ನಂದಿನಿ ಪುಟ್ಟಪುಟ್ಟ ಹೆಜ್ಜೆಗಳನ್ನಿಟ್ಟು ಅಂಗಳದಲ್ಲಿ ಓಡಾಡುತ್ತ ಮುದ್ದಿನ ಮಾತುಗಳಿಂದ ಮನ ತಣಿಸುತ್ತಾಳೆ, ನೊಂದ ಮನಃಪ್ರಾಣಗಳಿಗೆ ಪರಮ ಹಿತವನ್ನೂಡಿಸುವಂತೆ.

ಸ್ವಾಮಿನಿ ಒಮ್ಮೆ ಸದಾನಂದನಿಗೆಂದಳು "ನಾವು ಬಂಧು ಬಳಗವನ್ನೆಲ್ಲಾ ಹಿಂದೆ ಬಿಟ್ಟು ಈ ಊರಿನ ವಾತಾವರಣಕ್ಕೆ ಮೆಚ್ಚಿ ನೆಚ್ಚಿ ಇಲ್ಲಿಯೇ ಉಳಿದೆವು. ದೇವರು ಕರುಣೆ ತೋರಿದ್ದರೆ ನಮಗಿಲ್ಲಿ ಯಾವ ಕೊರತೆಯೂ ಇರಲಿಲ್ಲ. ಈಗ ಆದದ್ದೇನು ? ನಮ್ಮ ಭಾಗಕ್ಕೆ ನೀನೂ ಇಲ್ಲದೇ ಹೋಗಿದ್ದರೆ ನಾವು ಯಾರ ಕೈ ಕಾಲು ಕಟ್ಟಬೇಕಿತ್ತು ಹೇಳು ? ಈ ವೃದ್ಧಾಪ್ಯದಲ್ಲಿ ದೇವರು ಎಂಥಾ ಕಷ್ಟ ಕೊಟ್ಟ ? ಸಾಮಾನ್ಯದ ಪೆಟ್ಟಾಗಿದ್ದಿದ್ದರೆ ನಾವು ಹೆದರುತ್ತಿರಲಿಲ್ಲ. ಆದರೆ ಹೀಗಾಗಬಾರದಿತ್ತು. ಇನ್ನೂ ಮುಗ್ಧ ದುಗ್ಧ ಮನಮತಿಯ ಮಗಳು. ಯಾವ ರೀತಿಯಲ್ಲಿ ನೋಡಿ ಸಹಿಸಲಿ ಹೇಳು ?"

"ಅಮ್ಮಾ, ಚಿಂತಿಸಬೇಡಿ. ಕಷ್ಟಕೊಟ್ಟ ದೇವರು ಮುಂದಾರಿಯನ್ನೂ ತೋರುತ್ತಾನೆ. ಕಾಲವೆಲ್ಲ ಇಂದಿಗೇ ಮುಗಿಯಲಿಲ್ಲ. ನೋಡೋಣ, ಮುಂದೆ ನಮ್ಮಿಂದ ಏನಾದರೂ ಸಾಧ್ಯವಾದೀತೋ...ಬಿಡಿ, ನಾನಂತೂ ಈ ದೇಹದಲ್ಲಿ ಕೊನೆಯ ಹನಿರಕ್ತ ಇರುವವರೆಗೂ ನಿಮಗೆ ಏನೇನು ಮಾಡಬೇಕೋ ಅದನ್ನು ಮಾಡಿಯೇ ತೀರುವೆ. ಸ್ನೇಹ–ಪ್ರೇಮಗಳ ನೆಲೆಬೆಲೆಯನ್ನು ಅರಿತಮೇಲೆ ಹಿಂಜರಿತವೇಕೆ ? ಸಾಮಾಜಿಕ ಸೇವೆ ಅಂದಮೇಲೆ ನಿಮ್ಮ ಸಮಸ್ಯೆಯೊಂದು ಹಿರಿದೇನಲ್ಲ, ದಯವಿಟ್ಟು ಸಮಾಧಾನ ಮಾಡಿಕೊಳ್ಳಿರಿ." ಭಾವೋದ್ವೇಗದಿಂದ ನುಡಿದ ಸದಾನಂದ.

"ಸರಿಯಪ್ಪಾ, ಸರಿ. ನಮಗೆ ವಯಸ್ಸಾಯ್ತು. ಜೊತೆಗೊಂದು ಗಂಡು ಜೀವ ಇಲ್ಲದಂತಾಯಲ್ಲ ಹೇಳು."

ಸುದೀರ್ಘವಾದ ನಿಟ್ಟುಸಿರನ್ನು ಹೊರ ಹಾಕಿದಳು ಸ್ವಾಮಿನಿ.

ಸದಾನಂದ ಚಿಂತಿತನಾದ. ಹೃದಯ ಕುಂಡದಲ್ಲಿ ಸಂಕಟದ ಸುಯ್ಲಾಡಿತು. ದೂರ ಭವಿಷ್ಯದ ಆಳದಲ್ಲಿ ಮುಳುಗಿ ತೇಲುತ್ತಾ ಹುಲ್ಲು ಕಡ್ಡಿಯಂತೆ ಕೊಚ್ಚಿ ಹೋದ.

ಅಚ್ಚಣ್ಣ ಮಾಸ್ಟರು ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿಸುತ್ತ ಹೇಳಿದರು "ನಾವು ಕಟ್ಟಿದ್ದು ಕನಸಿನ ಗೋಪುರ! ಅದರಲ್ಲೇ ನಮ್ಮ ಆಸೆ ಆಕಾಂಕ್ಷೆಗಳೆಲ್ಲ ಕೇಂದ್ರೀಕೃತವಾಗಿದ್ದುವು. ಈ ಜೀವನ ಇಷ್ಟು ಕ್ಷಣಿಕ ಎಂಬುದು ತಿಳಿದು ಬಂದುದು ಈಗಲೇ. ನಾನಿದುವರೆವಿಗೂ ಕಷ್ಟ ಕಂಡವನೇ ಅಲ್ಲ. ಇದ್ದುದರಲ್ಲಿ ಸಂತೃಪ್ತಿ ಪಟ್ಟುಕೊಂಡಿದ್ದವನು. ಹುಡುಗ ನಮ್ಮ ಹೊಟ್ಟೆಯ ಮಗನಂತೆಯೇ ಹೊಂದಿಕೊಂಡು ನಮ್ಮ ಜೀವನಾಕಾಂಕ್ಷೆಗೆ ಪುಟ ವಿಟ್ಟಿದ್ದ. ಆದರೆ, ಅದೆಷ್ಟು ಬೇಗ ನಮ್ಮ ಕನಸಿನ ಗೋಪುರ ಕಳಚಿ ಬಿತ್ತು? ನಮ್ಮ ಇದುವರೆಗಿನ ಎಲ್ಲಾ ಶ್ರಮವೂ ವ್ಯರ್ಥವಾಗುವಂತಹ ತಪ್ಪಾದರೂ ಏನಿತ್ತು? ಈ ಇಳಿ ವಯಸ್ಸಿನಲ್ಲಿ ನನ್ನ ಮಗಳನ್ನು ಯಾರ ಕೈಗೆ ಹಾಕಿ ಹೋಗಲಿ? ಭಗವಂತ ಏಕೆ ಈ ಕಷ್ಟಕೊಟ್ಟ?" ಎಂದರು ದೀರ್ಣವಿದೀರ್ಣ ವಾಣಿಯಲ್ಲಿ. ಶೋಕತಪ್ತ ಮುಖಬಿಂಬ ಬಣ್ಣಗೆಟ್ಟು ವಿವರ್ಣವಾಗಿತ್ತು. ದೇಹ ಸೊರಗಿ ಅರೆಜೀವವಾಗಿದ್ದಾರೆ. ಕಣ್ಣುಗಳ ರಂಗು ಮಾಸುವಂತೆಯೇ ಇಲ್ಲ.

ಸದಾನಂದ ಕರುಣಕಾತರ ತುಂಬಿದ ದನಿಯಲ್ಲಿ ಸ್ವಾಂತನಗೈಯುವ ರೀತಿಯಲ್ಲಿ "ಮಾಸ್ತರೇ, ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆ, ಎಂಬ ಮಾತು ಸುಳ್ಳಲ್ಲ. ಜೀವನಕ್ಕೆ ನಾನಾ ಮಾರ್ಗಗಳಿವೆ. ಒಂದಲ್ಲ, ಒಂದು ರೀತಿಯಲ್ಲಿ ದಾರಿಗೆ ಹಚ್ಚಬಹುದು. ನಿಮಗೆ ಯಾವ ರೀತಿಯ ನೆರವನ್ನಾದರೂ ನಾನು ನೀಡಬಲ್ಲೆ. ನನ್ನ ಮಾತಿನಲ್ಲಿ ನಂಬುಗೆಯಿಟ್ಟು ದುಃಖ ಶಮನ ಮಾಡಿಕೊಳ್ಳಿ. ದೇವರು ಒಂದಲ್ಲ ಒಂದು ದಾರಿ ತೋರಿಸುತ್ತಾನೆ."

ಮಾಸ್ತರ ತುಟಿಗಳು ಬಿರಿಯಲಿಲ್ಲ, ಗಂಭೀರ ಮೌನ ತಾಳಿದರು.

o o o o

ಅಂದು, ಸದಾನಂದ ಮನೆಯಲ್ಲಿ ತಾಯಿ ತಂದೆಯರ ವಾದ ವಿವಾದಕ್ಕೆ ತಲೆ ಮಣಿಯದೆ ಒಂದೇ ನಿರ್ಧಾರದಿಂದ ಉತ್ತರ ನೀಡಿದ "ಅಪ್ಪಾ, ನಾನು ಯಾವುದೇ ಹೆಣ್ಣನ್ನು ಕೈಹಿಡಿದರೂ ನಿಮ್ಮನ್ನು ನಿರ್ಲಕ್ಷಿಸುವಂತಹ ಅಪರಾಧ ಮಾಡುವುದಿಲ್ಲ ಬಿಡಿ. ನಿಮ್ಮ ಸೇವೆಯನ್ನು ಎಷ್ಟು ಸಾಧ್ಯವೋ ಅಷ್ಟು ಪ್ರೀತಿ-ವಿಶ್ವಾಸ-ಗೌರವಗಳಿಂದ ನೋಡಿಕೊಳ್ಳುವುದು ನನ್ನ ಭಾರ. ಇಡೀ ಸಮಾಜ ಸೇವೆಗಾಗಿ ಹಂಬಲಿಸುವ ನಾನು ನಿಮ್ಮ ಸೇವೆ ಮಾಡಲಾರೆನೇ ? ಯೋಚಿಸಿ ನೋಡಿ. ನಿಮಗೇಕಿಷ್ಟು ಕಳವಳ ? ಅಥವಾ ಅನುಮಾನ ? ಸರಸಕ್ಕನಿಗೆ ನಾನೇ ಸೂಕ್ತ ವರನನ್ನು ಹುಡುಕಿ ಕೊಡುವೆ. ಅವರಿಗೂ ಬೇಸರ ಬೇಡ."

ಆ ಮಾತಿಗೆ ಯಾರ ತುಟಿಗಳೂ ಬಿರಿಯಲಿಲ್ಲ.

"ಅಲ್ಲದೆ, ನಾನು ಯಾವ ಹೆಣ್ಣನ್ನು ಕೈಹಿಡಿದರೂ ಅದಕ್ಕೆ ನಿಮ್ಮ ಅಡ್ಡಿಯಿರಕೂಡದು.

ಅದಕ್ಕೂ ಮಾರುತ್ತರ ಬರಲಿಲ್ಲ. ವಿಷಯಾನುಕ್ರಮಣಿಕೆಯೆಲ್ಲಾ ಒಡ ಲಾಳದಲ್ಲಿ ಮುದುಡಿತು. ಬಿಸಿಯುಸಿರು ಹೃದಯತಂತುಗಳಲ್ಲಿ ಮೆಲ್ಲನೆ ಹರಿದಾಡಿತು.

ಅವನು ಗಂಭೀರ ಗತಿಯಲ್ಲಿ ಹೊರಬಿದ್ದ.

ಅಚ್ಚಣ್ಣ ಮಾಸ್ತರ ಮನೆ ಮುಟ್ಟಿದಾಗ ಪ್ರಥಮ ದರ್ಶನ ನಂದಿನಿಯದು.

ಎರಡೂ ಕೈಗಳಿಂದ ಸ್ವಾಗತ ನೀಡಿ ಎರಡೂ ಕೆನ್ನೆಗಳಿಗೆ ಮುದ್ದಿನ ಮಳೆ ಗರೆದ. ಕುಸುಮ ಕೋಮಲ ಕೈಗಳಿಂದ ಕೊರಳನ್ನು ತಬ್ಬಿದಳು ಅವಳು.

"ನೋಡು ನಾನು ನಿನಗೆ ಎಷ್ಟೊಂದು ಮುದ್ದು ಕೊಟ್ಟೆ ? ನೀನೂ ಸಹ ಒಳ್ಳೆ ಮುದ್ದು ಕೊಡಲೇಬೇಕು. ಈ ಕೆನ್ನೆಗೊಂದು ಆ ಕೆನ್ನೆಗೊಂದು."

ನಂದಿನಿ ಸಿಹಿ ಮುತ್ತುಗಳನ್ನೊತ್ತಿ ಮುದ್ದು ಮಾತುಗಳಿಂದ ಕೇಳಿದಳು, "ಇಂದು ದೂರ ಕರೆದೊಯ್ಯುತ್ತೀರಾ ?"

"ಎಲ್ಲಿಗೆ ಹೋಗಬೇಕು ಹೇಳು ? ತೋಟ, ಶಾಲೆ, ದೇವಸ್ಥಾನ, ಅಂಗಡಿ. ಎಲ್ಲಿಗೆ ಹೋಗಬೇಕು ಹೇಳು ? ಯಾವ ಸ್ಥಳ ನಿನಗೆ ಇಷ್ಟ ?"

"ಅಂಗಡಿಗೆ ಹೋಗೋಣವೇ ಚಾಕಿ ಬೇಕು ನನಗೆ!"

"ಆಗಲಿ, ನೀನು ಎಲ್ಲಿಗೆ ಹೇಳಿದರೆ ಅಲ್ಲಿಗೆ. ಹೋಗೋಣ. ಮೊದಲು ದೇವಸ್ಥಾನಕ್ಕೆ. ಅಲ್ಲಿಯು ಅಂಗಣದಲ್ಲಿ ಪೂಜೆಯಿದೆ. ಸಭೆಯಿದೆ. ಮೀಟಿಂಗ್ ಇದೆ. ಅಲ್ಲಿ ತುಂಬ ಮಕ್ಕಳಿರುತ್ತಾರೆ."

"ಹಾಗೆಂದರೆ...?"

"ಎಲ್ಲಾ ತೋರಿಸುವೆ ನಿನಗೆ. ಆನಂತರ ನೀನೇ ಹೇಳು, ಚೆನ್ನಾಗಿತ್ತೊ ಇಲ್ಲವೋ"

ಮಗು ಮುದ್ದು ನಗೆ ಬೀರಿತು.

ಕಮಲಾನಿ ಮಗುವನ್ನು ಕರೆದೊಯ್ಯಲು ಹೊರ ಬಂದಳು. ಆದರೆ ಅದು ಹೋಗಬೇಕೆ?

"ಉಹೂ...ಉಹೂ" ಎನ್ನುತ್ತ ಅವನ ಕೊರಳನ್ನು ಬಿಗಿದು ಹಿಡಿಯಿತು ನಳಿದೋಳುಗಳಿಂದ.

"ಕಮಲಾನಿ, ನೀನು ಎಷ್ಟು ಸೊರಗಿದ್ದೀ ಎಂದರೆ ನೋಡುವಂತಿಲ್ಲ. ನಿನ್ನ ಮನಕ್ಕೆ ಸಮಾಧಾನ ಊಡುವ ಸಲುವಾಗಿಯೇ ನಾನು ದಿನಾ ಬರುತ್ತಿರುವುದು. ಆದರೂ ಸುಧಾರಿಸಲಿಲ್ಲವಲ್ಲಾ?"

ಅವಳ ಸೊರಗಿದ ಮುಖಬಿಂಬ ಇನ್ನಷ್ಟು ಬಾಡಿ ಕಣ್ಣುಗಳಂಚಿನಲ್ಲಿ ಕಂಬನಿ ತುಂಬಿ ಕಡಲಾಯಿತು. ಹುಬ್ಬೆತ್ತಿ ನೋಡಲಾರದೆ ತಲೆ ಬಾಗಿದಳು.

"ಕಮಲಾನಿ, ನೀನು ಕಳೆದ ಅಧ್ಯಾಯದ ಕಡೆ ನೋಡುವುದು ವ್ಯರ್ಥ. ಮುಂದಿನ ಅಧ್ಯಾಯದ ಬಗ್ಗೆ ತೀವ್ರವಾಗಿ ಯೋಚಿಸು. ಮನಸ್ಸಿದ್ದಲ್ಲಿ ಮಾರ್ಗವಿದೆ. ಹೊಸ ಯೋಜನೆ ಹೂಡುವುದರಲ್ಲೇ ಶಾಂತಿ ಲಭಿಸಬೇಕಾದರೆ." ಕರುಣಾರ್ದ್ರ ಹೃದಯದಿಂದ ನುಡಿದ ಸದಾನಂದ, ತಲೆಯಮೇಲೆ ಹಸ್ತವನ್ನಿಟ್ಟ.

ಅವಳ ಮೂಕ ಮೌನವೇ ಉತ್ತರವಾಯಿತು. ಪ್ರಯತ್ನಿಸಿದರೂ ತುಟಿಗಳು ಬಿರಿಯವು.

"ಇನ್ನು ಮುಂದೆ ಸಾಮಾಜಿಕ ಸೇವೆಗೆ ನಿನ್ನನ್ನೂ ಕರೆದೊಯ್ಯುವ ಯೋಜನೆಯಲ್ಲಿರುವೆ. ಅತ್ಯಂತ ಮುಗ್ಧದುಗ್ಧ ಕುಟುಂಬಗಳ ಶೋಚನೀಯ ಸ್ಥಿತಿಯನ್ನು ನೋಡಿದರೆ ನೀನು ಖಂಡಿತ ನಿನ್ನ ಕಷ್ಟವನ್ನು ಮರೆಯುತ್ತಿ. ನೀನು ಹೊಸಬಾಳಿನ ಅಧ್ಯಾಯವನ್ನು ತೆರೆಯಲು ಸಿದ್ಧಳಾಗುವುದೇ ಸಮಾಜೋದ್ಧಾರ ಕಾರ್ಯಕ್ಕೆ ಪ್ರಥಮ ಹೆಜ್ಜೆ."

ಕಮಲಾನಿ ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಳ್ಳಲು ಸರ್ವ ಸಾಹಸಾ ಪ್ರಯತ್ನ ಪಟ್ಟಳು. ಒಡಲಾಳದ ದುಃಖ ಮುಖ ಮುದ್ರೆಯಲ್ಲಿ ಹೊಮ್ಮಿತು. ಅಂದಿಂದಿಗೂ ತನಗೆ ನೀಡುತ್ತಿರುವ ಧೈರ್ಯ-ಉತ್ತೇಜನ-ಸ್ಫೂರ್ತಿಗಳಿಗೆ ಇತಿಮಿತಿಯೇ ಇಲ್ಲ. ಆದರೂ ದುಃಖಪೂರ್ಣ ಎದೆಯಲ್ಲಿ ಧೈರ್ಯದ ಕಿಡಿ ಮೂಡುತ್ತಲೇ ಇಲ್ಲ. ಮುಂದೆಂದಾದರೂ ತನ್ನ ಬಾಳಿಗೆ ಬೆಳಕು ಬಂದೀತೆಂಬ ನಂಬುಗೆಯ ಛಾಯೆಯೂ ಸುಳಿಯದು. ಯೋಚನೆಯ ಸುಳಿಯಲ್ಲಿ ಸಿಕ್ಕಿ ಸುಮ್ಮನಾದಳು.

"ಮಗೂ, ನೀನು ಹಾಲು ಕುಡಿಯುವುದಿಲ್ಲವೇ? ಇಗೋ ಅಮ್ಮ ಕಾದಿದ್ದಾಳೆ. ಒಳಹೋಗಿ ತಿಂಡಿ ತಿಂದು ಬಾ ಮರೀ."

"ಉಹೂ..." ಇನ್ನಷ್ಟು ಬಿಗಿಯಾಗಿ ಕೊರಳನ್ನು ತಬ್ಬಿಕೊಂಡಳು ನಂದಿನಿ.

"ಹೋಗುಮರೀ, ಹೊತ್ತಾಯ್ತು. ನನಗೆ ಬೇರೆ ಕೆಲಸವಿದೆ."

"ಉಹೂ....ಉಹೂ."

ಆಗ ಸ್ವಾಮಿನಿ ಹೊರಬಂದು ಮಗುವನ್ನು ಬಲಾತ್ಕಾರವಾಗಿ ಎತ್ತಿಕೊಂಡಳು. ನಂದಿನಿಯು ದೊಡ್ಡ ಹುಯ್ಲೆಬ್ಬಿಸಿ ಅಳತೊಡಗಿದಳು. ಸದಾನಂದ ಬೇಗನೆ ಕಣ್ಮರೆಯಾದ. ಮ್ಲಾನಮುಖಿ ಕಮಲಾನಿಯ ಚಿತ್ತಭಿತ್ತಿಯಲ್ಲಿ ಶ್ರೀಧರ ಸುಳಿದಳಿದ.

o o o o

ಸದಾನಂದನ ಸಾಮಾಜಿಕ ಮತ್ತು ರಾಜಕೀಯ ಚಟುವಟಿಕೆಗಳಿಗೆ ಎಣೆಯೇ ಇಲ್ಲ. ಯುವ ಜನರ ಒಗ್ಗಟ್ಟು ನಾನಾ ಕಾರ್ಯಕ್ರಮಗಳಿಗೆ ಹುರುಪು-

ಉತ್ಸಾಹಗಳನ್ನು ಅವ್ಯಾಹತವಾಗಿ ನೀಡುತ್ತದೆ. ಹುಡುಗರು ಹರುಷದಿಂದ ಮುನ್ನುಗ್ಗುತ್ತಾರೆ. ಹುಡುಗಿಯರು ಮಾತ್ರ ಇನ್ನೂ ತೆರೆಯ ಮರೆಯಲ್ಲೇ ಇದ್ದಾರೆ. ಅವರನ್ನು ಹೊರಡಿಸಲು ಸರಿಯಾದ ಮಹಿಳಾ ಮುಂದಾಳುಗಳ ಅಗತ್ಯವಿತ್ತು. ಆದರೆ ಅಂಥವರು ಯಾರೂ ಇಲ್ಲವೇ ಇಲ್ಲ. ಹಳ್ಳಿ ಅಂದರೆ ಹಳ್ಳಿ. ಮಾಸ್ತರ ಮಡದಿ ಸೀತಮ್ಮನನ್ನು ಹೊರಡಿಸುವ ಯೋಜನೆ ಸದಾನಂದನಿಗೆ. ಅದೇ ವಿಚಾರವಾಗಿ ಕಮಲಾನಿಯೂ ಹೊರಹೊರಟರೆ ಒಳ್ಳಿತು ಎಂಬ ಆಸೆಯೂ ಇತ್ತು. ಆದರೆ ಸ್ವಾಮಿನಿ ತಮಗಾದ ಅಗಾಧವಾದ ಹೊಡೆತದಿಂದ ಹೊರ ಹೊರಡುವುದೇ ಕಷ್ಟ ಎನಿಸಿರುವಾಗ ಇನ್ನು ಸಾಮಾಜಿಕ ಕ್ಷೇತ್ರದಲ್ಲಿ ದುಡಿಮೆ ಎಂದರೆ ಧೈರ್ಯ ಮೂಡುವುದು ಕಷ್ಟವೇ.

ಸದಾನಂದನ ಬೇಡಿಕೆಗೆ ಸೀತಮ್ಮ 'ಅಸ್ತು' ಎನ್ನಲಿಲ್ಲ.

ಕಮಲಾನಿ ಒಳಹೋಗಿ ಕಣ್ಮರೆಯಾದಳು. ಆದರೂ ಬಿಡದೆ ಸದಾನಂದ ಬಾಗಿಲಲ್ಲಿ ನಿಂತು "ನೀನು ನನ್ನೊಂದಿಗೆ ಹೊರಟರೆ, ನಿನ್ನೊಂದಿಗೆ ಅಮ್ಮನೂ ಹೊರಡುತ್ತಾರೆ. ಅದರಿಂದ ನಿನಗೆ ಮನಶ್ಶಾಂತಿ ಮಾತ್ರವಲ್ಲದೆ ಊರಿನ ಅಬೋಧ ಹೆಣ್ಣುಗಳ ಬಾಳಿಗೆ ಬೆಳಕು ಬೀರಿದಂತಾಗುತ್ತದೆ. ಖಂಡಿತ ಯೋಚಿಸಿ ನೋಡು" ಎಂದ.

ಅವಳ ರುದ್ರ ಮೌನವೇ ಉತ್ತರವಾಯ್ತು.

ಅಜ್ಜಣ್ಣ ಮಾಸ್ತರು ಓದುತಿದ್ದ ಪುಸ್ತಕವನ್ನು ಮುಚ್ಚಿ ನುಡಿದರು,

"ನೀನು ಹೇಳುವುದು ಅಥಾ‌ತ್ ಸತ್ಯ. ಮನೆಯಲ್ಲಿ ಕುಳಿತು ವ್ಯಮನ ಮುದುಡುವುದಕ್ಕಿಂತ ಹೊರಹೋಗುವುದು ಇಬ್ಬರಿಗೂ ಒಳ್ಳಿತು." ಎಂದ ಬಳಿಕ ಮಡದಿಗೆಂದರು "ಸೀತೂ, ಸೀತಮ್ಮಾ, ಸದಾನಂದ ಅಷ್ಟು ಕೇಳಿ ಕೊಂಡರೂ ನಿಮ್ಮ ಹಿಂಜರಿತ ಅರ್ಥವಿಲ್ಲದ್ದು. ಹೊರಹೋಗಿ ಬಂದರೆ ಒಳ್ಳಿತು. ಮನೆಯಲ್ಲಿ ಕುಳಿತು ಮಾಡುವುದಾದರೂ ಏನು? ಇಂದಿನ ಮೀಟಿಂಗಿನಲ್ಲಿ ನಾನೂ ಮಾತಾಡುವುದಿದೆ. ಎಲ್ಲರೂ ಕೂಡಿ ಹೋಗಿ ಬರೋಣ."

ಸ್ವಾಮಿನಿ ಸ್ವಲ್ಪ ಹೊತ್ತು ತನ್ನೊಳಗೇ ಯೋಚಿಸುತಿದ್ದು ಅನಂತರ ನುಡಿದಳು,

"ಆಯಿತು–ಹೋಗಿ ಬರೋಣ. ನಮ್ಮ ಸಭೆಯಲ್ಲಿ ಏನೇನು ಕಾರ್ಯ ಕ್ರಮವಿದೆಯೋ? ಬಹಳ ಹೊತ್ತಾಗುವುದಾದರೆ ಮಗು ಸುಮ್ಮನಿರಲಾರದು. ನಾವು ಸ್ವಲ್ಪ ಹೊತ್ತಿದ್ದು ನಿಮ್ಮಗಳ ಭಾಷಣ ಮುಗಿದನಂತರ ಹಿಂದಿರುಗಿ ಬಂದು ಬಿಡುತ್ತೇವೆ."

"ಹಾಗೆ ಮಾಡಿ ಅಮ್ಮಾ, ನೀವು ಅಷ್ಟು ಒಪ್ಪಿಕೊಂಡರೆ ಉಪಕಾರ ಮಾಡಿದ ಹಾಗಾಯ್ತು. ಮುಂದೆ ಹೀಗೆಯೇ ಅಭ್ಯಾಸ ಮುಂದುವರಿಯುತ್ತೆ. ನೀವು ಹೊರಟರೆ ಕಾರ್ಯಕರ್ತರಿಗೆ ಭುಜಬಲ ಬರುತ್ತೆ."

ಸ್ವಾಮಿನಿ ನಸು ನಕ್ಕು ಒಳ ಹೋದಳು.

ಕಮಲಾನಿ ಪಲ್ಲಂಕದ ಮೇಲೆ ಸುಮ್ಮನೆ ಸಪ್ಪೆಮೋರೆಯಿಂದ ಕುಳಿತಿದ್ದಾಳೆ. ಒಂದು ಕಾಲದಲ್ಲಿ ಜೀವ ಎಷ್ಟು ಪುಟಿಪುಟಿಯುತಿತ್ತೊ. ಕೆಲಸ ಕಾರ್ಯ ಗಳಲ್ಲಿ ಎಷ್ಟೊಂದು ಹುರುಪಿತ್ತೋ ಈಗ ಅವೆಲ್ಲಾ ಕಸದ ಮೂಲೆಯಲ್ಲಿ ಸೇರಿ ಹೋಗಿವೆ. ಯಾವುದರಲ್ಲೂ ಆಸಕ್ತಿಯಿಲ್ಲ.

ಸದಾನಂದ ಬಾಗಿಲಲ್ಲಿ ನಿಂತು ಹೇಳಿದ "ಈ ದಿನದ ಮೀಟಿಂಗ್‌ನಲ್ಲಿ ಮಹಿಳೋದ್ಧಾರದ ಕಾರ್ಯಕ್ರಮಗಳೇ ತುಂಬಿಹೋಗಿವೆ. ವಿದ್ಯಾಭ್ಯಾಸ, ಬಾಲ್ಯವಿವಾಹ ನಿಷೇಧ, ಕರ ಕುಶಲ ಕಲೆಗಳ ಅಭ್ಯಾಸ, ಸಾಮಾಜಿಕ ಸುಧಾರಣೆ, ಮೂಢನಂಬಿಕೆಗಳ ಮೇಲೆ ಯುದ್ಧ, ವಿಧವಾ ವಿವಾಹ ಇಂಥಿಂಥಹ ವಿಷಯಗಳನ್ನು ಸಭೆಯ ಮುಂದಿಟ್ಟು ಚರ್ಚಿಸಲಿದ್ದೇವೆ. ಚರ್ಚೆ ತುಂಬಾ ಭಾವಾತ್ಮಕವಾಗಿರುತ್ತದೆ. ಅಂದಮೇಲೆ, ನೀವು ಖಂಡಿತಾ ಬಂದು ಸಭೆಯಲ್ಲಿ ಭಾಗವಹಿಸಬೇಕು." ಆ ಮಾತಿಗೆ ಮೌನಗತಿಯಲ್ಲಿ ಸಮ್ಮತಿ ಸೂಚಿಸಿದುವು ನೊಂದ ಜೀವಗಳು.

o o o o

ಸದಾನಂದ ಸಾಲು ಮೆಟ್ಟಿಲುಗಳನ್ನು ಹತ್ತಿ ಮೇಲೆ ಬರುತ್ತಲೂ ನಂದಿನಿಯು ಓಡಿ ಬಂದು ಎರಡೂ ಕಾಲ್ಗಳನ್ನು ಅಪ್ಪಿಹಿಡಿದುಕೊಂಡು "ಮಾಮಾ!" ಎಂದಳು ಸಂತಸವೇ ಮೈವೆತ್ತು ಬಂದಂತೆ. ಮಗುವನ್ನು ಎತ್ತಿ ಕೊಂಡು ಮುದ್ದಿಸಿ ಮುದ್ದಿಟ್ಟು ಅಂದ "ಇನ್ನೂ ಹೊಸ ಬಟ್ಟೆ ತೊಡಲಿಲ್ಲ. ಹೋಗು, ಅಮ್ಮನಿಂದ ಬಟ್ಟೆ ತೆಗೆದುಕೊಂಡು ಬಾ. ನಾನೇ ತೊಡಿಸುವೆ."

ಆ ಕೂಡಲೇ ಮಗು ಒಳಹೋಗಿ ಕೈಗೆಟುಕಿದ ಬಟ್ಟೆಯೊಂದನ್ನು ತಂದಿತು. ಕಮಲಾನಿ ಹಿಂದೆಯೇ ಬೇರೊಂದು ಅಂಗಿಯು ಸಹಿತ ಹೊರ ಬಂದಳು. ಮುಖದಲ್ಲಿ ವಿಷಾದ ಕಳೆಯು ಹರವು. ದುಂಬಿ ಕಣ್ಣುಗಳಲ್ಲಿ ಮಾಸದ ರಂಗು. ಹುಡುಗಿ ಇನ್ನೂ ಮ್ಲಾನಮುಖಿಯಾಗಿಯೇ ಇದ್ದಾಳೆ. ಸದಾನಂದ ಅವಳ ದೀನ ಸ್ಥಿತಿಯನ್ನು ನೋಡುತ್ತ ಅಂದ "ನೀನಿನ್ನೂ ಸುಧಾರಿಸಿಕೊಳ್ಳದಿರುವುದು ವಿಷಾದಕರ. ನಿನ್ನ ಸಲುವಾಗಿಯೇ ಸಾಮಾಜಿಕ ಸುಧಾರಣೆಯ ಪ್ರಯತ್ನ. ಇನ್ನು ಮುಂದೆ ನೀನು ಹೀಗಿರುವುದು ಸಾಧ್ಯವೇ ಇಲ್ಲ. ಎಲ್ಲಿ, ಕತ್ತೆತ್ತಿ ನೋಡು...ನಿನ್ನ ಭಾಗಕ್ಕೆ ಯಾರಿಲ್ಲದಿದ್ದರೂ ನಾ...ನಿರುವೆ!"

ಅವಳು ಇನ್ನಷ್ಟು ತಲೆ ಬಾಗಿದಳು. ಅವನು ಆ ದಿನ "ನನ್ನ ಗೃಹಿಣಿಯಾಗ ಬಲ್ಲೆಯಾ?" ಎಂದು ಕೇಳಿದ್ದ ಪ್ರಶ್ನೆ ಕಿವಿಯಲ್ಲಿ ಮರು ಪ್ರಸಾರವಾಯಿತು. ತೀರಾ ಸಣ್ಣ ಹುಡುಗಿಯಂತೆ ಲಜ್ಜಿತಳಾದಳು ಅವಳು. ಏನಾದರೂ ಹೇಳಬೇಕೆಂದರೆ ತುಟಿಗಳು ಬಿರಿದುವೆ? ಶುದ್ಧ ಮೂಕಮೌನಿ.

ಅಚ್ಚಣ್ಣ ಮಾಸ್ತರು ಆಗಲೇ ಹೋಗಿದ್ದಾರೆ.

ಮಾಸ್ತರ ಪತ್ನಿ ಸೀತಮ್ಮ ಹೊರಬಂದು "ನಿಮ್ಮನ್ನು ನಂದಿನಿ ಪ್ರಾಣಕ್ಕಿಂತಲೂ ಹೆಚ್ಚಾಗಿ ಹೊಂದಿಕೊಂಡಿದ್ದಾಳೆ. ನೀವು ಒಂದು ದಿನ ಬಾರದಿದ್ದರೆ ಅವಳು 'ಮಾವಾ' ಎನ್ನುತ್ತ ಹುಡುಕಾಡುತ್ತಾಳೆ. ನೀವು ಹಚ್ಚಿಕೊಂಡದ್ದು ಬಹಳವಾಯ್ತು. ನೀವಿಲ್ಲದ ದಿನ ಅವಳನ್ನು ಸುಧಾರಿಸುವುದು ಕಷ್ಟ."

"ನಾನೇ ಕರೆದೊಯ್ಯುವೆ ಬಿಡಿ." ಹಾಸ್ಯ ಪ್ರಧಾನವಾಗಿ ನುಡಿದ ಸದಾನಂದ.

"ಅವಳನ್ನು ಕರೆದೊಯ್ದರೆ ನನ್ನನ್ನೂ ಕರೆದೊಯ್ಯಬೇಕಾದೀತು." ಎಂದು ಕಣ್ಣುಗಳ ಭಾವ ಕೂಗಿ ಹೇಳಿತು. ಕಮಲಾನಿ ನಿಟ್ಟುಸಿರು ಬಿಟ್ಟು ಸುಮ್ಮನಾದಳು. ಒಡಲಾಳದ ಸಂಕಟ ಮುಖ ಮುದ್ರೆಯಲ್ಲಿ ಪ್ರಕಟವಾಯಿತು. ಸದಾನಂದ ಮಗುವಿನ ಬಟ್ಟೆಯನ್ನು ಬದಲಿಸಿ ಹೊರಡಲುದ್ಯುಕ್ತನಾಗಿ ಅಂದ "ಹೋಗೋಣ ಹೊತ್ತಾಯ್ತು. ಮಾಸ್ತರಿಗೆ ನಾನೇ ಕರೆತರುವೆ ಎಂದು ಹೇಳಿ ಬಂದಿರುವೆ."

ಕಮಲಾನಿ ತಾಯಿಯ ಮುಖ ನೋಡಿದಳು.

"ಹೋಗೋಣ ಮಗಳೇ! ಇಲ್ಲಿ ಕುಳಿತು ಮಾಡುವುದೇನು ?"

"ಅಮ್ಮ ಹೇಳಿದ್ದು ಸರಿ. ಬೇಗ ಹೊರಡು. ಮಾಸ್ತರು ಕಾಯು ತ್ತಿರುತ್ತಾರೆ."

ಸದಾನಂದನ ಪ್ರೇಮಪೂರ್ಣವಾದ ಒತ್ತಾಯ ಹೃದಯದಾಳದಲ್ಲಿ ಕೈಯಾಡಿಸಿತು. ಅವಳು ಯೋಚಿಸುವುದರೊಳಗಾಗಿ ಮತ್ತೆಂದ "ನೀನು ಇಲ್ಲಿನ ಸ್ತ್ರೀಜನರಿಗೆ ಮಾದರಿಯಾಗುವಂತಹ ಮುಖಂಡತ್ವ ಬೆಳೆಸಿಕೊ. ಅದಕ್ಕಾಗಿ ಕಾರ್ಯಕ್ರಮವನ್ನು ಈಗಿಂದೀಗಲೇ ರೂಪಿಸುವ ವಿಧಾನವನ್ನು ನಾವು ಕೂಡಿಯೇ ಯೋಚಿಸೋಣ. ನಾವು ಯಾವತ್ತೂ ನಮ್ಮ ಸಮಸ್ಯೆಯನ್ನು ನಾವೇ ಬಗೆ ಹರಿಸಿಕೊಳ್ಳುವಷ್ಟು ನಿಷ್ಣಾತರಿದ್ದರೇನೇ ಸಂಜೀವನ ಪಟುತ್ವ ಪಡೆಯಬೇಕಾದರೆ. ವಿಧಿಯೊಗೆದ ಸವಾಲಿಗೆ ಸವಾಲು ಹಾಕಿಯೇ ಬದುಕ ಬೇಕು, ಎಂದರೆ ಅರ್ಥಮಾಡಿಕೊಳ್ಳುತ್ತೀಯಷ್ಟೆ ?"

ಒಡನೆ ಇಬ್ಬರ ನೋಟವೂ ಸಂಧಿಸಿದುವು. ಒಡಲ ಅಂತರಾರ್ಥವೆಲ್ಲ ಆ ಮುಹೂರ್ತದಲ್ಲಿ ಸ್ಫುರಿಸಿ...ನವ ಜೀವನಕ್ಕೆ ನಾಂದಿ ಹಾಡಿತು. ಎಲ್ಲೋ ಅಲ ಕ್ಷಿತ ಅಪೂರ್ವಕಳೆ ಬಂದಂತೆ ನಯನ ದ್ವಯಗಳು ಉಜ್ವಲಿಸಿದುವು. ಮೈಯಲ್ಲಿ ನವ ಶಕ್ತಿಯ ಸಂಚಾರವಾದಂತೆ ಮನಃಪ್ರಾಣಗಳು ತುಂಬಿ ತುಳುಕಿದುವು.

"ಕಮಲಾನಿ, ದೃಢ ಮನಸ್ಸೊಂದಿದ್ದರೆ ದೇವರು ದಾರಿ ತೋರಿಯೇ ತೋರುತ್ತಾನೆ."

ಅವಳು ನೀರಸ ನಗೆ ಬೀರಿದಳು ಜಾಹೀರಾತಿಗೆ ಬೀರುವ ಕೃತಕ ನಗೆಯಂತೆ."

ಅವನು ಮಗುವಿನೊಡನೆ ಲಲ್ಲೆಗೈಯುತ್ತ ಮುನ್ನಡೆದ. ತಾಯಿ ಮಗಳು ಹಿಂಬಾಲಿಸಿದರು. ಎಂದೆಂದಿಗೂ ಹಿಂಬಾಲಿಸುವ ರಾಗಭಾವದಿಂದ.

— ೦ —

# ಹೆತ್ತೊಡಲು

## ೧೧

### ಧರ್ಮೋ ಜಯತಿ ನ ಅಧರ್ಮಃ

ಕಾಲಮಾನ ಎಷ್ಟು ಸರಾಗ? ಅದಕ್ಕೆ ಯಾರ ಹಂಗಾದರೂ ಉಂಟೇ? ಒಂದೇ ಸಮನೆ ಸಾಗಾಲೋಟದೋಟ. ನೋವು ನಿಡಿಗಳಿಲ್ಲ, ದುಃಖ ಸಂಕಟವೂ ಇಲ್ಲ. ಒಂದು ಕ್ಷಣವಾದರೂ ನಿಲ್ಲದು; ನಿತ್ಯ ನಿರಾತಂಕ; ನಿರ್ಭಯ; ನಿರಾಮಯ.

ಜಗತ್ತು ನಮಗೆ ಪ್ರತಿಸ್ಪರ್ಧಿಯೋ ಎಂಬಂತೆ ವರ್ತಿಸುತ್ತದೆ. ಎಲ್ಲಿ, ಯಾವೆಡೆ ತಿರುಗಿದರೂ ತಿರಸ್ಕಾರ-ಭರ್ತ್ಸನೆಗಳಿಂದ ಕೂಡಿದ ಚುಚ್ಚು ನೋಟಗಳು. ಚುಚ್ಚು ಮಾತುಗಳು.

ರಾಜು ಯೋಚಿಸುತ್ತ ತನ್ನೊಳಗೇ ತಾನು ಹುಗಿದು ಹೋಗುವಷ್ಟು ಸಂಕುಚಿತಗೊಂಡ. ದುಃಖ ದುಗುಡಗಳು ಕೊರಳೊತ್ತಿದುವು. ಮೈ ರೋಮ ರೋಮಗಳು ಉದ್ಭಿನ್ನವಾದುವು. ಅದೆಷ್ಟು ಹೊತ್ತು ಮೈಮುದುಡಿ ಕುಳಿತಿದ್ದನೋ ತನಗೇ ಬೇಸರವಾಗಿ ತಲೆ ಬಾಗಿಲಿಗೆ ಹೋದ. ಮೂರುದಿನಗಳಿಂದ ಹಿಡಿದ ಮಳೆ ಬಿಟ್ಟಿರಲಿಲ್ಲ. ಧೋ ಧೋ ಎಂದು ಸುರಿಯುತ್ತಲೇ ಇದೆ. ಕಾರ್ಗಾಲದ ಘೋರ್ಗರೆವ ಕಾರ್ಮಳೆ. ಎಷ್ಟು ಗುಡಿಸಲುಗಳು ಕೊಚ್ಚಿ ಹೋಗಿವೆಯೋ, ಇನ್ನೆಷ್ಟು ಪ್ರಾಣ ಹಾನಿಯೋ... ನಮಗೆ ತಾನೇ ಕಡಿಮೆಯೇ ಈ ಬಾಳು ಬದುಕಿನ ಗೋಳು....? ಹಾ, ದೈವಕ್ಕೆ ಕಣ್ಣಿಲ್ಲ. ಯೋಚನೆಯ ತೇಜಿ ಅಲ್ಲಿಗೆ ಬಂದು ನಿಂತು ಹೋಯಿತು.

ಮುಂಬಾಗಿಲು ಮುಚ್ಚಿ, ಕಿಟಕಿಯಲ್ಲಿ ಮೊಗವಿಟ್ಟು ಹೊರಜಗತ್ತನ್ನು ನಿಟ್ಟಿಸಿದ. ಸೂರಿನ ನೀರು ನೆಲ ಕೊಚ್ಚಿ ಹೋಗುವಂತೆ ಧಂಡಿಯಾಗಿ ಬೀಳು ತಿತ್ತು. ಗುಡುಗು ಮಿಂಚುಗಳ ಆರ್ಭಟವೂ ಇತ್ತು, ಬಹುಶಃ ಈ ಮಳೆ ಇಂದಿಗೇ ಮುಗಿಯಲಾರದು. ನಾಳೆ ನಾಡಿದ್ದಿನವರೆಗೂ ಮುಂದುವರಿಯ ಬಹುದು.... ಎನಿಸುವಷ್ಟು ಗಂಭೀರ.

ಮೂರು ದಿನಗಳಿಂದ ಮನೆಯ ಮೆಟ್ಟಿಲು ಇಳಿದಿರಲಿಲ್ಲ ರಾಜು ; ಇಳಿ ಯುವಂತೆಯೂ ಇರಲಿಲ್ಲ. ಸುತ್ತಮುತ್ತ ಸಾಲದ ಶೂಲಗಳು, ಎತ್ತ ತಿರುಗಿ ದರೆ ಅತ್ತ ಗುರಿಯಿಡುವಷ್ಟು ಘೋರ, ಕುಡಿತ–ಜೂಜಾಟಗಳ ಫಲವಾಗಿ, ಹಿಡಿದ ವ್ಯಾಪಾರ ಕಂದಿ ಕುಂದಿ ಕೈಬಿಟ್ಟು ವಾಸದ ಮನೆ ಸಾಲಕ್ಕೆ ದೀಡಾ ಯಿತು. ಇನ್ನು ಸಾಲಿಗರು ಮನೆಯಿಂದ ಹೊರ ಹಾಕುವುದೊಂದು ಬಾಕಿ ...

ಚಿಂತೆ–ಅಗಾದವಾದ ಚಿಂತೆ. ಅಪ್ಪ–ಭೋಜಣ್ಣ ತನ್ನ ಹನಿಹನಿ ರಕ್ತ ವನ್ನೂ ಬಸಿದು ಕಟ್ಟಿದ ಮನೆ. ಅಮ್ಮ ತೊಳೆದು ಬಳಿದು ಒಪ್ಪ ಓರಣವಾಗಿ ಟ್ಟುಕೊಂಡು ಗೌರವ ಜೀವನ ನಡೆಸಿದ ಮನೆ. ಅಂತಹ ಪರಮ ತೀರ್ಥರೂಪ ರನ್ನು ಹೊರ ಹಾಕಿದ ನಾವು ಪಾಪಿಗಳು ! ಆ ಪಾಪವೇ ಘನಿಸಿ ಹಣ್ಣಾಗಿದೆ ಎಂದರೆ ತಪ್ಪಲ್ಲ... ಆಲೋಚನೆಯಲೆಗಳು ತಟಸ್ಥವಾದುವೇನೋ...

ರಾಜು ದೀನಾತಿದೀನತೆಯಿಂದ ಅತ್ತುಬಿಟ್ಟ. ಗಂಡಸಾಗಿಯೂ ಅತ್ತ. ಕಣ್ಣೀರು ಧಾರೆಧಾರೆಯಾಗಿಳಿಯಿತು. ಸ್ವಲ್ಪ ಹೊತ್ತಿನ ಬಳಿಕ ಕಣ್ಣುಗಳನ್ನು ತೀಡಿಕೊಂಡು ತನ್ನನ್ನು ತಾನೇ ಸಾವರಿಸಿಕೊಂಡ. ನೋಟ ಗಡಿಯಾರದ ಕಡೆ ಹರಿಯಿತು. ಗಂಟೆ ಐದರ ಸಮಯ. ಆಗಲೇ ಆರು ಗಂಟೆಯಾದಷ್ಟು ಕತ್ತಲು.

ಬೆಳಿಗ್ಗೆ ಒಂಭತ್ತು ಗಂಟೆಗೇ ಮನೆ ಬಿಟ್ಟಿದ್ದ ತಮ್ಮ-ಗೋಪಿ, ಇಂದು ಹೇಗಾದರೂ ಮಾಡಿ ಶೇಠ್‌ಜೀಯನ್ನು ಒಪ್ಪಿಸಿ ಐವತ್ತು ಸಾವಿರ ರೂಪಾಯಿಗಳ ಸಾಲ ತರುವೆ ಎಂದು ದೃಢವಾಗಿಯೇ ಹೇಳಿ ಹೋಗಿದ್ದ. ಅವನು ಬೆಳಿಗ್ಗೆಯೇ ಬರಬೇಕಾಗಿತ್ತು. ಶೇಠ್‌ಜೀ ಹಣವನ್ನು ಸಾಯಂಕಾಲ ಕೊಡುವೆ ಎಂದು ಹೇಳಿ ರಬಹುದು. ಅದಕ್ಕಾಗಿ ನಿಂತಿದಾನೆ ಇಲ್ಲದಿದ್ದರೆ ಇಷ್ಟರೊಳಗಾಗಿ ಬರಬೇಕಿತ್ತು,

ಎನಿಸಿತೊಮ್ಮೆ. ತನ್ನನ್ನು ತಾನು ಸಮಾಧಾನಿಸುವ ನೆವ ಅಷ್ಟೆ, ಅದೇನು ದೃಢವಾದ ನಂಬುಗೆಯೂ ಅಲ್ಲ.

ಆದರೆ... ಈ ಜೀವನವೇ 'ಆದರೆ' ಮಯ. ಆದರೆ ಒಂದರಿಂದ ಜೀವನ ಕುಸುಮದ ಸುತ್ತಮುತ್ತ ಮುಳ್ಳು. ಹೇಗೆ ಯಾವ ರೀತಿಯಲ್ಲಿ ಪ್ರಯತ್ನಿಸಿದರೂ ಆದರೆಯ ಪಂಕವನ್ನು ದಾಟುವುದು ಕಡುಕಷ್ಟ ... ಯೋಚನೆಯ ಅಲೆ ಗತಿತಪ್ಪಿ ತೂಗುಯ್ಯಾಲೆಯೇರಿತು.

ರಸ್ತೆಯ ಬದಿಯಲ್ಲಿದ್ದ ಹೆಮ್ಮರಗಳ ಮೇಲೆ ಮೈಮುದುಡಿ ರೆಕ್ಕೆಪುಕ್ಕಗಳನ್ನು ಇಳಿಬಿಟ್ಟು ಚೂಸಗೆ ಕೂತಿದ್ದ ಕಾಗೆಗಳು–ಪಕ್ಷಿಗಳು ದೃಷ್ಟಿಗೆ ಬಿದ್ದುವು. ಮೇಲಿಂದ ಮೇಲೆ ಬೀಳುವ ಹನಿಹನಿಯೂ ಉರುಳಿ ಹೋಗುತ್ತನೆ ಮೈ ತೊಯ್ಯದಂತೆ. ಭಗವಂತ ಅವುಗಳಿಗೆ ಎಂತಹ ರಕ್ಷೆ ಕೊಟ್ಟಿದ್ದಾನೆ.... ನಾಳೆ ಒಂದೇದಿನ ನಮಗೆ ಈ ಮನೆಯಲ್ಲಿ ರಕ್ಷೆ. ನಾಡಿದ್ದು ನಾವು ಬೀದಿಪಾಲು, ನಮಗೆಲ್ಲಿದೆ ರಕ್ಷೆ ? ನಮಗೆ ಕೆರೆ ಬಾವಿಯೇ ಶ್ರೀರಕ್ಷೆ... ಹಾ, ದುರ್ವಿಧಿ !

ತಲೆ ಬಾಗಿಲ ಬಳಿ ಪಾದ ಸಪ್ಪಳ ಲರಕ್. ಲರಕ್.

ರಾಜು ಬಾಗಿಲು ತೆಗೆದ. ಬಂದವನು ಗೋಪಿ. ಅವನ ಮುಖದಲ್ಲಿ ಕಳೆಯೇ ಇಲ್ಲ. ಜೀವಶ್ಶವದಂತೆಯೇ ಕಾಣಿಸುತ್ತಾನೆ. ಅವನ ಮುಖಭಾವನೇ ಹೇಳಿತು ಅವನು ಹಿಡಿದ ಕೆಲಸವಾಗಿಲ್ಲ ಎಂದು. ಆದರೂ ಕುತೂಹಲವನ್ನು ತಾಳಲಾರದೇ ಕೇಳಿದ ರಾಜು "ಹೋದ ಕೆಲಸವಾಯಿತೇ ? ಶೇಠ್‌ಜಿ ಏನು ಹೇಳಿದ ?"

"ಊಹೂ....ಅವನಲ್ಲಿ ಇಷ್ಟು ಹೊತ್ತೂ ಕಾಡಿಬೇಡಿದ್ದಾಯ್ತು. ಅವನು ಎಳ್ಳಷ್ಟೂ ಬಗ್ಗುವುದಿಲ್ಲ. ಇನ್ನು ಗತಿ ಮುಗಿಯಿತು."

ಅವನು ತೊಯ್ದ ಬಟ್ಟೆಗಳನ್ನು ಬದಲಿಸಲು ತನ್ನ ಮನೆಯೊಳಗೆ ಹೋದ.

ಎರಡೂ ಮನೆಯೊಳಗಡೆ ಮಡದಿಯರ ಕಿರಿಕಿರಿ ನಡೆದಿತ್ತು. ಅವನು ಮೊದಲಿಂದಲೂ ಹಾಗೆಯೆ. ಅವರಿಂದಲೇ ಸಂಸಾರ ಒಡೆಯಿತು. ಅಪ್ಪ–ಅಮ್ಮ

ದೂರವಾದರು. ಆ ವಿಷಯ ನೆನೆದೊಡನೆ ಮನಸ್ಸು ಆಮೆಯಂತೆ ಮುದುಡು ತ್ತದೆ....ಹೃದಯ ದ್ರವ್ಯ ಕೊರಗಿ ಕರಗಿ ದ್ರವೀಕರಿಸುತ್ತದೆ.

ಆ ತಾಯಿಗೆ ಒಳ್ಳೆಯ ಸೊಸೆಯಂದಿರನ್ನು ತರಬೇಕು. ಮನೆ ನೆಮ್ಮದಿ ಯಿಂದಿದ್ದು ಮಕ್ಕಳು ಮರಿಗಳಿಂದ ತುಂಬಿದ ಸಂಸಾರವಾಗಬೇಕು, ಎಂಬ ಆಸೆಗೆ ಇತಿಮಿತಿಯಿರಲಿಲ್ಲ. ಮೂರು ಮಂದಿ ಹೆಣ್ಣು ಮಕ್ಕಳನ್ನು ಕಳೆದು ಕೊಂಡ ತಾಯಿ ಹೆಣ್ಣು ಮಕ್ಕಳ ಮೇಲಿನ ಪ್ರೇಮವನ್ನು ಗಂಡುಮಕ್ಕಳ ಮೇಲೆಯೇ ಸುರಿದಿದ್ದು ಸತ್ಯ. ಆದರೆ, ಅವರ ಆಸೆಗೆ ಎಳ್ಳು ನೀರು ಬಿಡು ವಂತಹ ಸೊಸೆಯಂದಿರು ಬಂದರು. ಹೊಸ್ತಿಲು ದಾಟಿ ಒಳ ಬಂದಾಗಲೇ ಸರ್ವಾಧಿಕಾರ ಸೂತ್ರ ಹಿಡಿದರು. ಅಂದಿಂದಿಗೂ ಸರಳ ಸುಂದರ ಜೀವನ ನಡೆಸಿದ ತಾಯಿಯ ಕೊರಳಿಗೆ ಉರುಳು ಬಿಗಿಯಲು ಹೇಸಲಿಲ್ಲ. ಅಮ್ಮನ ವೈಯಕ್ತಿಕ ಸ್ವಾತಂತ್ರ್ಯ ಧೂಳಿಪಟಲವಾಯಿತು. ಮನೆಯಲ್ಲಿ ಯಾವತ್ತೂ ತಿಕ್ಕಾಟ–ಕೊಸರಾಟ–ಮುಮ್ಮ್ಮಾತುಗಳ ರಂಪಾಟ. ಅಪ್ಪ–ಅಮ್ಮ ಬೇಸತ್ತು ಮನಗೆಟ್ಟು, ಒಂದುದಿನ ಹೇಳದೆ ಕೇಳದೆ ಮನೆಬಿಟ್ಟು ಅಂಗಡಿಯ ಒಳಕೋಣೆ ಯಲ್ಲಿ ಸಂಸಾರ ಹೂಡಿದರು. ಅದು ಅಂತಹ ವಿಶಾಲ ಕೋಣೆಯಲ್ಲ. ಹೇಗೋ ಹಾಗೆ ಸಾವರಿಸಿಕೊಂಡರು. ಬಾಡಿಗೆ ಅಂಗಡಿಯಲ್ಲಿ ಬೀಡು. ಕಷ್ಟಪಟ್ಟು ವಾಸಕ್ಕೆ ಕಟ್ಟಿಕೊಂಡ ಮನೆಯಲ್ಲಿ ಎರಡು ಭಾಗವಿತ್ತು. ಒಂದರಲ್ಲಿ ತಾವಿದ್ದು ಇನ್ನೊಂದನ್ನು ಬಾಡಿಗೆ ಕೊಟ್ಟಿದ್ದರು. ಅವೆರಡೂ ಭಾಗಗಳು ಅಂದೇ ಇಬ್ಬರು ಮಕ್ಕಳಿಗೂ ಲಭಿಸಿತು. ಇಬ್ಬರೂ ಆನಂದದಿಂದ ಆಕ್ರಮಿಸಿಕೊಂಡರು. ತಂದೆ ಗಿಂತಲೂ ಹೆಚ್ಚಿನ ವ್ಯಾಪಾರ ಮಾಡುವ ಹುರುಪು ಮುಗ್ಗರಿಸಿತು. ಕುಡಿತ ಜೂಜುಗಳೊಂದಿಗೆ ದುರದೃಷ್ಟವೂ ಬಾಗಿಲು ತಟ್ಟಿತು. ಕೇವಲ ಐದು ವರ್ಷ ಗಳಲ್ಲಿ ದಿವಾಳಿಯಾಯಿತು ವ್ಯಾಪಾರ; ಹೇಳ ಹೆಸರಿಲ್ಲದಂತೆ ಕೈಬಿಟ್ಟಿತು ಸಂಪತ್ತು.

ಅಪ್ಪ-ಅಮ್ಮನನ್ನು ನೋಡುವ ಸಲುವಾಗಿ ಒಂದಿನವೂ ಅತ್ತ ಮುಖ ಹಾಕಲಿಲ್ಲ. ಅವರೂ ಇತ್ತ ಹಣಕಲಿಲ್ಲ. ಅಂಗಡಿ ಮನೆ ಒಂದೇ ಆದುದರಿಂದ ಅಲ್ಲಿಂದಿಲ್ಲಿಗೆ ಓಡಾಟ ತಪ್ಪಿತು ಅಪ್ಪನಿಗೆ. ವ್ಯಾಪಾರವೂ ಯಥೋಚಿತವಾಗಿ ನಡೆದು ಎಂದಿನಂತೆಯೇ ಸಾಗಿತು ಅವರ ಜೀವನ. ಮಕ್ಕಳ ಹಂಗಿಲ್ಲ. ಕಿರಿ

ಕಿರಿಯೂ ಇಲ್ಲ, ನೆಮ್ಮದಿಯ ಬದುಕು, ನೆಮ್ಮದಿಯ ಬಾಳು, ಅವರು ಹಾಯಾಗಿರುವಾಗ ನಮ್ಮ ಗತಿ ತಪ್ಪಿತು. ಅಲ್ಪಾವಧಿಯೊಳಗಾಗಿ ಬೀದಿ ಪಾಲಾಗುವ ಪ್ರಸಂಗ ಬಂದಿದೆ. ಇನ್ನು ದೇವರೇ ಗತಿ!

o o o o

ಮಾರ್ಕೆಟ್ ಗೋಪುರದ ಗಡಿಯಾರ ಗಂಟೆ ಭಾರಿಸಿತು.

ಢಣ್. ಢಣ್. ಢಣ್. ಢಣ್. ಢಣ್. ಢಣ್

ಗಂಟೆ ಆರು. ಇನ್ನು ಕೇವಲ ನಲವತ್ತು ಗಂಟೆಗಳ ಅವಧಿಯಲ್ಲಿ ಮನೆಯನ್ನು ಬಿಟ್ಟು ಕೊಡಲೇಬೇಕು.... ತಲೆಯ ಮೇಲೆ ಕಲ್ಲು ಬಿದ್ದಿದ್ದರೂ ಅಷ್ಟು ಕಷ್ಟವಾಗುತ್ತಿರಲಿಲ್ಲ. ಒಂದೇ ಏಟಿಗೆ ಜೀವ ಹೋಗುತಿತ್ತು. ಆದರೆ, ಈ ಕಷ್ಟ ಅಗಾಧ-ಅಪಾರ.

ರಾಜು ಗೋಪಿಯ ಮನೆ ಬಾಗಿಲಲ್ಲಿ ಹಣಿಕಿದಾಗಲೇ ಅವನು ಹೊರಬಂದ. ಇಬ್ಬರ ಮನದಲ್ಲೂ ಮುಂದೇನು...ಎಂಬ ಪ್ರಶ್ನೆ ನಿಮಿರಿ ನಿಂತಿತ್ತು. ಇಬ್ಬರೂ ಹೊರಬಂದರು. ಜಡಿಮಳೆ ನಿಂತಿದ್ದರೂ ಜಿಟಜಿಟಿ ಮಳೆ ಇದ್ದೇ ಇತ್ತು. ಅಂಗಳವೆಲ್ಲ ಕೆಸರು-ಕೊಚ್ಚೆಮಯ. ನೀರು ಸರಾಗ ಹರಿದು ಹೋಗಲು ದಾರಿಯನ್ನು ಮಾಡಿರಲಿಲ್ಲ. ಅಪ್ಪನ ಕಾಲದಲ್ಲಿದ್ದ ಸುವ್ಯವಸ್ಥೆ ಅಂದಿಗೇ ನಿಂತುಹೋಗಿತ್ತು. ಹಿಂದೆ ಕೇವಲ ನಾಲ್ಕೈದು ಸಾವಿರ ರೂಪಾಯಿಗಳಿಗೆ ಕಟ್ಟಿದ ಮನೆ. ಇಂದು ಐವತ್ತು ಸಾವಿರ ರೂಪಾಯಿಗಳಿಗೂ ಮೀರಿ ಬೆಲೆ ಬಾಳುತ್ತದೆ...ಅದು ದೀಡಾಗಿರುವುದೂ ಸಹ ಐವತ್ತು ಸಾವಿರಕ್ಕೆ. ಇನ್ನು ಇಪ್ಪತ್ತು ಗಂಟೆಯೊಳಗಾಗಿ ಐವತ್ತು ಸಾವಿರ...?

ಗೋಪಿ ಅಂದ "ನಾನು ಎಲ್ಲಾ ಕಡೆಯೂ ಪ್ರಯತ್ನ ಪಟ್ಟಿದ್ದಾಯ್ತು. ನಮಗೆ ಎಲ್ಲಿಯೂ ಚಿಕ್ಕಾಸು ದೊರೆಯುವುದಿಲ್ಲ. ನಮ್ಮ ಗತಿ ಮುಗಿದಂತೆಯೇ."

ಕಣ್ಣುಗಳು ರಂಗು ತಳೆದು ಕಂಬನಿ ತುಂಬಿ ಬಂದಿತು.

ರಾಜು ಹೇಳಲಾರದೇ ಹೇಳಿದ "ನಾವು ಅಪ್ಪನನ್ನು ಬೇಡಿದರೆ ಎಲ್ಲಿಂದಲಾದರೂ ಹಣ ಕೊಡಿಸಾರೆಯೇ ಎಂದರೆ ಅವರಿಗೆ ಮುಖ ತೋರುವುದು

ಹೇಗೆ? ಅವರನ್ನು ಗೋಳುಹುಯ್ದು ಹೊರ ಹಾಕಿದವರು ನಾವು... ಎಂಥ ಅವಮಾನಕರ ಪ್ರಸಂಗಕ್ಕೆ ಸಿಕ್ಕಿದ್ದಾಯ್ತು."

"ಅಪ್ಪನ ಬಳಿಗೆ ಇದುವರೆಗೆ ಹೋಗಲಿಲ್ಲ.... ಈಗ ಹೋಗುವುದು ಹೇಗೆ?"

"ಹೋಗಿ ತಪ್ಪಾಯ್ತು ಎಂದು ಕಾಲು ಹಿಡಿದರೆ ...?"

"ಒದ್ದು ಬಿಟ್ಟಾರು!"

ದುಃಖದಿಂದ ದನಿ ಗದ್ಗದವಾಯಿತು. ಎದೆಯ ನೆಲೆಯಲ್ಲಿ ತುಯ್ದಾಡುತಿದ್ದ ಕಣ್ಣೀರು ಕಣ್ಣುಗಳಂಚಿನಲ್ಲಿ ತುಂಬಿ ತುಳುಕಿತು. ತೀರಾ ಅಸಹಾಯಕತೆಯಿಂದ ತಲೆಬಾಗಿದ. ತಮ್ಮನ ಕಣ್ಣುಗಳ ಹನಿಗುತ್ತರವಾಗಿ ಅಣ್ಣನ ಕಣ್ಣುಗಳಲ್ಲೂ ಕಂಬನಿಯಧಾರೆ ಉಕ್ಕಿ ಹರಿಯಿತು.

ಸ್ವಲ್ಪಹೊತ್ತು ಉರುಳಿತು. ಮಳೆ ಸೋನೆ ಹನಿ ಕಾರುತಿತ್ತು ಜಿಟಿ ಜಿಟಿ ಜಿಟಿ ಜಿಟಿ. ಮಣ್ಣನ್ನು ತೊಳೆದು ಕೆನ್ನೀರಿನಂತೆ ಓಡುವ ನೀರಿನ ಮೇಲೆ ತೇಲುತಿದ್ದುವು ಕಸಕಡ್ಡಿಗಳು.

ರಾಜು ಭಾರವಾದ ದನಿಯಲ್ಲಿ ಕೇಳಿದ "ನಾವು ಅಪ್ಪನನ್ನು ಸಾಲ ಕೇಳಬಹುದೇ?"

ಗೋಪಿ ತಕ್ಷಣ ಹುಬ್ಬೆತ್ತಿ ನೋಡಿದ. ತಲೆಯಲ್ಲಿ ಹಲವಾರು ಆನೆಗಳು ನುಗ್ಗಿದಷ್ಟು ಗೊಂದಲ. ಅನಿರೀಕ್ಷಿತ ವಿಷಯದಿಂದ ಹೃದಯ ವ್ಯಾಪ್ತಿಗೆ ಮೀರಿ ಮಿಡಿಯಿತು.

"ನನಗೊತ್ತು; ಅವರ ಮುಂದೆ ಹೋಗುವುದೂ ನಾಚಿಗೆಗೇಡು!... ಆದರೂ, ನಮಗೆ ಬೇರೆ ದಾರಿಯೇ ಇಲ್ಲ."

"ಅವರಲ್ಲಿ ಅಷ್ಟು ಹಣವಾದರೂ ಎಲ್ಲಿಂದ ಬಂದೀತು? ಅವರಿನ್ನೂ ಬಾಡಿಗೆ ಅಂಗಡಿಯಲ್ಲಿದ್ದಾರೆ. ವಾಸಕ್ಕೊಂದು ಮನೆಯಿಲ್ಲ. ನಾವು ಯಾವ ಬಾಯಿಯಿಂದ ಅವರನ್ನು ಕೇಳುವುದು? ಇದು ಬಹಳ ಸಂಕಟಪ್ರದವಾದ ಪ್ರಶ್ನೆಯಲ್ಲವೇ ಅಣ್ಣ?"

"ಗೋಪಿ! ನಾವು ಹುಟ್ಟಿದಾಗಲೇ ಸತ್ತಿದ್ದರೆ ಚೆನ್ನಾಗಿತ್ತು. ಯಮ ಧರ್ಮನಿಗೂ ನಮ್ಮ ಮೇಲೆ ಕರುಣೆಯಿಲ್ಲ. ನಾವು ಪಾಪಿಗಳು...." ಎಂದವನು ಸ್ವಲ್ಪಹೊತ್ತು ಸುಮ್ಮನಿದ್ದು ಪುನಃ ಮುಂದುವರಿದ "ಐವತ್ತು ಸಾವಿರ ಎಂದರೆ ಸಾಮಾನ್ಯವಲ್ಲ. ಈ ಇಳಿವಯಸ್ಸಿನಲ್ಲಿ ನಾವು ಕೇಳು-ವುದೇ ತಪ್ಪು; ಅಲ್ಲದೆ ಅವರು ಕೊಟ್ಟು ಪೂರೈಸಲಾರರು, ಎಂಬುದು ಸತ್ಯ. ನನಗೆ ಬೇರೆ ದಾರಿಯೇ ಇಲ್ಲವಾದುದರಿಂದ ಹೇಳಿದೆ ಅಷ್ಟೆ."

"ನನಗೂ ಅದು ತಿಳಿದ ವಿಷಯ. ಈಗೇನು ಮಾಡುವುದು? ಅದೇ ತಿಳಿಯುತ್ತಿಲ್ಲ..."

ಇಬ್ಬರ ಕಣ್ಣುಗಳೂ ಕಂಬನಿಯನ್ನು ವಸರುತ್ತಿವೆ.

ಒಡಲ ದುಃಖ ಉಕ್ಕಿಬಂದು ಕೊರಳು ಕಟ್ಟಿ ಸ್ವಲ್ಪಹೊತ್ತು ರುದ್ರಮೌನ ರಾಜ್ಯವಾಳಿತು.

o o o o

ಭೋಜಣ್ಣ ಇನ್ನೂ ಅಂಗಡಿಯ ಬಾಗಿಲು ತೆರೆಯುವುದರಲ್ಲಿಯೇ ಸೋದರಳಿಯ ಮಾಧು ಆಗಮಿಸಿದ. ಸ್ವಾಮಿನಿ ಸೋದರಳಿಯನನ್ನು ಕಂಡು ಸಂತಸದಿಂದ ಉಪಚರಿಸಿದಳು. ಉಭಯ ಕುಶಲೋಪರಿ ನಡೆಯಿತು. ಬಳಿಕ ಮಾಧು,

"ಮಾಮಾ, ನಿಮಗೆ ಕೆಟ್ಟ ಸುದ್ದಿಯನ್ನು ಹೇಳಬೇಕಾಗಿ ಬಂದಿದೆ."

"ಏನು ಹೇಳು ...?"

"ರಾಜು ಗೋಪಿಯರು ವ್ಯಾಪಾರದಲ್ಲಿ ಚೆನ್ನಾದ ಏಟು ತಿಂದು ಸಾಲ ಸೋಲದಲ್ಲಿ ಸಿಕ್ಕಿದ್ದಾರೆ! ಕುಡಿತ ಜೂಜಾಟಕ್ಕೂ ಇಳಿದು ಪೂರ್ತಿಕೆಟ್ಟಿತು ವ್ಯಾಪಾರ ..."

"ಇದನ್ನು ಬಹಳ ದಿನಗಳಿಂದ ಕೇಳುತ್ತಿರುವೆ. ಅವರಿವರು ಹೇಳುತ್ತಲೇ ಇರುತ್ತಾರೆ. ಹಣೆಬರೆಹ ಯಾರು ತಪ್ಪಿಸುತ್ತಾರೆ ಹೇಳು?"

"ನೀವು ಅವರಿಗೆ ವಾಸದ ಮನೆಯನ್ನೂ ಬಿಟ್ಟುಕೊಟ್ಟರಿ. ನ್ಯಾಯವಾಗಿ ನಿಮ್ಮ ನಂತರ ಅವರಿಗೆ ದಕ್ಕಬೇಕಿತ್ತು ಮನೆ. ಈಗ ನಿಮಗೂ ಇಲ್ಲ. ಅವರಿಗೂ

ಇಲ್ಲ. ಇಬ್ಬರೂ ನಿಮ್ಮನ್ನು ಇಂದು ಸಾಕಬೇಕಾಗಿತ್ತು. ಈ ಇಳಿವಯಸ್ಸಿನಲ್ಲಿ ನಿಮಗೆ ಆಸರೆಯೂ ಇಲ್ಲ; ದುಡಿಯುವುದೂ ತಪ್ಪಲಿಲ್ಲ. ಗೋಳಿನ ಮೇಲೆ ಗೋಳು. ಹೀಗಾಗಬಾರದಿತ್ತು."

"ರಣಕಾಳಿ ಹೆಂಡತಿಯರು ಮಗ್ಗುಲಿಗೆ ಬಂದದ್ದೇ ತಡ ನಮ್ಮನ್ನು ತೀರ ತಿರಸ್ಕಾರದಿಂದ ಇಬ್ಬರೂ ಕಂಡರು. ಕೊಡಬಾರದ ಕಷ್ಟ ಕೊಟ್ಟರು. ಬಹುಶಃ ಈಗ ಅವರಿಗೆ ಜೀವನದ ಸ್ಥಿತಿ ಗತಿಯ ಅರಿವು ಆಗಿರಬಹುದು. ಕೆಟ್ಟ ಮೇಲೇ ಬುದ್ಧಿ ಬರಬೇಕಾದರೆ.... ಮಾಡಿದ್ದು ಉಣ್ಣಲೇ ಬೇಕಲ್ಲ ?"

"ತೀರ ಮುಳುಗಿದ ಮೇಲೆ ಬುದ್ಧಿ ಬಂದರೆಷ್ಟು ಬಿಟ್ಟರೆಷ್ಟು ?

ಸ್ವಾಮಿನಿ ಖಿನ್ನ ಮುಖಿಯಾಗಿ ವಿಷಯವನ್ನು ತನ್ನಲ್ಲೇ ಮೆಲಕು ಹಾಕಿ ನುಡಿದಳು,

"ಕೇಳು... ನಮ್ಮದೇನು ದೊಡ್ಡ ವ್ಯಾಪಾರವಲ್ಲ ; ಸಣ್ಣ ಅಂಗಡಿ. ಸಣ ವ್ಯಾಪಾರ. ಸಣ್ಣಮನೆ, ಸಣ್ಣ ಸಂಸಾರ. ಅಷ್ಟರಲ್ಲೇ ಪ್ರಗತಿ. ಆ ಎಲ್ಲವನೂ ಅವರಿಗಾಗಿ ಬಿಟ್ಟು, ನಾವು ಈ ಗೂಡಿಗೆ ಬಂದಾಗ ಅವರ್‍ಯಾರಿಗೂ ಕಿಂಚಿತ್ ಬೇಸರವಾಗಲಿಲ್ಲ. ಇದು ಪ್ರಪಂಚ....ಈಗಿನ ಮಕ್ಕಳಿಗೆ ಧರ್ಮಕರ್ಮ ಏನಾದರೂ ಉಂಟೇ? ಹೆತ್ತವರು ಹೊತ್ತವರು ಎಂದರೆ ಗೌರವ ಕಿಂಚಿತ್ತಾದರೂ ಉಂಟೇ ? ನಮ್ಮ ಸಂಸ್ಕೃತಿ ಇಷ್ಟು ಕೆಡುತ್ತೆ ಎಂದು ಕೊಂಡಿರಲಿಲ್ಲ ನಾನು. ನಾವು ಸೊನ್ನೆಯಿಂದ ಬಂದವರು. ಇಷ್ಟೆಲ್ಲ ಕಷ್ಟಪಟ್ಟು ಗಳಿಸಿದ ಸಂಪತ್ತನ್ನು ಮಕ್ಕಳಿಗೊಪ್ಪಿಸಿ ಬರಿಗೈಲಿ ಬರಬೇಕಾದರೆ ಮನಸ್ಸು ಎಷ್ಟೆಷ್ಟು ನೊಂದಿರಬಹುದು ; ಕಣ್ಣೀರೆಷ್ಟು ಕರೆದಿರಬಹುದು ಯೋಚಿಸಿ ನೋಡು. ಈಗ ಈ ಕಿಷ್ಕಿಂದೆಯಲ್ಲಿ ಕಾಲಯಾಪನೆ. ಕಷ್ಟವಾದರೂ ಸುಖ ಶಾಂತಿಯಿದೆ. ನೆಮ್ಮದಿಯಿದೆ. ಭಗವಂತ ಹೀಗೆಯೇ ನಮ್ಮನ್ನು ಕೊನೆಗಾಲದವರೆಗೆ ಇಟ್ಟರೆ ಸಾಕು ..."

ವೃದ್ಧ ಮಹಾಶಯ ರೋಷ ಗದ್ಗದ ಕಂಠನಾದ. ಸ್ವಾಮಿನಿ ಉಕ್ಕಿಬಂದ ಕಂಬನಿಯನ್ನು ತೊಡೆದುಕೊಂಡಳು. ಘೂರ್ಣ ಉದ್ಭ್ರಾಂತತೆ ತುಂಬಿದಂತೆ ಹೊತ್ತು ಸದ್ದಿಲ್ಲದೆ ಉರುಳಿ ಹೋಯಿತು.

○ ○ ○ ○

ಮುಸ್ಸಂಜೆ ಕವಿಯುವುದಕ್ಕೆ ಮುಂಚೆಯೇ ಮಳೆ ಮಂಜು ಮುಸುಗಿ ಕತ್ತಲಾವರಿಸಿತು ಪ್ರಕೃತಿಯಲ್ಲಿ. ಮಳೆಯ ರಭಸ ಕಡಿಮೆಯಾಗಿದ್ದರೂ ಕಾರ್ಮೋಡಗಳು ಸರಿದಿರಲಿಲ್ಲ. ಇನ್ನೂ ಒಂದೆರಡು ದಿನಗಳು ಸುರಿಯುವ ಸೂಚನೆ ತೋರುತ್ತಿದೆ ಆಕಾಶಮಂಡಲದಲ್ಲಿ; ಮಳೆಯ ಕಾರಣದಿಂದ ವ್ಯಾಪಾರ ಸ್ಥಗಿತ.

ಭೋಜಣ್ಣ ಗಿರಾಕಿಗಳ ಒತ್ತಡವಿಲ್ಲದಿದ್ದುದರಿಂದ ಅಂಗಡಿ ಬಾಗಿಲನು ಮುಚ್ಚಿದ. ಹೊರಗಡೆಯಿದ್ದ ಸಾಮಾನುಗಳನ್ನು ಒಳಗಡೆ ಎತ್ತಿಟ್ಟು ಮಡದಿ. ಇನ್ನೂ ಏಳು ಗಂಟೆಯ ಸಮಯ. ಮೈ ತುಂಬಾ ಉಣ್ಣೆಯ ಬಟ್ಟೆ ಹೊದ್ದ ದಂಪತಿಗಳು ಒಲೆಯ ಬಳಿ ಬೆಚ್ಚಗೆ ಕುಳಿತರು. ಒಲೆಯಲ್ಲಿ ಹೂಗೆಂಡ, ಬೆಚ್ಚನೆ ಬೂದಿ ಮಾತ್ರ ಇದ್ದುವು. ಕೈ ನೀಡಿ ಬೆಚ್ಚಗೆ ಮಾಡಿಕೊಳ್ಳುತ್ತ ಯಜಮಾನ ಅಂದ "ಗಂಗೂ, ನಾವಂದು ಮನೆ ಬಿಟ್ಟು ಬಂದುದು ಎಷ್ಟು ಕ್ಷೇಮ ವಾಯಿತು ? ಒಂದು ವೇಳೆ, ಅಲ್ಲೇ ಉಳಿದಿದ್ದಿದ್ದರೆ ಇಷ್ಟರೊಳಗಾಗಿ ನಮ್ಮ ಕತೆ ಮುಗಿಯುತಿತ್ತು. ಈ ಕಾಲದವರಿಗೆ ಗೌರವ–ಘನತೆ ಏನೇನೂ ಇರುವುದಿಲ್ಲ. ಮಾನವತೆಯು ದಾನವಗತಿಗೆ ಇಳಿದು ಸಾಮಾಜಿಕ ಕ್ಲೈಬ್ಯವನ್ನು ದಿನದಿನಕ್ಕೂ ಹೆಚ್ಚಿಸುತ್ತಿದೆ. ಮೂಢಮನ ಮೂಢಮತಿಗಳಿಂದ ಮನುಜರು ಹುಚ್ಚಾಗುತಿದ್ದಾರೆ. ಭಾರತೀಯ ಸುಸಂಸ್ಕೃತಿಗೆ ಇರಬೇಕಾದ ಶೋಡಷ ಕಳೆಯಿಂದ್ಲು ಪ್ರೇತಕಳೆಯಾಗಿದೆ. ಮಕ್ಕಳಿಗೆ ತಾಯಿ-ತಂದೆಯರಲ್ಲಿ ಬಂಧು–ಬಾಂಧವರಲ್ಲಿ ಇರಬೇಕಾದ ಪ್ರೀತಿ–ವಿಶ್ವಾಸಗಳು ಮೈಲಿ ಮೈಲಿ ದೂರ. ದ್ವೇಷ-ಅಸೂಯೆಗಳ ಕೋಟೆ ಬೆಳೆಯುತ್ತಿದೆ. ಸ್ವಾತಂತ್ರ್ಯಾನಂತರ ನಮ್ಮ ಸುಸಂಸ್ಕೃತಿಯು ಸಮೃದ್ಧಿಯಾಗಿ ಬೆಳೆಯಬೇಕಿತ್ತು. ಈಗ ಆಗುತ್ತಿರುವುದು ಅದರ ತದ್ವಿರುದ್ಧ. ಇದಕ್ಕೆ ಕೊನೆಯೇ ಇಲ್ಲ. ಇನ್ನು ಮುಂದೆ ನಮ್ಮ ದೇಶ ಈ ಹೀನ ಸ್ಥಿತಿಯಲ್ಲಿಯೇ ಮುಂದುವರಿದರೆ ಆಶ್ಚರ್ಯವಿಲ್ಲ. ಜನಜೀವನ ವಿಕೃತಗೊಳ್ಳಲು ಯೂರೋಪಿಯನ್ನರ ಸಹವಾಸ ಎನ್ನಲಾರೆ ನಾನು. ಸತ್ಯಧರ್ಮಗಳು ಲುಪ್ತವಾಗಲು ರಾಜಕೀಯವಾಗಲೀ ವಿದ್ಯಾಭ್ಯಾಸವಾಗಲೀ ಕಾರಣವಲ್ಲ. ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದು ನಾಲ್ಕು ದಶಕಗಳೇ ಸಂದುಹೋದುವು. ರಾಷ್ಟ್ರದಲ್ಲಿ ಧರ್ಮ ಸಮೃದ್ಧಿಯಾಗುವುದರ ಬದಲು ಪೈಶಾಚಿಕ ಪ್ರವೃತ್ತಿ ಬೆಳೆಯುತ್ತಲಿದೆ.

ಕೊಲೆ, ಸುಲಿಗೆ ದರೋಡೆ ಡಕಾಯಿತಿಗಳ ದುಷ್ಟ ಪ್ರವೃತ್ತಿ ರಾಜ್ಯವಾಳುತ್ತಿದೆ. ನಮಗೆ ಒಳ್ಳೆಯ ಭವಿಷ್ಯವಿಲ್ಲ."

"ಹೌದಪ್ಪಾ, ಹೌದು. ಇದು ಶುಭಲಕ್ಷಣವಲ್ಲ. ರಾಷ್ಟ್ರದೇಳಿಗೆಗೆ ಕುತ್ತು. ಜೀವಮಾನವೆಲ್ಲ ದುಡಿದರೂ ಬಂಧುತ್ವ ಬಾಂಧವ್ಯ ಸ್ವಲ್ಪವೂ ಇಲ್ಲ ದಂತಾಯ್ತು."

"ಅದರ ಯೋಚನೆ ಬೇಡವೇ ಬೇಡ. ನಮ್ಮಲ್ಲಿ ಇದ್ದುದೆಲ್ಲವನ್ನೂ ವೃದ್ಧಾಶ್ರಮಕ್ಕೆ ದಾನಕೊಟ್ಟು ಅಲ್ಲಿಯೇ ಸೇರಿಕೊಂಡರಾಯ್ತು. ನೊಂದವರಿಗೆ ಭಗವಂತ ಮುಂದಾರಿ ತೋರಿಸಿಯೇ ತೋರಿಸುತ್ತಾನೆ. ನನಗೊಂದೇ ದುಃಖ ವೆಂದರೆ, ನಮ್ಮ ಸುಸಂಸ್ಕೃತಿಯನ್ನು ಗಾಳಿಗೆ ತೂರಿ ಸದ್ಧರ್ಮ ಹೀನರಾಗಿ ಬಾಳುವ ಈಗಿನ ಜನಾಂಗದ ದುರ್ನೀತಿಯನ್ನು ಕುರಿತು. ನಮ್ಮಧರ್ಮ ನಮ್ಮ ಸಂಸ್ಕೃತಿ ಸಂಸ್ಕಾರಹೀನವಾದುದೇ ಆಶ್ಚರ್ಯ ! ಇದು ನಮ್ಮಲ್ಲಿ ಮಾತ್ರವಲ್ಲ. ಮನೆ ಮನೆಯಲ್ಲೂ ಈ ದುರ್ಯುಗ ಆರಂಭವಾಗಿದೆ. ನಮ್ಮ ಕಾಲದಲ್ಲಿ ನಾವು ಹೆತ್ತವರನ್ನು ದೇವರಂತೆ ಗೌರವ ತೋರಿ ನೋಡಿಕೊಂಡೆವು. ಈಗ ನಮಗೆ ಈ ದುರವಸ್ಥೆ."

"ಹೋಗಲಿ ಬಿಡಿ, ದೇವರು ನಮ್ಮನ್ನು ಕೊನೆತನಕ ಇಷ್ಟರಮಟ್ಟಿಗೇ ಆರೋಗ್ಯವಾಗಿ ಇಟ್ಟಿದ್ದರೆ ಸಾಕು."

ಆ ಮಾತನ್ನು ಭಾರವಾದ ದನಿಯಲ್ಲಿ ಬಹಳ ಕಷ್ಟದಿಂದ ಹೊರ ಹಾಕಿ ದಳು ಗಂಗೂ, ನಯನಗಳು ಅಶ್ರುಪೂರ್ಣವಾದುವು. ಎದೆಯಾಳದಲ್ಲಿ ದಣಿದ ಹೃದಯವನ್ನು ಯಾವುದೋ ಕಾಣದ ಕೈ ಮೆಲ್ಲಮೆಲ್ಲನೆ ಹಿಸುಕುತ್ತಿದೆ.

"ನೀನೇಕೆ ಅಳುತ್ತಿ ? ಇಂದಿನ ಲೋಕವ್ಯವಹಾರವೇ ಇಷ್ಟು. ಎಲ್ಲರಿಗೂ ಆದುದು ನಮಗೂ ಆಗಿದೆ. ನಾವು ದಾರಿಯ ಮುಳ್ಳನ್ನು ತುಳಿಯದಿರುವಷ್ಟು ಎಚ್ಚರ ವಹಿಸಿದರೆ ಸಾಕು."

ಗಂಗೂ ಯೋಚನಾಕ್ರಾಂತಳಾದಳು. ಏನೂ ಹೇಳಲು ಬಾಯಿ ಬರಲಿಲ್ಲ ಮನದಲ್ಲಿ ಕಸಿವಿಸಿಮೂಡಿತು. ಮಕ್ಕಳ ಯೋಗದಿಂದ ಕಷ್ಟಪಟ್ಟ ಬಗೆ ಮನೋ ಭಿತ್ತಿಯಲ್ಲಿ ಚಲನ ಚಿತ್ರದಂತೆ ಸುಳಿದಳಿಯಿತು.

o o o o

ಜೂನ್ ತಿಂಗಳ ಹನ್ನೆರಡನೇ ತೇದಿ.

ಹಣ ಹೊಂದಿಸಿಕೊಳ್ಳಲು ಇನ್ನು ಹತ್ತು ತಾಸುಗಳ ಅವಧಿಮಾತ್ರ ಉಳಿಯಿತು. ಅಣ್ಣ ತಮ್ಮಂದಿರ ಜೀವ ಒಳಗಿಂದೊಳಗೇ ತಳಮಳಿಸುತ್ತಿದೆ. ಇಬ್ಬರಿಗೂ ಮೂರು ಮೂರು ಮಕ್ಕಳಿದ್ದ ಸಂಸಾರ. ಹೆಜ್ಜೆ ಮುಂದಿಡಲು ದಾರಿಯೇ ಇಲ್ಲ. ಇನ್ನು ಮುಂದಿಡುವುದೆಂದರೆ ಕೆರೆ ಬಾವಿಗಳ ಕಡೆಗೆ.

ರಾಜು ತಲೆಯ ಮೇಲೆ ಕೈಹೊತ್ತು ಕುಳಿತು ಕಂಬನಿ ಸುರಿಸಿದ. ಗೋಪಿ ಬಾಗಿಲಿಗೆ ವಾಲಿನಿಂತು ಮೌನಭಾರ ವಹಿಸಿದ. ಒಳಗಡೆ ಹಸಿದ ಮಕ್ಕಳ ಗೋಳು ಕುಪಿತ ಮಡದಿಯರ ಚೀರಾಟ ಲತ್ತೆ ಹೊಡೆದಂತೆ ಕಿವಿಗಳನ್ನು ಅಪ್ಪಳಿಸುತ್ತವೆ, ಹೃದಯ ತಲ್ಲಣಿಸುವಂತೆ.

“ಅಣ್ಣಾ ಏನಾದರಾಗಲಿ, ನಾವಿಂದು ಅಂಗಡಿಗೆ ಹೋಗಿ ಅಪ್ಪನ ಕಾಲು ಹಿಡಿದುಕೊಳ್ಳೋಣ. ಅವರಲ್ಲಿ ಅಷ್ಟೊಂದು ಹಣವಿರುವುದು ಖಚಿತವಲ್ಲ. ಯಾರಿಂದಲಾದರೂ ಕೊಡಿಸುವಷ್ಟು ಸಹಾಯ ಮಾಡಿದರೆ ಎಷ್ಟೋ ಕ್ಷೇಮ. ಅಂದಿಂದಿಗೂ ನಾವು ಅವರನ್ನು ಪೀಡಿಸಿದ್ದು ನಿರ್ಲಕ್ಷಿಸಿದ್ದು ನಿಜ. ನಮ್ಮ ತಪ್ಪನ್ನು ದೇವರು ಕ್ಷಮಿಸಲಾರ. ಅದಕ್ಕೇ ನಮಗೀ ದುರ್ಗತಿ ಬಂದುದು.”

ರಾಜು ತಲೆಯೆತ್ತಿ ನೋಡಿ ಮೆಲುದನಿಯಲ್ಲಿ ಅಂದ “ಅದೊಂದೇ ದಾರಿ. ನಾವೀಗಲೇ ಹೋಗೋಣ. ಹೊತ್ತೇರಿದರೆ ಗಿರಾಕಿಗಳು ತುಂಬುತ್ತಾರೆ.”

ಇಬ್ಬರೂ ಹಸಿದ ಹೊಟ್ಟೆಯಲ್ಲೇ ಹೊರಟರು. ಕಣ್ಣುಗಳು ಆಳಕ್ಕೆ ಇಳಿದಿವೆ. ಬಾಚದ ಕೂದಲು. ಮಾಸಲು ಬಟ್ಟೆ, ಗರೀಬೀ ಸ್ಥಿತಿ. ಮುಖದ ಮೇಲೆ ಹಿರಿಯ ಬೆಳೆ. ಹೆತ್ತವರೊಂದಿಗಿದ್ದಾಗ ಇದ್ದ ಆಟಾಟೋಪವೆಲ್ಲಿ? ಇಂದಿನ ದೀನಾತಿದೀನ ಸ್ಥಿತಿಯೆಲ್ಲಿ? ಹೆಜ್ಜೆಗಳನ್ನು ಮುಂದಿಡುತಿದ್ದರೂ ಹಿಂದಕ್ಕೆ ದಬ್ಬಿದಂತಹ ಅನುಭವ. ದುಃಖ ದುಗುಡಗಳು ಒಳಗಿಂದೊಳಗೇ ಧುಮುಧುಮಿಸುತ್ತಿವೆ. ಬೇಡ ಬೇಡವೆಂದರೂ ಉಕ್ಕಿ ಬರುವ ಕಂಬನಿಯನ್ನು ತಡೆಹಿಡಿಯಲಾಗಲಿಲ್ಲ.

ಬೆಳಗಿನ ವಾಯು ವಿಹಾರಕ್ಕೆ ಹೋದ ಅಪ್ಪ ಇನ್ನೂ ಹಿಂದಿರುಗಿಲ್ಲದೆ ಮುಂಬಾಗಿಲು ತೆರೆಯಲಿಲ್ಲ. ಹಿಂಬಾಗಿಲಿಂದ ಹೋಗಲು ಮನಸ್ಸಾಗುತ್ತಿಲ್ಲ.

ಹೆತ್ತೊಡಲಿಗಿಟ್ಟ ಕೊಳ್ಳಿ ಸಾಮಾನ್ಯವಲ್ಲ. ಆ ಮಾತಾಮಯಿಯ ಮುಖ ನೋಡುವುದಾದರೂ ಎಂತು? ಒಡಲ ಸಂಕಟವೆಲ್ಲಾ ನರನಾಡಿಗಳನ್ನು ಸೀಳು ವಂತೆ ದೇಹದಾದ್ಯಂತ ಹರಿದಾಡಿತು. ತಮ್ಮಲ್ಲೇ ಸ್ವಲ್ಪ ಯೋಚಿಸಿ ಹಿತ್ತಿಲ ಕಡೆಯಿಂದಲೇ ಒಳ ಹೋಗೋಣವೆಂದು ಹೆಜ್ಜೆ ತೆಗೆದಾಗಲೇ ಅಪ್ಪ ದೊಣ್ಣೆ ಊರಿಕೊಳ್ಳುತ್ತ ಬಳಿಗೆ ಬಂದಾಗಿತ್ತು. ನೋಡಿದರೆ, ಎಂತಹ ದೃಶ್ಯ? ಯಾರ್ಯಾರೋ ತಂದ ಸುದ್ದಿಗೂ ಇದಕ್ಕೂ ಅಜಗಜಾಂತರ...! ತನ್ನ ಕಣ್ಣು ಗಳನ್ನೇ ತಾನು ನಂಬಲಾರದಂತಹ ದೃಶ್ಯ! ಭೋಜಣ್ಣ ನೆಟ್ಟ ದೃಷ್ಟಿಯಿಂದ ನೋಡೇ ನೋಡಿದ! ಇವರು ನನ್ನ ಮಕ್ಕಳೇ? ನಿಜವಾಗಿಯೂ ಹೌದೇ? ಕಣ್ಣಾಲಿಗಳು ಆಶ್ಚರ್ಯ ವಿಸ್ತೃತವಾದುವು. ಭೋಜಣ್ಣ ಕೆಕ್ಕರಿಸಿ ನೋಡುತ್ತ ನಿಮಿರಿ ನಿಂತ. ಮೈಯಲ್ಲೆಲ್ಲ ಬೆಂಕಿಯ ಜ್ವಾಲೆಯಂತೆ ಹರಿದಾಡಿತು ಕೋಪದ ಝುರಿ! ರೋಮ ರೋಮಗಳು ಉದ್ಭಿನ್ನವಾದುವು!

ಸ್ವಾಮಿನಿ ಹೊರ ತಲೆ ಹಾಕಿದಳು. ಬಂದವರನ್ನು ಒಳಬರಮಾಡಿ ಕೊಂಡು ಯಥೋಚಿತವಾಗಿ ಕದ ಮುಚ್ಚಿದರೆ ಹೃದಯವೇ ಬಾಯಿಗೆ ಬಂದಂತಾಯಿತು.

"ನೋಡಿದೆಯಾ ನಿನ್ನ ಮಕ್ಕಳ ಸ್ಥಿತಿಗತಿ? ಅಂದಿನ ಆಟಾಟೋಪ ಹೇಗಿತ್ತು? ಇಂದಿನ ಗತಿಯೇನು? ಇಂಥ ದುರ್ಗತಿ ಬರುತ್ತೆಂದು, ಅಂದು ಭಾವಿಸಿದ್ದರೇನು ಇವರು?"

"ಹೋಗಲಿ ಬಿಡಿ, ಆದುದು ಆಗಿ ಹೋಯಿತು." ಎಂದಳಾ ತಾಯಿ ಸಂಕಟದಿಂದ.

o o o o

ತಂದೆಯಿಂದ ಅತ್ಯಂತ ತಿರಸ್ಕೃತರಾಗಿ ಹಿಂದಿರುಗಿದ ಮಕ್ಕಳಿಗೆ ಬಗೆ ಹರಿಯದ ಸಮಸ್ಯೆ ಮೂಡಿತು. ತಾವೆಲ್ಲರೂ ಒಳಗಿದ್ದುಕೊಂಡು ಮನೆಗೆ ಬೆಂಕಿ ಹಚ್ಚಿಕೊಳ್ಳಬಾರದೇಕೆ? ಎಂಬ ಯೋಚನೆ .... ಪುಟ್ಟಪುಟ್ಟ ಆರು ಮಕ್ಕಳು. ಮುಗ್ಧ ಅಮಾಯಕ ಜೀವಿಗಳು .... ಈ ಪಾಪವನ್ನು ಯಾವ ಕೈಯಿಂದ ಮಾಡಲಿ? ಹೇಗೆ ಮಾಡಲಿ?... ಪ್ರಶ್ನೆಗಳು ಭುಗಿಲೇಳುತ್ತಿವೆ. ಶಾಂತಿ-ಸಮಾ ಧಾನಗಳು ದೂರದಿಂದ ಅಣಕಿಸುತ್ತಿವೆ. ಇನ್ನು ....

ಮುಚ್ಚಿದ ಬಾಗಿಲ ಹಿಂದೆ ಪಾದಗಳ ಸಪ್ಪಳ.

ಬಾಗಿಲು ಮಿಡಿದ ಸದ್ದು ಕಟ. ಕಟ. ಕಟ. ಕಟ.

ಯಾರಿರಬಹುದು? ಸಾಲಗಾರರೇ? ಇದ್ದಕ್ಕಿದ್ದಂತೆಯೇ ಹೃದಯ ವ್ಯಾಪ್ತಿಗೆ ಮೀರಿ ಮಿಡಿಯತೊಡಗಿತು. ಎದೆಯನ್ನು ಒತ್ತಿ ಎರಡೂ ಕೈಗಳಿಂದ ಹಿಡಿದುಕೊಂಡ ರಾಜು. ಗೋಪಿ ಒಳಗಿನಿಂದ ಹೊರಬಂದ.

"ರಾಜೂ .... ಗೋಪಿ!" ಅಮ್ಮನ ಧ್ವನಿ!

ಹಾ, ಕಾದ ಕಬ್ಬಿಣದ ಮೇಲೆ ಶೀತಲವಾರಿ ಸುರಿದಂತಾಯಿತು! ಇಬ್ಬರೂ ಬಾಗಿಲಿಗೆ ಧಾವಿಸಿ ಅಗಣಿ ತೆರೆದರು. ಕೈಯಲ್ಲೊಂದು ಚೀಲ, ಸುಖ ದುಃಖಗಳ ಮುದ್ರೆಯೊತ್ತಿದ ಮಾತೃಮಯಿ ....

ಇಬ್ಬರೂ ಸುಮ್ಮನೆ ಸಹಜವಾಗಿ "ಬನ್ನಿ ಅಮ್ಮ ..." ಎಂದರು ದುಃಖ ಉಕ್ಕಿ ಬಂತು. ಮುಂದೆ ಮಾತು ಹೊರಡಲಿಲ್ಲ.

ಗಂಗೂ ಹೊಸ್ತಿಲು ದಾಟಿ ಒಳಬಂದಳು. ಕೈಯಲ್ಲಿದ್ದ ಚೀಲದಿಂದ ಹಣ್ಣು ಹಂಪಲು ಮತ್ತು ಚಕ್ಕಲಿ ಮುಸ್ರೋರಿಯ ಪೊಟ್ಟಣಗಳನ್ನು ಬೇರೆ ಬೇರೆಯಾಗಿ ತೆಗೆದುಕೊಟ್ಟನಂತರ ತಳಭಾಗದಲ್ಲಿ ವಸ್ತ್ರದಿಂದ ಕಟ್ಟಿದ್ದ ಭಾರವಾದ ಕಾಸಿನ ಮಾಲೆ ಮತ್ತು ಎರಡು ಕೈ ಕಡಗಗಳನ್ನು ಬಿಚ್ಚಿ ಮೇಜಿನ ಮೇಲಿಟ್ಟು ಹೇಳಿದಳು "ಈವೊತ್ತು ಬಂಗಾರಕ್ಕೆ ಬಹಳ ಬೆಲೆಯಿದೆ. ಕಾಸಿನ ಮಾಲೆ ಐವತ್ತು ಸಾವಿರಕ್ಕೆ ಮೀರಿ ಹೋಗಬಹುದು. ಈ ಕಡಗಗಳೂ ಅಷ್ಟೆ. ವಜ್ರದ ಹರಳಿಂದ ಕೂಡಿದ ಇವು ಒಳ್ಳೆಯ ಬೆಲೆ ಬಾಳುತ್ತವೆ." ಇವನ್ನು ಮಾರಿ ನಿಮ್ಮ ಸಾಲ ತೀರಿಸಿಕೊಂಡು ನಿಮ್ಮ ಉದ್ಯೋಗವನ್ನು ಪುನರಾರಂಭಿಸಿ ಕೊಳ್ಳಿ! ದೇವರು ಒಳ್ಳೆಯದು ಮಾಡಲಿ." ಎಂದವಳೇ ಹಿಂದಿರುಗಿದಳು. ಮಕ್ಕಳು ಇರಲು ಗೋಗರೆದರೂ ನಿಲ್ಲದೆ.

"ನಿಮ್ಮ ತಂದೆಗೆ ಊಟ ಇಡಬೇಕಲ್ಲ ...." ಎಂದು ಹೊರಟೇ ಹೋದಳು ಆ ತಾಯಿ.

ಹಿಂದಿನಿಂದ ದೀನ ನೋಟಗಳು ನಿಟ್ಟಿಸಿದುವು ಪ್ರಾಣಾಂತಕ ನೋವಿನಿಂದ. ಮತ್ತು ಸಂತೋಷದ ಭಾವದಿಂದ.

— ೦ —

# ಮಣಿ ಮೇಖಲಾ

೧೨

ಕುರ್ವನ್ನೇವೇಹ ಕರ್ಮಾಣಿ
ಜಿಜೀವಿಷೇಚ್ಛತ್‌ಂ ಸಮಾಃ ।

... ದೀರ್ಘ ಇರುಳು ಉರುಳಿತು. ನಿಶಾಕಾಳಿಕೆ ಹೆಜ್ಜೆಹೆಜ್ಜೆಗೆ ಹಿಂಜರಿದಳು.

.... ಇಡೀ ರಾತ್ರಿಯಲ್ಲಿ ಪಡೆದ ವಿಶ್ರಾಂತಿ .... ಸುಖನಿದ್ರೆ ನಿತ್ಯಸತ್ಯ.

... ಮೂಡಣದಲ್ಲಿ ಸುವರ್ಣಮಯ ಪಂಜು ಹಿಡಿದ ಉಷೆ ವಿಜಯೋತ್ಸವದಿಂದ ಹೆಜ್ಜೆ ಮುಂದಿಡುತಿದ್ದಾಳೆ. ಪೂರ್ವೀ ದಿಗ್ ತಟಾಂತಲಗ್ನದಲ್ಲಿ ಚಂದನರಾಗದ ಮುಗಿಲ್ ಗೋಪುರಗಳು ಮೂಡಿದುವು. ಊರೆಲ್ಲ ಬೆಳ್ಳಂ ಬೆಳಗಾಯಿತು. ಜಗತ್ತು ದಿನಚರಿಯಲ್ಲಿ ತೊಡಗಿ ಎಂದೋ ... ಸೂರ್ಯ ಮುಗಿಲು ದಿಣ್ಣೆಯನ್ನೇರಿದ್ದಾನೆ. ಪಕ್ಷಿಲೋಕದ ಉದಯರಾಗ ಉಕ್ಕಿ ಹರಿದು ರಾಗಾನುರಾಗ ಇಳಿಮುಖವಾಗಿದೆ. ತಂಗಾಳಿಯು ಅವ್ಯಾಹತವಾಗಿ ಕಿಟಕಿಯಲ್ಲಿ ತೂರಿ ಬರುತ್ತಿದೆ.

ಆದರೂ, ಹಾಸಿಗೆ ಬಿಟ್ಟೇಳಲು ಮನಸ್ಸೇ ಇಲ್ಲವೇನೋ ಎಂಬಷ್ಟು ಆಲಸ್ಯ ಮೈಯಲ್ಲಿ. ಏಳಲಾರದೇ ಎದ್ದು ಮೈಕೈ ಮುರಿದ ರವಿಚಂದ್ರ. ಯಥೋಚಿತವಾಗಿ ಪ್ರಾಥರ್ವಿಧಿ ಪೂರೈಸಿತು. ಮಡದಿ-ವಸುಧ ಊರಿಗೆ ಹೋಗಿದ್ದುದರಿಂದ ಒಳಗಡೆ ಅವನದೇ ಪಾರುಪತ್ಯ. ಬ್ರೆಡ್ ಮತ್ತು ಚಹಗಳ ಉಪಾಹಾರ ಮುಗಿಯಿತು. ಮಧ್ಯಾಹ್ನದ ಊಟ ಕ್ಯಾಂಟೀನಿನಲ್ಲಿ. ಸಾಯಂಕಾಲ ಲಘು ಆಹಾರ ಮನೆಯಲ್ಲೇ.

ರವಿಚಂದ್ರ ಕದಮುಚ್ಚಿ ರಸ್ತೆಗಿಳಿದ. ದೂರದ ಹೆದ್ದಾರಿಯಲ್ಲಿ ಬಸ್ಸಿನ ನಿಲ್ದಾಣ. ಅಲ್ಲಿಗೆ ಹೋಗಿ ಬಸ್ಸು ಹಿಡಿಯಬೇಕು ಆಫೀಸಿಗೆ. ರಸ್ತೆಯ ಎರಡೂ ಮಗ್ಗುಲಿಗೆ ನೀರು ನಿಂತು ನಾರುವ ಕೊಚ್ಚೆ. ಮನೆಮನೆಯ ಕಸ ಕಡ್ಡಿಗಳು-ಮಕ್ಕಳ ಇಸ್ಸಿ- ಹಿರಿಯರ ಉಗುಳು ಎಂಜಲುಗಳ ಮಯವಾದ ಮೋರಿಯಲ್ಲಿ ಕೊಮ್ಮೃವ ದುರ್ನಾತದಿಂದ ಮನಃಪ್ರಾಣಗಳು ಮುದುಡುತ್ತವೆ. ಹಗಲ್ ಶುದ್ದಿ ಮಾಡುವ ಮುನಿಸಿಪಾಲಿಟಿಗಾಗಲೀ ಅಲ್ಲಿ ವಾಸಿಸುವ ನಾಗರಿಕರಿಗಾಗಲೀ ನೈರ್ಮಲ್ಯ ಪ್ರಜ್ಞೆ ಲವಲೇಶವಾದರೂ ಇದ್ದಿದ್ದರೆ ಇಷ್ಟೊಂದು ಕೆಡುತ್ತಿರಲಿಲ್ಲ ರಸ್ತೆ. ನಾಗರಿಕ ಕಾಲಮಾನ, ನಾಗರಿಕ ಜನಾಂಗ ಅಂದಮೇಲೆ ನಾಗರಿಕ ಜೀವನ ಹೇಗಿರಬೇಕಿತ್ತು? ಈ ನಾಚಿಗೇಡಿತನದಲ್ಲಿ ನಾನೂ ಸಿಕ್ಕಿದವನೇ.

ಅಂತರಾತ್ಮ ಚೀರಿತು High road to hell!

ಮನಃಕಲ್ಪ ಅಸಹ್ಯಿಸಿ ಮುದುಡಿಕೊಂಡಿತು. ಆ ರಸ್ತೆಯನ್ನು ಎಷ್ಟು ಬೇಗ ದಾಟಿಕೊಂಡರೆ ಅಷ್ಟು ನೆಮ್ಮದಿ ಮನಸ್ಸಿಗೆ. ರವಿಚಂದ್ರ ಅವಸರವಸರವಾಗಿ ಹೆಜ್ಜೆ ಹಾಕತೊಡಗಿದ. ನಾಗರಿಕರೇ ಹೀಗಿದ್ದರೆ ಅನಾಗರಿಕರ ಪಾಡೇನು? ಮನಸ್ಸು ವಿಚಾರಗತ್ತರಿಯಲ್ಲಿ ಸಿಲ್ಕಿ ವಿಷಯ ಚರ್ವಿತಚರ್ವಣವಾಯಿತು. ಆದರೂ ಪರಿಹಾರಮಾರ್ಗವೆಂದರೆ ಇಲ್ಲಿಯ ನಾಗರಿಕರನ್ನು ಒಗ್ಗೂಡಿಸಿ ಸಾಮೂಹಿಕವಾಗಿ ನಾಗರಿಕ ನೈರ್ಮಲ್ಯ ಕಾರ್ಯಕ್ರಮ ರೂಪಿಸುವುದು. ಅದಕ್ಕೆ ಎಲ್ಲರೂ ಒಪ್ಪಿ ಒಗ್ಗೂಡಿದರೆ ಮಾತ್ರ ಮುಂದಿನ ಕ್ರಮ. ಹೊಲಸು ವಾತ ಮೂಗು ಬಾಯಿಗಳಿಗೆ ನುಗ್ಗದಂತೆ ಕರವಸ್ತ್ರವನ್ನು ಮುಚ್ಚಿಹಿಡಿದುಕೊಂಡು ಮುನ್ನಡೆದ. ರಸ್ತೆಯು ಗಲ್ಲಿಯೇನಲ್ಲ. ಅದರ ಉದ್ದಳತೆಗೆ ಹೆಜ್ಜೆ ಹೆಜ್ಜೆಗಳೇ ಮಾನದಂಡ.

ಅಂತೂ, ಆ ರಸ್ತೆ ಕಳೆಯಿತು. ಇನ್ನೇನು ಹೆದ್ದಾರಿಗೆ ಪದಾರ್ಪಣೆ ಮಾಡಬೇಕು. ಅಷ್ಟರಲ್ಲೇ ಪರಿಚಿತ ಮುಖ ದೃಷ್ಟಿಗೆ ಬಿತ್ತು. ಅವಳು ಶಾಲೆಯ ಗೆಳತಿ ಮಣಿ ಮೇಖಲಾ. ಹೈಸ್ಕೂಲ್ ವರೆಗೆ ಸಹಪಾಟಿ. ಆನಂತರ ಅಗೊಮ್ಮೆ ಈಗೊಮ್ಮೆ ಹೀಗೆಯೇ ಕಾಣಿಸಿಕೊಳ್ಳುತಿದ್ದಳು ಅಷ್ಟೆ. ಅವಳೆಡೆಗೆ ದಿಟ್ಟಿ ಹರಿದೊಡನೆಯೇ ನಾಲ್ಕೂ ಕಣ್ಣುಗಳು ಥಟ್ಟನೆ ಸಂಧಿಸಿದುವು. ತಕ್ಷಣ ನೋಟ

ವನ್ನು ಬೇರೆಡೆಗೆ ಹರಿಸಿ ಮುಗುಳು ನಗೆಯ ಸ್ವಾಗತ ನೀಡಿ ಕೇಳಿದ ರವಿಚಂದ್ರ "ನಿನ್ನ ಮನೆ ಇಲ್ಲಿದೆಯೇ ಮಣೀ? ನೀನು ಈ ಕಡೆ ಬರಲು ಕಾರಣ?"

"ನನ್ನ ಗೆಳತಿಯ ಮನೆ ಇಲ್ಲಿದೆ. ಅವಳನ್ನು ನೋಡಬೇಕಾಗಿತ್ತು."

"ನಿನ್ನ ಮನೆ ಇರುವುದೆಲ್ಲಿ?"

"ಇಂದಿರಾ ನಗರ...."

"ಓ! ಬಹಳ ದೂರ ಅಲ್ಲವೇ?

"ಹೌದು... ಏನು ಮಾಡೋಣ? ಓಡಾಡಬೇಕು, ಓಡಾಡುವೆ."

"ಅಷ್ಟು ದೂರದಿಂದ ಬರುವುದೆಂದರೆ ಕಷ್ಟವೇ."

"ನಿಜ. ವಿಧಿಯಿಲ್ಲ. ನನ್ನ ವೇಳೆ ಬಸ್ಸಿಗಾಗಿ ಕಾಯುವುದರಲ್ಲಿ ಮತ್ತು ಅತ್ತಿತ್ತ ಓಡಾಡುವುದರಲ್ಲಿ ಹೆಚ್ಚು ಹೆಚ್ಚಾಗಿ ಕಳೆದು ಹೋಗುತ್ತದೆ." ಕಳ ಕಳಿಯ ದನಿ ಹೊರ ಬಿತ್ತು.

"ಒಂದು ಲೂನಾ ಕೊಂಡುಕೊಂಡರೆ...?"

ಯೋಚಿಸುತ್ತಿರುವೆ ಅತೀ ವಾಹನಗಳ ಒತ್ತಡದಿಂದ ಅದೂ ಕಷ್ಟವೇ.

ರವಿಚಂದ್ರನ ಯೋಚನೆ ತನ್ನೆಡೆಗೇ ಹರಿಯಿತು.... ಅತೀ ಸಂಚಾರದ ಕಾರಣದಿಂದ ತಾನೂ ಈವರೆಗೆ ದ್ವಿಚಕ್ರವಾಹನವನ್ನು ಕೊಂಡಿರಲಿಲ್ಲ. ಇನ್ನು ಅವಳಿಗೆ ಆ ಸಲಹೆಯನ್ನಿತ್ತುದು ಸರಿಯಲ್ಲವೆನಿಸಿ ತನಗೆ ತಾನೇ ಮುಗುಳು ನಕ್ಕ. ಅಡ್ಡದಾರಿಯಿಂದ ಹೆದ್ದಾರಿಗೆ ಕಾಲಿಟ್ಟಾಗ ಇಬ್ಬರ ಹಾದಿಯೂ ಕವಲೊಡೆಯಿತು. ಮಾನಸಿಕ ಹಿಂಸೆ ನೀಡುತಿದ್ದ ದುರ್ನಾತದ ರಸ್ತೆ ಹಿಂದುಳಿಯಿತು. ಅವಳು ದುರ್ನಾತದ ಲೋಕವನ್ನು ಹೊಕ್ಕಳು. ಅವನೊಮ್ಮೆ ಹಿಂದಿರುಗಿ ನೋಡಿದ. ಮಣಿ ಮೇಖಲಾ ಒಂದು ಮನೆಯ ಮೆಟ್ಟಿಲನ್ನು ಹತ್ತುತಿದ್ದುದು ಕಂಡು ಬಂತು. ಒಳ್ಳೆಯ ಕುಲೀನೆಯಂತೆ ಕಂಡು ಬರುವ ಅವಳು ತುಂಬ ಚಟುವಟಿಕೆಯ ಹುಡುಗಿ. ಚಿಗರಿಯನ್ನು ಮೀರಿಸುವಂತಹ ವ್ಯಕ್ತಿತ್ವ.

ಅವಳ ಸುಸುಂದರ ವ್ಯಕ್ತಿತ್ವವನ್ನೇ ಮನೋಭಿತ್ತಿಯಲ್ಲಿ ಚಿತ್ರಿಸಿ ಕೊಳ್ಳುತ್ತ ಮುಂದಿನ ಹಾದಿ ಹಿಡಿದ ರವಿಚಂದ್ರ.

೦ ೦ ೦ ೦

ಹೊತ್ತು ಉರುಳಿತು ; ಸಂಜೆ ಹೆಜ್ಜೆಯಿಡುತ್ತಿದೆ.

ಆಫೀಸು ಮುಚ್ಚಿದ ಬಳಿಕ ರವಿಚಂದ್ರ ಹೊರಹೊರಟ. ಸಾಯಂ ಸೊಂಪಿನಲಂಪು ಮೈಮನಗಳನ್ನು ಮುದ್ದಿಸುತಿತ್ತು. ಕ್ಷಣಕ್ಷಣಕ್ಕೂ ತಣ್ಪು ತಳೆಯುವ ತಂಗಾಳಿಯ ಲೀಲಾ ಖೇಲನವು ಮೆಲ್ಲನೆ ಮೈ ನಡುಗಿಸುವಂತಿತ್ತು ಮಾಗಿಯ ಹಿಮವೊತ್ತಿ. ರವಿಚಂದ್ರ ಮನೆಗೆ ಹೋಗುವ ಹಾದಿಯಲ್ಲಿ ಗೆಣೆಯ ಶ್ರೀರಾಮನನ್ನು ನೋಡುವ ಸಲುವಾಗಿ ಮಧ್ಯೆ ಬಸ್ಸಿನಿಂದಿಳಿದ. ಬಸ್ಸಿನ ನಿಲ್ದಾಣದಿಂದ ಅವನ ಮನೆ ಅಂತಹ ದೂರವೇನೂ ಇರಲಿಲ್ಲ. ಹತ್ತು ನಿಮಿಷದ ನಡಿಗೆ. ಅವನೂ ಅದೇ ತಾನೇ ಆಫೀಸಿನಿಂದ ಹಿಂದಿರುಗಿದ್ದ. ಗೆಳೆಯನನ್ನು ನೋಡುತ್ತಲೂ ಆದರದಿಂದ ಬರಮಾಡಿಕೊಂಡ. ಉಭಯ ಕುಶಲೋಪರಿಯೂ ನಡೆಯಿತು. ಇಬ್ಬರೂ ಅಕ್ಕಪಕ್ಕದಲ್ಲಿ ಸೋಫದ ಮೇಲೆ ಮೈ ಚೆಲ್ಲಿದರು. ಗೃಹಿಣಿ ವೈದೇಹಿಯು ಈರ್ವರಿಗೂ ಉಪ್ಪಿಟ್ಟು ಕಾಫಿಯನಿತ್ತು ಉಪಚರಿಸಿದಳು. ಮೂವರೂ ಸ್ವಲ್ಪಹೊತ್ತು ಆತ್ಮೀಯತೆಯ ಬಾಂಧವ್ಯದಲ್ಲಿ ಸಾನಂದದಿಂದ ಸಂಭಾಷಣೆ ನಡೆಸಿದರು. ಅನಂತರ ಶ್ರೀರಾಮ್ ಗೆಳೆಯನನ್ನು ಕುರಿತು ಅಂದ,

"ಇಬ್ಬರೂ ಹೊರಗಡೆ ಒಂದು ಸುತ್ತು ತಿರುಗಾಡೋಣ. ಸಾಯಂಕಾಲದ ಹವೆ ಚೆನ್ನಾಗಿರುತ್ತದೆ." ಬಳಿಕ ಮಡದಿಯನ್ನೂ ಕೇಳಿದ "ನೀನೂ ಬರುತ್ತೀಯೆಷ್ಟೆ ?"

"ಇಂದು ಸ್ವಲ್ಪ ಕೆಲಸವಿದೆ. ನೀವೇ ಹೋಗಿ ಬನ್ನಿ."

ಶ್ರೀರಾಮ್ ರವಿಚಂದ್ರನೊಡನೆ ಹೊರಟ. ಕಬ್ಬನ್ ಪಾರ್ಕಿನಲ್ಲಿ ಒಂದು ಸುತ್ತು ಅಡ್ಡಾಡಿ ಪುನಃ ಹೆದ್ದಾರಿಗೆ ಬಂದಾಗ ಹೆಜ್ಜೆಗಳ ಪಟಪಟ ಸದ್ದು ಕೇಳಿಬಂತು. ಸುಮ್ಮನೆ–ಸಹಜವಾಗಿ ಏನಿರಬಹುದೆಂದು ಹಿಂತಿರುಗಿ ನೋಡಿದರೆ ಅದೇ ಹುಡುಗಿ ಮಣಿ ಮೇಖಲಾ. ಹರಿದ್ರಾ ಕುಂಕುಮ ಸುಶೋಭಿತೆ, ಕೌಶೇಯ ವಸ್ತ್ರಧಾರಿಣಿ, ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡೋಣವೆನಿಸುವಂತಹ ಆಕರ್ಷಕ ವ್ಯಕ್ತಿತ್ವ. ಆ ಕ್ಷಣವೇ ಅವಳು ತಮ್ಮನ್ನು ದಾಟಿಕೊಂಡು ಮುಂದೆ ನಡೆದು ಮಿಂಚಿನಂತೆ ಕಣ್ಮರೆಯಾದಳು. ಅವಳನ್ನೇ ನೋಡುತಿದ್ದ ರವಿಚಂದ್ರ ಅವಳು ಕಣ್ಮರೆಯಾದ ಬಳಿಕ ಕೇಳಿದ,

"ಶ್ರೀರಾಮ್, ಇವಳಾರು ನಿನಗೊತ್ತೇ ?"

ಅವನು ತಲೆಯಾಡಿಸುತ್ತ ಪ್ರಸನ್ನ ಭಾವದಿಂದ ನುಡಿದ "ಗೊತ್ತು .... ಗೊತ್ತು. ಕಾಲೇಜಿನಲ್ಲಿ ನನಗಿಂತ ಎರಡು ವರ್ಷ ಜೂನಿಯರ್, ಬಹಳ ಚಟುವಟಿಕೆಯ ವ್ಯಕ್ತಿ. ಅವಳಿಗೆ ಸರಿಯಾದ ಬೆಂಬಲವಿಲ್ಲ. ಅವಳು ಯಾವುದೇ ಉನ್ನತ ಸ್ಥಾನವನ್ನು ಅಲಂಕರಿಸಬಹುದಾದ ಯೋಗ್ಯತೆ ಉಳ್ಳ ಬುದ್ಧಿವಂತೆ. ಅವಳು ಐ. ಎ. ಎಸ್. ಪರೀಕ್ಷೆಗೆ ಕುಳಿತಾಗಲೇ ತಂದೆ ಕಾಹಿಲೆಬಿದ್ದರು. ಪರೀಕ್ಷೆಗೆ ಕುಳಿತುಕೊಳ್ಳಲಾಗಲಿಲ್ಲ. ಸಧ್ಯ, ಸರ್ವೆ ಅಫೀಸಿನಲ್ಲಿ ಕ್ಲಾರ್ಕ್. ಬುದ್ಧಿವಂತೆಯಾದುದರಿಂದ ಆ ಸರ್ವಿಸಿನಲ್ಲೇ ಮುಂದೆ ಬರಬಹುದು. ನನ್ನ ಕೆಲಸ ಮಹಡಿಯ ಮೇಲೆ. ಇವಳದು ಕೆಳಗಡೆ, ಅಲ್ಲೇ ಪಕ್ಕದ ಮಾರ್ವಾಡಿ ಆಫೀಸಿನಲ್ಲಿ ಲೆಕ್ಕ ಬರೆದು ಗಳಿಸುವ ಯೋಜನೆ ಬೇರೆ ...."

"ನಾನೂ ಅವಳನ್ನು ಬಲ್ಲೆ. ಹೈಸ್ಕೂಲ್‌ವರೆಗೆ ನನ್ನ ಸಹಪಾಠಿ. ಅನಂತರ ಅವಳನ್ನು ಕಂಡಿರಲಿಲ್ಲ. ಈಚಿಗೆ ಅಲ್ಲಲ್ಲಿ ಕಾಣಸಿಗುತ್ತಾಳೆ."

"ಅವಳ ಮೇಲೆ ಬಹಳ ಜನರಿಗೆ ಕಾಕ ದೃಷ್ಟಿ. ಅವಳು ಯಾರಿಗೂ ಜಗ್ಗುವವಳಲ್ಲ."

ಇಬ್ಬರೂ ಚಳಿಗಾಳಿಯ ತೀಟೆ ತೀರಿಸಿಕೊಳ್ಳಲು ಬ್ಲೂಮೂನ್ ಹೋಟೆಲ್ ಹೊಕ್ಕರು. ಹೊತ್ತು ಎಂಟರ ಗಡಿಯನ್ನು ಮುಟ್ಟುವುದರಲ್ಲಿತ್ತು. ಇಬ್ಬರೂ ತಮಗೆ ಬೇಕು ಬೇಕಾದ ತಿಂಡಿತಿನಿಸುಗಳಿಗೆ ಅಪ್ಪಣೆ ಮಾಡಿದರು. ಹೋಟೆಲ್ ತುಂಬ ಜನವೇ ಜನ. ಬಗೆಬಗೆಯ ಖಾದ್ಯಗಳ ಕಂಪು ಘ್ರಾಣೇಂದ್ರಿಯವನ್ನು ಸುಮ್ಮನೆ ಮುಟ್ಟುತ್ತಿದೆ. ಕೈಬಾಯ್ ಕಾಳಗ ಹೂಡಿದ್ದಾರೆ ಜನ. ಬಸಿ ಬಟ್ಟಲು ಚಂಚೆಗಳ ಕಿಣಿಕಿಣಿ ಸದ್ದು, ಮಾತುಕತೆಯ ಮರ್ಮರ ಕಿವಿಯನ್ನು ತುಂಬುತ್ತದೆ. ಮಾಣಿಗಳು ಓಡಾಡುತಿದ್ದಾರೆ. ಆಗಾಗ ನಗೆಯ ಗುಲ್ಲು ಏಳುತ್ತದೆ.

ತಮ್ಮ ಇಚ್ಛಿತ ಉಪಾಹಾರ ಬರಬೇಕಾದರೆ ಸ್ವಲ್ಪಹೊತ್ತೇ ಹಿಡಿಯಿತು. ಊಟಕ್ಕೆ ಕೈ ಹಚ್ಚಿದಾಗ ಕ್ಯಾಬರೆ ಕುಣಿತಕ್ಕೆ ಇಬ್ಬರು ಹುಡುಗಿಯರು

ಇಳಿದರು. ಆ ಬೃಹದ್ ಕೊಠಡಿಯಲ್ಲಿ ಅಲ್ಲಿ-ಇಲ್ಲಿ ಕುಣಿಯುತ್ತ ಈ ಕಡೆ ಬಂದಾಗ ನೋಡಿದರೆ ಎಂತಹ ಆಶ್ಚರ್ಯ! ತಮ್ಮ ಕಣ್ಣುಗಳನ್ನೇ ನಂಬಲಾಗದಂತಹ ದೃಶ್ಯ! ಅವರಲ್ಲಿ ಒಬ್ಬಾಕೆ ಅದೇ ಆ ಮಣಿ ಮೇಖಲಾ! ದೃಷ್ಟಿಯನ್ನು ನೆಲದಮೇಲೆ ಚೆಲ್ಲಿಕೊಟ್ಟು ಕುಣಿಕುಣಿದು ಅವಳು ಮುಂದೆ ಸರಿದು ಹೋಗುವವರೆಗೂ ಇವರಿಬ್ಬರೂ ತಲೆಯೆತ್ತಲಿಲ್ಲ. ಚೆಕ್ಕಸ ಬೆರಗಾದ ದೃಷ್ಟಿ ತಮ್ಮನ್ನು ವಂಚಿಸಿದುದು ಸತ್ಯ. ಕಂಡೂ ಕಾಣದ ಸ್ಥಿತಿಯಲ್ಲಿ ಸಾಗಿತು ಊಟ. ರುಚಿ ಅರುಚಿ ತಿಳಿಯದಷ್ಟು ಮನಃಬುದ್ಧಿಗಳು ಸಂಘರ್ಷಮಯ. ಅವರು ಮುಂದೆ ಮುಂದೆ ಸರಿದು ಹೋದನಂತರ ಶ್ರೀರಾಮ್ ಕಣ್ಣು ಮಿಸುಕಿ "ನೋಡಿದೆಯಾ, ಇವಳು ಸಾಮಾನ್ಯಳಲ್ಲ ಬಿಡು; ಓದಿ ವಿದ್ಯಾವಂತಳಾಗಿ, ಉದ್ಯೋಗಿಯಾಗಿ ಈ ಕುಣಿತಕ್ಕೆ ಇಳಿದುದು ಆಶ್ಚರ್ಯ ವಿಶೇಷ!"

"ಬಹುಶಃ ಹಣದ ಹೇರಾಶೆ."

ಸ್ವಲ್ಪ ಹೊತ್ತು ಮಾತಾಡಲಿಲ್ಲ. ಮನಸ್ಸಿನ ಮೇಲೆ ಆದ ಪರಿಣಾಮ ವಿಷಯವನ್ನು ಒರೆಗೆ ಹಚ್ಚಿತು. ರವಿಚಂದ್ರ ಊಟ ಮುಗಿಸಿ ನೀರು ಕುಡಿದು ಸಿಗರೇಟು ಹಚ್ಚಿದ. ಶ್ರೀರಾಮ್ ಕೈ ಬಾಯಿ ಒರಿಸಿ ಅಂದ,

"ಅವಳ ತಂದೆ ಪಾರ್ಶ್ವವಾಯುವಿನಿಂದ ನರಳುತಿದ್ದಾರಂತೆ. ಅವಳೇ ಒಮ್ಮೆ ಹಾಗೆಂದು ಹೇಳಿದ್ದುಂಟು. ಜೀವನದ ಆರ್ಥಿಕ ಮುಗ್ಗಟ್ಟು ಈ ನೃತ್ಯಕ್ಕೆ ಇಳಿಸಿರಬಹುದು. ಅವಳು ಆಗಾಗ ಇಲ್ಲಿ ಕಾಣಸಿಗುತ್ತಾಳೆ."

"ಹಾಗಿದ್ದರೆ ಇವಳೇ ಸಂಸಾರಕ್ಕೆ ಹೊಣೆಗಾತಿಯಿರಬಹುದು..."

"ಆದರೂ ಕುಲೀನರಿಗೆ ಇದು ಹೇಳಿಸಿದ್ದಲ್ಲ ಎನಿಸುತ್ತದೆ ನನಗೆ."

"ನಿಜ...ನಿಜ."

ಇಬ್ಬರೂ ಸಿಗರೇಟು ಸೇವನೆಯ ಬಳಿಕ ಬಿಲ್ಲು ಪಾವತಿ ಮಾಡಿ ಹೊರಾಂಗಣಕ್ಕೆ ಪದಾರ್ಪಣೆ ಮಾಡಿದಾಗಲೇ, ಮಣಿ ಮೇಖಲಾ ತನ್ನ ಗೆಳತಿಯೊಂದಿಗೆ ಸರಸರ ನಡೆದು ಇವರನ್ನು ಹಿಂದೆ ಹಾಕಿ ಹೊರಟೇ ಹೋದಳು, ಮಿಂಚಿನ ವೇಗದಿಂದ. ಆ ಕ್ಷಣ ಮಿಂಚು ಸುಳಿದು ಅಳಿದು ಹೋದಂತಾಯಿತು ನೆಟ್ಟ ದೃಷ್ಟಿಗೆ.

"ಇದೇನು ಇಷ್ಟು ಬೇಗ ಮುಗಿಯಿತೇ ಇವಳ ಕುಣಿತ ?" ಕಣ್ಣರಳಿಸಿದ ರವಿಚಂದ್ರ.

"ಬಹುಶಃ ಮೊದಲ ತಂಡದ ಕಾಂಟ್ರಾಕ್ಟ್ ಇರಬಹುದು."

ಅವಳು ಮುಂದೆ ನುಗ್ಗಿ ಹೊರಟು ಹೋದ ಹಾದಿಯ ಕಡೆ ಕಣ್ಣು ಹಾಯಿಸಿದರೆ ಅವಳ ಮಾತಿರಲಿ ಅವಳ ನೆರಳೂ ಕಾಣಿಸಲಿಲ್ಲ. ಚುರುಕು ಎಂದರೆ ಹೀಗಿರಬೇಕು !" ಉದ್ಗಾರ ತೆಗೆದ ಶ್ರೀರಾಮ್.

"ಚಿಗರಿ ಕಣಯ್ಯ."

ಅಲ್ಲಿಂದ ಸ್ವಲ್ಪ ದೂರ ನಡೆದ ಬಳಿಕ ಇಬ್ಬರ ಹಾದಿಯೂ ಕವಲೊಡೆಯಿತು. ಪರಸ್ಪರ 'ಗುಡ್ ನೈಟ್' ಹೇಳಿ ಬೀಳ್ಕೊಂಡರು. ಶಬ್ದಮಾಲಿನ್ಯದಿಂದ ಕೂಡಿದ ಹಾದಿಯಲ್ಲಿ ಸಾಗಿತು ನಡಿಗೆ.

೦ ೦ ೦ ೦

ರವಿಚಂದ್ರ ಆಫೀಸು ಮುಗಿದಾಗ ಯೋಚಿಸಿದ...ಇಂದು ಶೈಲೇಶ್ವರನ ಮದುವೆ. ಶೈಲೇಶ್ ತನಗೆ ಮಾತ್ರವಲ್ಲ, ಶ್ರೀರಾಮನ ಗೆಳೆಯನೂ ಹೌದು. ಬಹುಶಃ ಅವನೂ ಇಂದು ಮದುವೆಗೆ ಹೋಗಬಹುದು. ಇಬ್ಬರೂ ಒಟ್ಟಿಗೇ ಹೋದರೆ ಒಳ್ಳಿತು. ಕೂಟ ಹಿತಕರವಾಗುತ್ತೆ. ಅದು ಲೇಸು ಎನಿಸಿತು.

ಆ ಕೂಡಲೇ ಶ್ರೀರಾಮನಿಗೆ ರಿಂಗ್ ಮಾಡಿದ. ಆ ಕೊನೆಯಿಂದ ಅವನೇ ಮಾತಾಡಿದ,

"ಹಲೋ, ಏನಪ್ಪಾ ರವಿ ?"

"ಇಂದು ಶೈಲೇಶ್ ಮದುವೆ. ನೀನು ಬರುತ್ತೀಯಷ್ಟೆ ?"

"ಹೌದು.......ನೀನು ಇಲ್ಲಿಗೇ ಬಂದುಬಿಡು. ಇಲ್ಲಿಂದ ಕೂಡಿಯೇ ಹೋಗೋಣ. ಹೇಗೂ ನಿನ್ನ ಮಡದಿ ಬಂದಿಲ್ಲವಷ್ಟೆ ?"

"ಇಲ್ಲ. ವಸುಧ ಬರುವುದು ಇನ್ನೂ ಒಂದು ವಾರ. ನಾವು ಕೂಡಿ ಹೋಗುವ ಯೋಚನೆಯಿಂದಲೇ ನಿನಗೆ ರಿಂಗ್ ಮಾಡಿದ್ದು."

"ಸರಿ ಇಲ್ಲಿಯೇ ಬಂದುಬಿಡು."

"ಅಚ್ಛಾ....!"

ರವಿಚಂದ್ರ ಗೆಳೆಯನ ಆಮಂತ್ರಣವನ್ನು ಮಾನಿಸಿ ಅವನ ಮನೆ ಹಾದಿ ಹಿಡಿದ. ಇಪ್ಪತ್ತು ನಿಮಿಷಗಳಲ್ಲಿ ಹಾದಿ ಕಳೆಯಿತು. ಗೆಳೆಯ ತಲೆಬಾಗಿಲಿನಲ್ಲಿ ಎದುರಾದ. ಚಹ ಬಿಸ್ಕತ್ತುಗಳ ಆತ್ಮೀಯ ಸ್ವಾಗತ ದೊರೆಯಿತು. ಅನಂತರ ಕೀರ್ತಿ ಕಲ್ಯಾಣ ಮಂಟಪದಲ್ಲಿ ಆರು ಗಂಟೆಗೆ ರಿಸೆಪ್ಷನ್. ಕೀರ್ತಿ ಕಲ್ಯಾಣ ಮಂಟಪ ದೂರವಾದುದರಿಂದ ಒಂದು ಆಟೋ ಹಿಡಿದರು. ಶೈಲೇಶ್ ಎಲ್. ಐ. ಸಿ. ಏಜೆಂಟ್. ಅತ್ಯಂತ ಸುಂದರ ಪುರುಷ. ಗುಂಗುರು ಗುಂಗುರಾದ ಜೊಂತೆ ಕೂದಲಿಂದ ಇನ್ನಷ್ಟು ಕಳೆಗಟ್ಟಿತ್ತು ಮುಖಬಿಂಬ. ವಧು ನೋಡಿದರೆ ಅವನಿಗೂ ಅವಳಿಗೂ ಅರ್ಥಾತ್ ಸಂಬಂಧವಿಲ್ಲ. ಹಣವಂತಿಕೆ ಕುರೂಪವನ್ನು ಬದಿಗೊತ್ತಿಬಿಟ್ಟಿದೆ ಎಂದರೆ ಆಶ್ಚರ್ಯವಿಲ್ಲ. ಇಬ್ಬರೂ ಮುಂದುಗಡೆಯ ಸಾಲಿನಲ್ಲಿ ಸುಖಾಸೀನನಾದರು:

ಮಾಂಡವಿ ಆರ್ಕೆಸ್ಟ್ರದವರಿಂದ ಸಂಗೀತ ವೈವಿಧ್ಯ. ಇಬ್ಬರೂ ಅಷ್ಟೊಂದು ಸಂಗೀತ ಪ್ರೇಮಿಗಳಲ್ಲವಾದುದರಿಂದ ಮನಃದೃಷ್ಟಿಗಳು ಅತ್ತ ಹರಿಯಲಿಲ್ಲ. ಹೊತ್ತು ಉರುಳಿತು. ರಂಗುರಂಗಿನ ಜನ ಸಾಂದ್ರದಿಂದ ರಿಸೆಪ್ಷನ್ ಕಳೆ ಕಟ್ಟುತ್ತಿದೆ. ಎಷ್ಟೋ ಮಂದಿ ಗೆಳೆಯರ, ಆತ್ಮೀಯರ ಸಂದರ್ಶನವಾಯಿತು. ಆತ್ಮೀಯ ಮಾತುಕತೆಗಳಾದುವು. ಇನ್ನೇನು ಹೊರಡುವ ಯೋಚನೆಯಲ್ಲಿರುವಾಗ, ಒಮ್ಮೆ ಸುಮ್ಮನೆ–ಸಹಜವಾಗಿ ಆರ್ಕೆಸ್ಟ್ರದವರತ್ತ ದೃಷ್ಟಿ ಹೊರಳಿಸಿದಾಗ ಆಶ್ಚರ್ಯವೇ ಕಾದಿತ್ತು. ಸಂಗೀತ ಹಾಡುತ್ತಿದ್ದವಳು ಅದೇ ಆ ಮಣಿ ಮೇಖಲಾ !

ರವಿಚಂದ್ರ ಗೆಳೆಯನನ್ನು ಮೊಣಕೈಯಲ್ಲಿ ತಿವಿದು ವೇದಿಕೆಯತ್ತ ಕಣ್ಸನ್ನೆ ಮಾಡಿದ. ನೋಡಿದರೆ ಆಶ್ಚರ್ಯವನ್ನು ಅತ್ಯಾಶ್ಚರ್ಯಗೊಳಿಸುವಂತಹ ಮನೋಹರ ದೃಶ್ಯ. ನಿರಾಭರಣೆ, ಸರಳ ಶ್ವೇತ ವಸನಧಾರಿಣಿ, ಸೌಮ್ಯ ಸುಂದರ ವದನ ಸಂಪತ್ತು. ಸುದೀರ್ಘ ದೇಹಯಷ್ಟಿ. ಸುಶ್ರಾವ್ಯ ಕಂಠದಿಂದ ಹರಿಯುವ ಶ್ರೀಕೃಷ್ಣ ಗೀತೋಪದೇಶ. ಒಂದೊಂದೂ ಆಕರ್ಷಣೀಯವೇ. ಕಣ್ಮುಚ್ಚಿ ಭಕ್ತಿಭಾವದಿಂದ ಹಾಡುತ್ತಲಿದ್ದರೆ ಇನ್ನಷ್ಟು ಹೊತ್ತು ಅಲ್ಲೆ

ಸೋಣ ಎಂಬಷ್ಟು ರಾಗದ ತನಿಯಿಂಪು. ಇಬ್ಬರೂ ಹೊರಡುವ ಯೋಚನೆಯನ್ನು ಅರ್ಧ ಗಂಟೆ ಮುಂದೂಡಿ ಸಂಗೀತದ ಸವಿಯನ್ನುಂಡು ಡಿನ್ನರ್ ಹಾಲಿನಲ್ಲಿ ಏರ್ಪಡಿಸಿದ್ದ ಟೀ ಪಾರ್ಟಿಯಲ್ಲಿ ಪಾಲ್ಗೊಂಡರು.

ಅದ್ಧೂರಿಯ ಟೀ ಪಾರ್ಟಿ. ಅದ್ಧೂರಿಯ ಮಿತ್ರ ಬಂಧು ಜನ.

೦ ೦ ೦ ೦

ಢನ್, ಢನ್, ಢನ್, ಢಣ್....

ರವಿಚಂದ್ರ ಹಾಸಿಗೆ ಬಿಟ್ಟಾಗಲೇ ಒಂಭತ್ತು ಗಂಟೆ. ಗಂಟಾರವವನ್ನು ಹಾಸಿಗೆಯಿಂದಲೇ ಆಲೈಸಿದ. ಎಂಟು ಗಂಟೆಯಿರಬಹುದೆಂದು ಯೋಚಿಸಿದ್ದ ಮನಸ್ಸಿಗೆ ಒಂಭತ್ತು ಗಂಟೆಗಳ ಎಣಿಕೆ ಆಶ್ಚರ್ಯ ಮೂಡಿಸಿತು. ಇದೇನು ? ಇಂದು ಒಂಭತ್ತು ಗಂಟೆಯವರೆಗಿನ ನಿದ್ದೆ? ಎಂದುಕೊಳ್ಳುತ್ತಲೇ ಪ್ರಾತಃರ್ವಿಧಿಯನ್ನು ಪೂರೈಸಿದ. ಯಾಕೋ ಮೈ ಕೈ ಭಾರ- ಸೋಮಾರಿತನದ ಜಡ್ಡೋ ಅಥವಾ ನಿಜವಾದ ಅನಾರೋಗ್ಯವೋ ತಿಳಿಯದು. ಮೈ ಕೈ ಹಿಸುಕಿದಂತೆ ಮೈಯೆಲ್ಲಾ ನೋವು. ಅತ್ತಿತ್ತ ತಿರುಗಿ ಮೈ ಬಾಗಿಸಿ ಮೂಳೆ ಮೂಳೆಗಳಿಗೆ ಕಸರತ್ ನೀಡಿದ. ಆದರೂ, ನೋವು ಕಳೆಯಲಿಲ್ಲ. ತಲೆ ಭಾರ, ಗಂಟಲು ಕೆರೆತ, ಬೆನ್ನು ನೋವುಗಳನ್ನು ಗಮನಿಸಿದರೆ ಜ್ವರ ಬರಬಹುದೇನೋ ಎಂಬ ಯೋಚನೆ ಮೂಡಿಸಿತು. ಈಗಲೇ ಔಷಧ ತೆಗೆದುಕೊಳ್ಳದಿದ್ದರೆ ಜ್ವರ ಬಂದು ಹಾಸಿಗೆ ಹಿಡಿಯಬಹುದು. ಮನೆಯಲ್ಲಿ ಮಡದಿಯೂ ಇಲ್ಲವಾದ್ದರಿಂದ ಮುನ್ನೆಚ್ಚರಿಕೆ ತೆಗೆದುಕೊಳ್ಳದಿದ್ದರೆ ಕಷ್ಟವೇ ಎನಿಸಿತು. ಉಪಹಾರಕ್ಕಾಗಿ ಬ್ರೆಡ್ಡು ಹಾಲು ತೆಗೆದುಕೊಂಡು ಅಟೋ ಹಿಡಿದ ಚಿಕಿತ್ಸಾಲಯಕ್ಕೆ. ಡಾ|| ವೆಂಕಟೇಶ್ ಬಹಳ ದಿನಗಳಿಂದ ಪರಿಚಯಸ್ಥ–ಗೆಳೆಯ–ಡಾಕ್ಟರು ಎಲ್ಲಾ. ಅವನೇ ಅಂದಿನಿಂದಲೂ ತನಗೆ–ತನ್ನ ಕುಟುಂಬಕ್ಕೆ ಡಾಕ್ಟರು.

ಕೆಲವೇ ನಿಮಿಷಗಳಲ್ಲಿ ಹಾದಿ ಕಳೆದು ಆಸ್ಪತ್ರೆ ಮುಟ್ಟಿದ.

ಬೆಂಚಿನ ಮೇಲೆ ಕಾದು ಕುಳಿತುಕೊಂಡ. ನರ ನಾಡಿಗಳಲ್ಲಿ ಚಳಿಯ ಝುರಿ ಚಿಲ್ಲನೆ ಹರಿದಾಡತೊಡಗಿತು. ಇಂದು ಜ್ವರ ಬರುವುದು ಖಂಡಿತ ಇಲ್ಲಿಗೆ ಬಂದುದು ಒಳ್ಳೆಯದಾಯ್ತು ಎಂದುಕೊಂಡ ಮನದಲ್ಲಿ.

ಇಬ್ಬರು ದಾದಿಯರೊಡನೆ ಕೈಯಲ್ಲಿ ಔಷಧಿ ಟ್ರೇಯೊಂದಿಗೆ ಎದುರಾದಳು ಮಣಿ ಮೇಖಲಾ. ರವಿಚಂದ್ರ ಆಶ್ಚರ್ಯಚಕಿತನಾದ. ನೆಟ್ಟ ನೋಟ ಸಂಚಲಿಸಲಿಲ್ಲ. ಮನಮತ್ತತೆಯಿಂದ ಯೋಚನೆಯಲೆಗಳು ಸ್ತಬ್ಧವಾದುವು. ಅವಳ ನೋಟ ಇತ್ತ ಹರಿಯುತ್ತಲೂ ಮಂದಹಾಸ ಬೀರಿದಳು.

"ಇಲ್ಲೇಕಿದ್ದಿ ಮಣೀ ? ನೀನು ಪೇಷಂಟೋ ಅಥವಾ ನರ್ಸೋ ತಿಳಿಯುದಲ್ಲಾ ?"

"ನಾನು ನರ್ಸ್. ನನ್ನ ಧವಳಾಂಬರ ನೋಡಿದರೆ ತಿಳಿಯದೇ ?" ಸರಳ ಸ್ಮಿತ ರೇಖೆ ಹರಿಯಿತು ತುಟಿಗಳಲ್ಲಿ.

"ನೀನಿಲ್ಲಿ ನರ್ಸಾಗಲು ಕಾರಣ ? ನಿನ್ನ ಹಿಂದಿನ ವೃತ್ತಿ ಏನಾಯಿತು ?"

"ನನ್ನ ವೃತ್ತಿ ಎಲ್ಲಿ ಹೋಗುತ್ತೆ ? ಇದ್ದೇ ಇದೆ. ಇಲ್ಲಿ ಪ್ರತಿ ಭಾನುವಾರಗಳಲ್ಲಿ ಸಣ್ಣ ಫ್ರೀ ಸರ್ವೀಸ್ ಮಾಡುವ ಸಲುವಾಗಿ ಬರುವೆ. ರೋಗಿಗಳ ನೋವಿಗೆ ಸ್ಪಂದಿಸುವ ಉದ್ದೇಶದಿಂದ ಬೆಳಿಗ್ಗೆ ಒಂಭತ್ತು ಗಂಟೆಗೆ ಬಂದು ಮಧ್ಯಾಹ್ನ ಒಂದೂವರೆ ಗಂಟೆಗೆ ಹಿಂದಿರುಗುವೆ. ಏನೋ, ಅಳಿಲ ಮಳಲ ಸೇವೆ ಬಿಡಿ."

"ಒಳ್ಳೆಯದು, God bless you. !'

"Thank you !"

ಅವಳು ದಾದಿಯರೊಂದಿಗೆ ಎದುರಿನ ವಾರ್ಡಿಗೆ ಹೋದಳು. ರವಿಚಂದ್ರ ಅವಳ ಚಟುವಟಿಕೆಯ ಪಾತ್ರವನ್ನು ಮನದಲ್ಲೇ ಮೆಲುಕು ಹಾಕಿದ. ತಲೆಯ ತುಂಬ ಆಶ್ಚರ್ಯದ ಚಿಹ್ನೆಗಳು ಮೂಡಿ ನಿಮಿರಿ ನಿಂತುವು.

ಆಪರೇಶನ್ ಥಿಯೇಟರಿನ ಕದ ತೆರೆಯಿತು. ಡಾ|| ವೆಂಕಟೇಶ್ ಹೊರ ಬಂದ.

"ಓ ! ಏನಪ್ಪಾ, ಯಾವಾಗ ಬಂದೆ ? ಏಕೆ ಬಂದೆ ? ಬಂದು ಬಹಳ ಹೊತ್ತಾಯಿತೇ ?"

ಪ್ರಶ್ನೆಗಳ ಮೇಲೆ ಪ್ರಶ್ನೆಗಳು ಹೊರಬಿದ್ದುವು, ಪ್ರಸನ್ನ ಮುಖದಿಂದ.

"ಆಗಲೇ ಬಂದೆ. ನಿನಗಾಗಿ ಕಾಯುತ್ತಿರುವೆ."

"ಹೇಗಿದ್ದೀ ? ಏನು ಸಮಾಚಾರ ?"

"ನಿನ್ನ ನೋಡಿ ಹೋಗೋಣವೆಂದು ಬಂದೆ."

"ನನ್ನನ್ನು ನೋಡಲೋ ? ನಿನ್ನನ್ನು ತೋರಿಸಿಕೊಳ್ಳಲೋ ?"

"ಎರಡರ ಸಲುವಾಗಿಯೂ..."

ಇಬ್ಬರ ಮುಖಬಿಂಬಗಳಲ್ಲೂ ನಗೆಯ ಮುಗುಳು ಅರಳಿ ಹೂವಾಯಿತು.

"ಬಾರಯ್ಯಾ...! ಏನು ತೊಂದರೆ ?"

ರವಿಚಂದ್ರ ಅನಾರೋಗ್ಯದ ವಿವರಣೆ ನೀಡಿದನಂತರ ಅವನಿಗೆ ಔಷಧಿಯನ್ನು ಬರೆದು ಕೊಟ್ಟು ಅಂದ "ಔಷಧಿ ಕ್ರಮವಾಗಿ ತೆಗೆದುಕೊ. ಜರ್ವ ಬಿಡದಿದ್ದರೆ ರಿಂಗ್ ಮಾಡು ನಾನೇ ಬಂದು ನೋಡುವೆ."

"ಆಗಲಿ."

ಇಬ್ಬರೂ ಪರಸ್ಪರ ಬೆಳಗಿನ ವಂದನೆಯನ್ನು ಸಲ್ಲಿಸಿದರು. ಅವನು ಗೆಳೆಯನನ್ನು ಬೀಳ್ಕೊಟ್ಟು ಒಳ ಹೋದ. ರವಿಚಂದ್ರ ಆಸ್ಪತ್ರೆಯ ವಾಮಾಂಗದಲ್ಲಿದ್ದ ಔಷಧಿಯ ಅಂಗಡಿಯಲ್ಲಿ ಔಷಧಿಯನ್ನು ಕೊಂಡುಕೊಂಡು ಹಿಂದಿರುಗುವಷ್ಟರಲ್ಲಿ ಇತರ ದಾದಿಯರೊಂದಿಗೆ ಮಣಿ ಮೇಖಲಾ ಎದುರಾದಳು.

"ಏನಮ್ಮಾ, ಇಲ್ಲಿ ಯಾವಾಗಿನಿಂದ ಕೆಲಸ ಮಾಡುತಿದ್ದಿ ?"

"ಸುಮಾರಾಗಿ ಒಂದು ವರ್ಷದಿಂದ. ಇದೇನು ಲಕ್ಷಿಸುವಂತಹ ಪಾತ್ರವಲ್ಲ. ಇದಕ್ಕೇಕೆ ಹೆಚ್ಚಿನ ಪ್ರಾಶಸ್ತ್ಯ ಕೊಡುತ್ತೀರಿ? ತೀರಾ **Negligible.**"

"ಹಾಗೆನ್ನುವುದು ಹೇಗೆ ? ಎಲ್ಲರಿಗೂ ಇಂಥ ಮನಸ್ಸು ಬರಬೇಕಲ್ಲ ?"

"ಮನಸ್ಸಿದ್ದಲ್ಲಿ ಮಾರ್ಗವಷ್ಟೆ ? ಬಯಸಿದರೆ ನೀವೂ ಮಾಡಬಹುದು..."

"ಬಿಡು....ಬಿಡು. ನಮಗೆ 'ಮನಸ್ಸು' ಎಂಬುದು ಇದ್ದರಷ್ಟೆ. ?"

ಎಲ್ಲರ ಮುಖದಲ್ಲೂ ಕಿಲಕಿಲ ನಗು ಉಕ್ಕಿ ಹರಿಯಿತು.

"ಅವರು ಸಹಾಯಕರಾಗಿ ಬರದಿದ್ದರೂ ಪೇಷಂಟಾಗಿಯಂತೂ ಆಗಾಗ ಬರುತ್ತಿರುತ್ತಾರೆ" ಎಂದಳೊಬ್ಬ ದಾದಿ ಹಾಸ್ಯಪ್ರಧಾನ ದನಿಯಲ್ಲಿ.

"ನಾನಂತೂ ನಿಮ್ಮನ್ನಿಲ್ಲಿ ಕಾಣಲಿಲ್ಲ" ಎಂದಳು ಮಣಿ ಮೇಖಲಾ.

"ನೀನು ಬರುವುದು ಭಾನುವಾರ ಮಾತ್ರವಷ್ಟೆ ?"

"ಹೌದು...."

"ಭಾನುವಾರ ನಮಗೆ ಸಂಸಾರ ಯೋಗ."

"ಪರವಾಯಿಲ್ಲ. ಅದೂ ಒಂದು 'ಸೇವೆ'ಯಷ್ಟೆ ?"

"ಓ ! ಅವರು ಸೇವೆ ಮಾಡುವವರಲ್ಲ, ಮಾಡಿಸಿಕೊಳ್ಳುವವರು !" ದಾದಿ ದನಿಗೂಡಿಸಿದಳು.

ಪುನಃ ಎಲ್ಲರ ಮುಖಮಂಡಲದಲ್ಲೂ ಕುಲು ಕುಲು ನಗು.

ಆ ಮುಹೂರ್ತದಲ್ಲೂ ಏನು ಹೇಳಬೇಕೋ ತಿಳಿಯಲಿಲ್ಲ. ಸುಮ್ಮನೆ ಮುಗುಳುನಕ್ಕು Good bye ಹೇಳಿ ಅಲ್ಲಿಂದ ಕಾಲ್ತೆಗೆದ ರವಿಚಂದ್ರ. ಚಿತ್ತ ಭಿತ್ತಿಯಲ್ಲಿ ಆ ಸುಸುಂದರ ರೂಪು ಮೂರ್ತಿವತ್ತಾಗಿ ನಿಂತಿತು. ಪ್ರಯತ್ನಿಸಿದರೂ ಅವಳನ್ನು ತಳ್ಳಿಹಾಕಲಾಗಲಿಲ್ಲ, ಮನದಿಂದ.

o o o o

ಮೇಜಿನ ಮೇಲಿದ್ದ ಟೆಲಿಫೋನ್ ಸದ್ದು ಮಾಡಿತು.

ಟ್ರಿಣ್, ಟ್ರಿಣ್, ಟ್ರಿಣ್, ಟ್ರಿಣ್.

ರವಿಚಂದ್ರ ರಿಸೀವರ್ ಕೈಗೆತ್ತಿಕೊಂಡು "ಹಲೋ..." ಎಂದ.

ಆ ಕಡೆಯಿಂದ ಶ್ರೀರಾಮ್ ಧ್ವನಿ ಮೊಳಗಿತು "ಹಲೋ...ಹೇಗಿದ್ದೀ ? ಜ್ವರ ಬಿಟ್ಟಿದೆಯೇ ?"

"ಇಲ್ಲಪ್ಪಾ, ಆರೇಳು ದಿನಗಳಿಂದ ಒಂದೇ ಸಮನೆ ಜ್ವರ. ಮೊನ್ನೆಯೇ ವಸುಧ ಬಂದುದರಿಂದ ತೊಂದರೆಯಿಲ್ಲ. ಡಾ|| ವೆಂಕಟೇಶ್ ಬಂದು ನೋಡುತಿದ್ದಾನೆ. ಊರಲ್ಲೆಲ್ಲಾ ವಿಷಮಶೀತಜ್ವರ ತುಂಬಿ ಹೋಗಿದೆಯಂತೆ. ಈ ಜ್ವರ



ಬಹುಶಃ ಇನ್ನೂ ಎರಡು ಮೂರು ದಿನ ಬಿಡಲಾರದು. ಜೊತೆಗೆ ನೆಗಡಿ ಕೆಮ್ಮುಲು ಬೇರೆ."

"ಚೆನ್ನಾಗಿ ವಿಶ್ರಾಂತಿ ತೆಗೆದುಕೊ."

"ವಿಶ್ರಾಂತಿಯಲ್ಲದೆ ಇನ್ನೇನು ? ಸದಾ ಮಲಗಿರುವೆ. ಕಣ್ಣುರಿಯಿಂದ ಪುಸ್ತಕ ಓದುವುದೂ ಸಾಧ್ಯವಾಗುತ್ತಿಲ್ಲ. ತುಂಬಾ ಬೇಸರ ಶ್ರೀರಾಮ್."

"ಮಡದಿ ಇರುವಾಗ ಬೇಸರ ಓಡಿ ಹೋಗಲೇಬೇಕಲ್ಲ."

ರವಿಚಂದ್ರ ನಕ್ಕು ನುಡಿದ "ಅದೇನೋ ಸರಿ..."

"ಓ ನಿನಗೊಂದು ಮಾತು ಹೇಳುವುದಿದೆ...ಏನಿರಬಹುದು ಊಹಿಸು ನೋಡೋಣ."

"ನಿನ್ನಲ್ಲಿ ಯಾವ ಯಾವ ವಿಷಯಗಳೋ ಊಹಿಸುವುದು ಹೇಗೆ ? ನೀನೇ ಹೇಳಿಬಿಡು."

"ನಿನ್ನೆ ಶನಿವಾರ ನಾನು ವೃದ್ಧಾಶ್ರಮಕ್ಕೆ ನಮ್ಮವರನ್ನು ನೋಡಲು ಹೋಗಿದ್ದೆ. ಅಲ್ಲಿ ನಾನು ಕಂಡದ್ದು ಊಟದ ಟ್ರ್ಯಾಲಿಯನ್ನು ತಳ್ಳಿಕೊಂಡು ಹೋಗುತಿದ್ದ ಮಣಿಮೇಕಲಾ ! ವೃದ್ಧಾಶ್ರಮದಲ್ಲಿ ಆಕೆಯು ಫ್ರೀ ಸರ್ವೀಸ್. ನಾನು 'ಇದೇನಮ್ಮಾ, ಇಲ್ಲಿ ?' ಎಂದೆ. ಅಚ್ಚರಿಯ ಕಟ್ಟೆ ಬಿರಿಯಿತು ಮನದಲ್ಲಿ. ನಿಜವಾಗಿಯೂ ಆಶ್ಚರ್ಯಚಕಿತನಾದೆ."

"ಪ್ರತಿ ಶನಿವಾರವೂ ಇಲ್ಲಿ ಬೆಳಿಗ್ಗೆ ಒಂಭತ್ತರಿಂದ ಮಧ್ಯಾಹ್ನದವರೆಗೆ ಅಲ್ಪ ಸೇವೆ ಸಲ್ಲಿಸುವೆ. ವೃದ್ಧ ಜನಸೇವೆ ನನಗಿಷ್ಟ. ಪ್ರತಿ ಶನಿವಾರ ಇಲ್ಲಿ ; ಪ್ರತಿ ಭಾನುವಾರ ವೆಂಕಟೇಶ್ವರ ನರ್ಸಿಂಗ್ ಹೋಂನಲ್ಲಿ ಅಲ್ಪಸ್ವಲ್ಪ ಸೇವೆ ಮಾಡುವೆ. ಶಕ್ತಿ ಇರುವಾಗ ಏಕೆ ಮಾಡಬಾರದು ಹೇಳಿ ? ಕಳೆದ ಭಾನುವಾರ ನಿಮ್ಮ ಮಿತ್ರ ರವಿಚಂದ್ರ ನರ್ಸಿಂಗ್-ಹೋಮ್‌ನಲ್ಲಿ ಸಿಕ್ಕಿಬಿದ್ದರು" ಎಂದಳು ಅವಳು. ಬಳಿಕ ಅವನು ಪುನಃ ಮುಂದುವರಿದ "ಆಶ್ಚರ್ಯ ಕಣಯ್ಯಾ, ಇಂಥವರು ನಮ್ಮಲ್ಲಿ ಬಹಳ ಜನ ಇರಲಾರರು. ನಮಗೆ ವಾರದ ಕೊನೆಯಲ್ಲಿ ಹಾಯಾಗಿರೋಣ ಎನಿಸುತ್ತದೆ. ಈ ಹುಡುಗಿ ನೋಡು !"

"ಚಿಕ್ಕ ವಯಸ್ಸು. ಮೈಯಲ್ಲಿ ಬಿಸಿ ರಕ್ತವಿದೆ ಮಾಡಲಿ. ನನಗೆ ನರ್ಸಿಂಗ್–ಹೋಮ್‌ನಲ್ಲಿ ಸಿಕ್ಕಿದ್ದು ನಿಜ. ಅಂತೂ ಬಹಳ ಜಾಲಿ ಹುಡುಗಿ. ಅಂದು, ನಾನೂ ಆಶ್ಚರ್ಯಚಕಿತನಾಗಿ ಕೇಳಿಯೇಬಿಟ್ಟೆ. 'ಭಾನುವಾರದಂದು ಮಾತ್ರ ಮಾಡುವೆ' ಎಂದಳವಳು. ಅವಳನ್ನು ಹೊಗಳಬೇಕೋ ಹಳಿಯ ಬೇಕೋ ತಿಳಿಯುವುದಿಲ್ಲ."

"ಎರಡೂ ಇರಲಿ ಬಿಡು."

ಇಬ್ಬರೂ ನಕ್ಕುಬಿಟ್ಟರು. ಆ ನಗುವಿನ ಹಿಂದೆ ಯಾವ ಅರ್ಥವಿತ್ತೋ.

ಂ ಂ ಂ ಂ

ಡಾ|| ವೆಂಕಟೇಶ್ ಆಗಾಗ ಮನೆಗೇ ಬಂದು ಚಿಕಿತ್ಸೆ ನೀಡುತಿದ್ದ. ಚಿಕಿತ್ಸೆಯ ಪ್ರಭಾವದಿಂದ ಮೂರು ದಿನಗಳ ಬಳಿಕ ಜ್ವರ ಬಿಟ್ಟಿತು. ಮೂರು ನಾಲ್ಕು ದಿನಗಳ ವಿಶ್ರಾಂತಿಯನಂತರ ಆಫೀಸಿಗೆ ಹೊರಟ ರವಿಚಂದ್ರ. ಮೈಯಲ್ಲಿ ವಿಪರೀತ ಬಳಲಿಕೆ–ಆಯಾಸ. ಆದ್ದರಿಂದ ಸ್ವಲ್ಪ ಮುಂಚಿತವಾಗಿ ಆಫೀಸ್ ಬಿಟ್ಟು ಹೊರಬಂದರೆ ಒಂದಾದರೂ ಅಟೋ ಸಿಗಬೇಕೆ? ನಿಂತೂ ನಿಂತೂ ಕಾಲುಗಳು ಸೋತು ಹೋದುವು. ಮೊದಲೇ ಬಳಲಿಕೆ. ಈಗಂತೂ ತಾಳಲಾರದ ಬಳಲಿಕೆ. ರಸ್ತೆಯಲ್ಲಿ ಕಾದು ನಿಲ್ಲುವುದಕ್ಕಿಂತ ಆಫೀಸಿನಲ್ಲಿ ಕುಳಿತಿರುವುದು ಎಷ್ಟೋ ಸುಖವಾಗಿತ್ತು ಎನಿಸಿ ಮನದಲ್ಲಿ ಹಳಹಳಿಸಿದ ರವಿಚಂದ್ರ. ಇನ್ನು ನಿಲ್ಲಲಾರೆ ಎನಿಸಿದಾಗ ಬಸ್ಸು ಹಿಡಿಯುವ ಯೋಚನೆ ಮೂಡಿ ಬಸ್ಸಿನ ನಿಲ್ದಾಣದತ್ತ ನಡೆದ. ಅಲ್ಲಿಗೆ ಸೇರಿದಾಗಲೇ ಬಸ್ಸು ಬಂದು ನಿಂತಿತ್ತು. ಹತ್ತಿ ನೋಡಿದೆ ಹೆಚ್ಚಿನ ಸೀಟಿರಲಿಲ್ಲ. ಹೆಂಗಸರ ಸೀಟಿನಲ್ಲಿ ಒಂದು ಮಾತ್ರ ಖಾಲಿಯಿತ್ತು. ಒಂದರಲ್ಲಿ, ಕುಳಿತವಳು ಅದೇ ಆ ಮಣಿ ಮೇಖಲಾ. ಅವಳ ಸೀಟಿನ ಕಂಬಿಯನ್ನು ಹಿಡಿದು ನಿಂತು ಕೊಂಡು ಕೇಳಿದ "ನಾನಿಲ್ಲಿ ಕುಳಿತು ಕೊಳ್ಳಬಹುದೇ ಮಣೀ ?"

"ಅಡ್ಡಿಯಿಲ್ಲ ...ಕುಳಿತುಕೊಳ್ಳಿ. ತುಂಬ ಇಳಿದು ಹೋಗಿದ್ದೀರಿ..."

"ಏಳೆಂಟು ದಿನ ಚೆನ್ನಾಗಿ ಜ್ವರ ಹೊಡೆಯಿತು. ಇಂದೇ ನಾನು ಮೊದಲು ಆಫೀಸಿಗೆ ಬಂದುದು. ಅಟೋಗಾಗಿ ಕಾದು ಕಾದು ಸಾಕಾಗಿ ಬಸ್ಸು ಹಿಡಿದೆ. ಅಂದಹಾಗೆ ನೀನು ಎಲ್ಲಿ ಇಳಿಯುತ್ತಿ ?"

"ಅದೇ ನೀವು ಇಳಿಯುವ ಸರ್ಕಲ್."

"ನೀನೇಕೆ ಅಲ್ಲಿ ಇಳಿಯುತ್ತಿ ?"

"ಅಂದೇ ಹೇಳಿದೆನಲ್ಲ, ನಿಮ್ಮ ಬೀದಿಯಲ್ಲೇ ನನ್ನ ಗೆಳತಿಯ ಮನೆ. ನಾವಿಬ್ಬರೂ ಕೂಡಿ ಮಕ್ಕಳಿಗೆ ಮನೆ ಪಾಠ ಹೇಳುತ್ತೇವೆ. ಅವಳ ಮನೆ ದೊಡ್ಡದು. ಅಲ್ಲಿ ಮಕ್ಕಳೂ ಸಿಗುತ್ತವೆ. ಆದ್ದರಿಂದ ಆಫೀಸಿನಿಂದ ಹೀಗೆಯೇ ಆ ಮನೆಗೆ ಬಂದು ಹೋಗುವೆ."

"ಎಷ್ಟು ದಿನಗಳಿಂದ ನಡೆಸುತಿದ್ದಿ ?"

"ಸುಮಾರು ಮೂರು ವರ್ಷಗಳಿಂದ ..."

"ನಿನ್ನಲ್ಲಿರುವ ಶಕ್ತಿ ಸಂಪುಟ ಅಸಾಮಾನ್ಯ."

ಅವಳು ಮೆಲುನಗೆ ಬೀರಿದಳು. ಪ್ರಸನ್ನ ಮುಖಬಿಂಬ ಲಜ್ಜೆಗೆಂಪು ತಳೆಯಿತು.

ಸ್ವಲ್ಪೇ ಹೊತ್ತಿನೊಳಗಾಗಿ ನಿಲ್ದಾಣದಲ್ಲಿ ನಿಂತಿತು ಬಸ್ಸು. ಸಧ್ಯ ಇಳಿಯಲು ನುಗ್ಗುವ ಜನಒತ್ತಡ ಸ್ವಲ್ಪ ಕಡಿಮೆಯಾಗುತ್ತಲೂ ರವಿಚಂದ್ರ ಇಳಿದ. ಹಿಂದೆಯೇ ಇಳಿದಳು ಮಣಿ ಮೇಖಲಾ. ಇಬ್ಬರೂ ರಸ್ತೆಯಂಚಿನ ಕಾಲು ಹಾದಿ ಹಿಡಿದರು. ರವಿಚಂದ್ರ ಸ್ವಲ್ಪ ಸಂಕೋಚಿಸುತ್ತ ಕೇಳಿದ,

"ನಾನು ನಿನ್ನ ವೈಯಕ್ತಿಕವಾಗಿ ಪ್ರಶ್ನೆ ಕೇಳಬಹುದೇ ?"

"ಕೇಳಿ ... ಪರವಾಯಿಲ್ಲ."

"ಕ್ಷಮಿಸು ಇಷ್ಟೆಲ್ಲಾ ಧೀಮಂತಿಕೆ ಇದ್ದ ನೀನು ಕ್ಯಾಬರೆ ಕುಣಿತ ಕುಣಿಯಬಹುದೇ ?"

"ಓ .... ಅದೇ ? ನಿಮಗೆ ನನ್ನ ಸಂಕಷ್ಟ ಪೂರಾ ತಿಳಿದಿಲ್ಲ. ಅದಕ್ಕೇ ಈ ಪ್ರಶ್ನೆ ಕೇಳುತಿದ್ದೀರಿ. ನನ್ನ ತಂದೆ ಪಾರ್ಶ್ವವಾಯು ಪೀಡಿತರು. ಒಡ ಹುಟ್ಟಿದವರು ಮೂರುಮಂದಿ. ಅಮ್ಮ ಸಹ ಅಷ್ಟಾಗಿ ಆರೋಗ್ಯವಂತೆಯಲ್ಲ. ಸಂಸಾರದ ಹೊಣೆ ನನ್ನ ಮೇಲಿದೆ. ನಾನು ಭರತ ನಾಟ್ಯ ಕಲಿಯುತ್ತಿರುವೆ.

ಅದಿನ್ನೂ ಅಪೂರ್ಣ. ಪಕ್ಕದ ಮನೆಯಲ್ಲೇ ನಾಟ್ಯಾಚಾರ್ಯರು ಇರುವುದರಿಂದ ಕಲಿಯುವುದು ಕಷ್ಟವಿಲ್ಲ. ಆದರೆ, ಭರತನಾಟ್ಯಕ್ಕೆ ದಿನವೂ ಪ್ರದರ್ಶನ ಸಿಗುವುದಿಲ್ಲ. ಕ್ಯಾಬರೆಯಲ್ಲಿ ದಿನವೂ ಹಣ ಕೈಗೆ ಬರುತ್ತದೆ. ಸಂಸಾರಕ್ಕಾಗಿ ಈ ಎಲ್ಲಾ ಪಾಡು. ಭರತನಾಟ್ಯ ಸ್ಥಿರವಾದನಂತರ ಅದರ ಅಂಗವಾಗಿ ಒಂದು ಶಾಲೆ ತೆರೆಯುವ ಯೋಚನೆ ಮಾಡಿರುವೆ. ಅದು ಕೆಗೂಡಿದ ನಂತರ ಕ್ಯಾಬರೆಗೀಬರೆ ಯಾವುದೂ ಇಲ್ಲ. ಅಪ್ಪ ಅಮ್ಮನ ಔಷಧಿಗೇ ಅರ್ಧ ಹಣ ಖರ್ಚಾಗುತ್ತೆ. ಉಳಿದರ್ಧದಲ್ಲಿ ಜೀವನಯಾತ್ರೆ. ನಾನು ದೇವರ ಮೇಲೆ ಭಾರ ಹಾಕಿ ಕೆಲಸ ಮಾಡುತ್ತಿರುವೆ. ಅವನು ಕಡೆ ಹಾಯಿಸಬೇಕು."

"ದೇವರು ದೊಡ್ಡವನು. ಅವನು ನಿನ್ನನ್ನು ಖಂಡಿತ ಕಡೆ ಹಾಯಿಸುತ್ತಾನೆ."

"ವಂದನೆಗಳು ...!"

ರವಿಚಂದ್ರ ಕೈ ಚಾಚಿ ಕೇಳಿದ "ನೀನು ಕೋಪಿಸಿಕೊಳ್ಳದಿದ್ದರೆ ನಿನ್ನ ಕೈ ಕುಲುಕುವೆ."

"ಆಗಬಹುದು .... ಅದಕ್ಕೇನಂತೆ."

ರವಿಚಂದ್ರ ಹಾರ್ದಿಕವಾಗಿ ಕೈಕುಲುಕುತ್ತ ಹೇಳಿದ "ದೇವರು ನಿನ್ನ ಮಾರ್ಗವನ್ನು ನಿಷ್ಕಂಟಕವಾಗಿ ನಡೆಸಿಕೊಡಲಿ ಎಂದು ಹಾರೈಸುವೆ. ನಿನ್ನ ಹೆಜ್ಜೆ ಸರ್ವತ್ರ ದಿಟ್ಟ ಹೆಜ್ಜೆ. ಎಂದೂ ಎಚ್ಚರ ತಪ್ಪದಂತೆ ನೋಡಿಕೊ."

"ತುಂಬ ಥ್ಯಾಂಕ್ಸ್ !"

ಅವಳು ತುಸು ಲಜ್ಜಿತಳಾದರೂ ತೋರಗೊಡದೆ ಗೆಳತಿಯ ಮನೆ ಮೆಟ್ಟಿಲೇರಿದಳು.

— o —

# ರಹಸ್ಯ

೧೩

ಏಕೇನಾಪಿ ಸುವೃಕ್ಷೇಣ ಪುಷ್ಪಿತೇನ ಸುಗಂಧಿನಾ

ರಮೇಶಬಾಬು...ಸತೀಶಬಾಬು...

ಸತೀಶಬಾಬು....ರಮೇಶಬಾಬು...

ಇಬ್ಬರಿಗೂ ಕೇವಲ ಹೆಸರಿನ ಹೊಂದಾಣಿಕೆ ಇರುವುದೇ ಹೊರತು ಇನ್ನ್ಯಾತರಲ್ಲಿಯೂ ಇಲ್ಲ. ಇಬ್ಬರೂ ಒಂದೇ ಬಸಿರಿನಲ್ಲಿ ಅದೆಂತು ಉದ್ಭವಿಸಿದರೋ ಎಂದು ಎಂತಹ ಮೂರ್ಖನೂ ಆಶ್ಚರ್ಯ ಪಡುವಷ್ಟು ಪರಿಭೇದ ಕಂಡು ಬರುವದು ದಿಟ ಅವರಲ್ಲಿ. ರಮೇಶಬಾಬುವಿಗೆ ಬುದ್ಧಿಯಲ್ಲಿ, ವಿದ್ಯೆಯಲ್ಲಿ, ಆಳ್ತನದಲ್ಲಿ ನಿಜ ಜೀವನದಲ್ಲಿ ಭೂಮವಾದ ವ್ಯಕ್ತಿತ್ವ–ಆತನ ಒಂದೊಂದು ಹೆಜ್ಜೆಯಲ್ಲಿಯೂ ಮೇರುತ್ವ–ಸ್ವಭಾವದಲ್ಲಿ ಮೃದುತ್ವ ಇವುಗಳ ಶೋಭೆ ಸಜ್ಜನಿಕೆಯನ್ನು ತೋರಿಸುತ್ತದೆ. ಅದೇ ಸತೀಶಬಾಬುವಿನಲ್ಲಿ ಅರ್ಥಾತ್ ಸಾಮರಸ್ಯವಿಲ್ಲದ ಅಗಾಧ ಪರಿಭೇದ. ಆಳ್ತನದಲ್ಲಿ ಕುಳ್ಳ, ಕಪ್ಪು ವರ್ಣ. ವಿದ್ಯೆ ಬುದ್ಧಿಗಳಲ್ಲಿ ಮೊಟಕು. ನಡೆನುಡಿಗಳೂ ಅಷ್ಟಕ್ಕಷ್ಟೆ. ರಮೇಶನ ವ್ಯಕ್ತಿತ್ವ ಎಷ್ಟು ಭೂಮವಾಗಿದೆಯೋ ಅಷ್ಟೇ ಸತೀಶನದು ಸಂಕುಚಿತ ಅಥವಾ ಕುಬ್ಜ.

ರಮೇಶ ವಿಜ್ಞಾನ ಕ್ಷೇತ್ರಕ್ಕೆ ಪದಾರ್ಪಣೆ ಮಾಡಿದ ವ್ಯಕ್ತಿ. ಭಾವನಾ ಜೀವಿಯಾದ ಅವನು ಸದಾ ವಿಜ್ಞಾನದಲ್ಲಿಯೇ ಮುಳುಗಿರುತಿದ್ದು ಚಿಂತನಾವೇಶದಲ್ಲಿಯೇ ಕಾಲಹರಣ ಮಾಡುತ್ತಾನೆ. ನಿಂತೆಡೆ ನಿಲ್ಲದೆ ಕುಳಿತೆಡೆ ಕೂರದೆ ಶತಪಥ ತಿರುಗುವುದು ರೂಢಿ. ಮಾತುಕತೆಯಲ್ಲಿ ಹಿತಮಿತ. ಬದುಕಿನಲ್ಲಿ ಸರ

ಳತೆ ಇವುಗಳಿಂದಾಗಿ ಬಂಧು–ಜೀವ–ವಲಯದ ಗೌರವ ದೃಷ್ಟಿ ರಮೇಶನ ಮೇಲೆ.

ರಮೇಶಬಾಬು ಮೂವತ್ತೆಂಟರ ಗಡಿಯನ್ನು ದಾಟಿದ ಶುಭ ದಿನದಂದು ಗೆಳೆಯರ ದಂಡೇ ಆಗಮಿಸಿತು ಪುಷ್ಪಹಾರ ಮತ್ತು ಪುಷ್ಪಗುಚ್ಛಗಳ ಸಹಿತ. ತಾಯಿಗೆ ಆ ಸಂಭ್ರಮವನ್ನು ನೋಡಿದರೆ ಹೃದಯ ಹೂವಿನಷ್ಟು ಹಗುರ. ಮನಸ್ಸು ಪರಮಾನಂದದ ಬೀಡು. ಜೀವನ ಸಾರ್ಥಕ್ಯವನ್ನು ತನ್ನಲ್ಲೇ ಕಂಡು ಕೊಳ್ಳುವಳು ಅವಳು....ಅಂತೆಯೇ ಸತೀಶಬಾಬುವಿನ ಪ್ರತಿಷ್ಠೆಯೂ ಇದೇ ನೇರಕ್ಕೆ ಏರಿದ್ದಿದ್ದರೆ...? ಅದು ಒಡಲಾಳದ ಪ್ರಶ್ನೆ ಅವಳಿಗೆ.

ಆದರೆ...

ದೇವರು ಒಬ್ಬನಿಗೆ ಬೊಗಸೆ ತುಂಬಾ ಕರುಣಿಸಿ, ಇನ್ನೊಬ್ಬನಿಗೆ ತಲೆ ಖಾಲಿ ಮಾಡಿದ್ದಾನೆ. ಅದೇ ವ್ಯಸನ...ಅದೇ ಚಿಂತೆ. ಹೋಗಲಿ, ಅಂದರೆ ಒಂದಿಷ್ಟು ಮೃದು ಸ್ವಭಾವವಾದರೂ ಇರಬೇಡವೇ ? ಎಂಬ ಪ್ರಶ್ನೆ ಏಳು ತ್ತಲೇ ಇರುತ್ತದೆ ಮಾತೃ ಹೃದಯ ದಣಿದು ಕಣ್ಣುಗಳು ತೊಯ್ಯುವಂತೆ.

ಹುಟ್ಟಿದಾರಭ್ಯ ಐವತ್ತೈದು ವಸಂತಗಳ ಕಹಿ ಸಿಹಿಯನ್ನು ಉಂಡಿದ್ದರೂ ಅನುಭವ ಇನ್ನೂ ಘನಿಸಲಿಲ್ಲ. ಅಂದಿಂದಿಗೂ ಸಲ್ಲಿಸಿದ ಸೇವೆಗೆ ನೆಲೆಯೂ ಇಲ್ಲ ; ಬೆಲೆಯೂ ಇಲ್ಲ, ಎಂದೇ ತೀರ್ಮಾನಿಸಿದೆ ಎದೆಯ ಹಕ್ಕಿ. ಯೋಚನಾ ಜಗವನ್ನು ಯಾವ ವಿಚಾರ ಧೂಮವಾಗಿ ಆವರಿಸಿತ್ತೋ ಅದರ ಹೊರತು ಇತರ ಯೋಚನೆಗಳಿಗೆ ಇಂಬು ಕೊಡಲು ಅಲ್ಲಿ ಸುಳಿವೂ ಇಲ್ಲ, ಆಸ್ಪದವೂ ಇಲ್ಲ.

೦ ೦ ೦ ೦

ಅಡಿಗೆಯ ಮನೆಯಲ್ಲಿ ಸೊಸೆ–ನಳಿನಿಯ ಚಟುವಟಿಕೆ ನಡೆದಿತ್ತು. ಅವಳ ಸಹಾಯಾರ್ಥವಾಗಿ ಕಾಳು ಬಿಡಿಸುತಿದ್ದಾಳೆ ಸ್ವಾಮಿನಿ. ಜಗಲಿಯ ಅರ್ಧ ಗೋಡೆಯ ಮೇಲಿದ್ದ ಸಾಲು ಸರಳುಗಳ ನೆರಳು, ಸೂರ್ಯ ರಶ್ಮಿಯು ಒಳಗಡೆ ಹರಿದಾಗ ಕಪ್ಪನೆಯ ಕೋಲು ಕೋಲಾಗಿ ಮೈ ಚಾಚಿವೆ ನೆಲದಮೇಲೆ. ಹೊರಗಡೆ ಕಾಗೆಗಳು ಕರ್ಕಶ ದನಿಯಲ್ಲಿ ಕೂಗುತ್ತ ಗದ್ದಲವೆಬ್ಬಿಸಿವೆ ಆಹಾರ

ಲೋಭದಿಂದ. ಜಗಲಿಯಲ್ಲಿ ಸರಪಳಿಯಿಂದ ಕಟ್ಟಿದ ನಾಯಿ-ಲಿಲ್ಲಿ ಕಾಗೆಗಳ ಗದ್ದಲದಿಂದ ಸಿಟ್ಟೆಗೆದ್ದು ಒಂದೇಸಮನೆ ಬೊಗಳುತ್ತಿದೆ. ಅದನ್ನು ಗದರಿಸಿ ಸುಮ್ಮನಾಗಿಸಲು ಪ್ರಯತ್ನಿಸಿದ್ದಳು ತಾಯಿ. ಆದರೆ, ಅದು ಕೇಳಬೇಕಲ್ಲ. ಸರಪಳಿಯು ಜಗ್ಗಿ ಕತ್ತು ನೋವುಣ್ಣುತ್ತಿರುವುದೂ ಸಹ ಅದರ ಲಕ್ಷ್ಯಕ್ಕೆ ಬಂದಿರಲಿಲ್ಲವೇನೋ, ಅತ್ತಿತ್ತ ಜಗ್ಗಾಡುತ್ತಲೇ ಇದೆ.

ಶಾಲೆಗೆ ಅಣಿಯಾಗಲಿರುವ ಮಕ್ಕಳ ಗದ್ದಲಕ್ಕೂ ಕೊರತೆಯಿಲ್ಲ. ನಳಿನಿ ಅವರನ್ನು ಸುಧಾರಿಸುವುದರಲ್ಲಿ ಹೆಣಗಬೇಕು ಪ್ರತಿನಿತ್ಯ. ಬಿಡಿಸಿದ ಕಾಳುಗಳನ್ನು ಒಳಗೊಯ್ದಿಟ್ಟು ಹೊರಬಂದಳು ತಾಯಿ. ಆಲೋಚನಾ ಭಾರದಿಂದ ಯಾಂತ್ರಿಕವಾಗಿ ಚಲಿಸುತ್ತದೆ ವೃದ್ಧ ಶರೀರ. ಏನೋ ಒಂದು ಬಗೆಯ ಚಿಂತೆ...ಇನ್ನೇನೋ ಒಂದು ಬಗೆಯ ಗ್ಲಾನಿ...ಮತ್ತೇನೋ ಒಂದು ಬಗೆಯ ನಿರಾಸೆಗಳು ಮನೋವ್ಯಾಪ್ತಿಯಾಗಿದ್ದರೆ ಹೊತ್ತುಗೊತ್ತುಗಳ ಪರಿವೇ ಇರುವುದಿಲ್ಲ ತಾಯಿಗೆ.

ಅವಳು ಹೊರಬಂದಾಗಲೇ ರಮೇಶಬಾಬು ಒಳಬಂದ. ಕೈತುಂಬ ಹಣ್ಣು ಹೂಗಳ ಹೊರೆ. ಬೆಳಗಿನಿಂದಲೇ ತುಂಬಿಕೊಂಡಿದ್ದ ಅಭಿಮಾನಿಗಳೆಲ್ಲ ಹೊರಹೋದ ಮೇಲೆ ಮುಂಬಾಗಿಲು ಮುಚ್ಚಿ ಒಳಬಂದಿದ್ದ ರಮೇಶ. ಘಮಘಮಿಸುವ ಹೂಗಳ ಹೊರೆಯನ್ನು ಮೇಜಿನ ಮೇಲಿಟ್ಟು ತಾಯಿಗೆ ನಮಸ್ಕರಿಸಿ ಪಾದಧೂಳಿ ಸ್ವೀಕರಿಸಿ ಅಂದ,

"ಬೆಳಗಿನಿಂದ ಇದುವರೆಗೆ ಯಾವ ಕೆಲಸವನ್ನೂ ಮಾಡಲಾಗಲಿಲ್ಲ."

"ಹಾಗೆಂದರೆ ಹೇಗೆ ಮಗೂ ? ಸದಾ ದುಡಿಯುವುದೇ ಆದರೆ ವಿಶ್ರಾಂತಿ ಪಡೆಯುವುದು ಯಾವಾಗ ? ಎಲ್ಲರಿಗೂ ಅಲ್ಪಸ್ವಲ್ಪ ವಿಶ್ರಾಂತಿ ಬೇಕೇ ಬೇಕು."

"ನಿಮ್ಮಂತಹವರೇ ವಿಶ್ರಾಂತಿ ಬಯಸುವುದಿಲ್ಲ. ಇನ್ನು ನನಗೇಕೆ ವಿಶ್ರಾಂತಿ ?"

ರಮೇಶ ಪ್ರಸನ್ನಭಾವದಿಂದ ಮುಗುಳುನಕ್ಕ.

"ಬಿಡಪ್ಪಾ, ನಮ್ಮದೇನಿದ್ದರೂ ದೈಹಿಕ ಶ್ರಮ. ನಿನ್ನಂತೆ ಮಾನಸಿಕ ಶ್ರಮ ತೆಗದುಕೊಳ್ಳುತ್ತಿಲ್ಲ."

"ಎರಡೂ ಒಂದೇ. ದೈಹಿಕ ಶ್ರಮಕ್ಕೆ ಮಾನಸಿಕ ಆದೇಶವೂ ಇರಬೇಕಪ್ಪೆ ? ಅಂದಮೇಲೆ ದ್ವಿಗುಣಿಸುತ್ತದೆ ನಿಮ್ಮ ಶ್ರಮ."

ಹೊರಬಾಗಿಲಿನಿಂದ ಒಳಗಿನ ಮೇಜಿನವರೆಗೆ ಕುಸುಮದಳ ರಂಗೋಲಿ ಇಟ್ಟಂತೆ ಚೆಲ್ಲಿ ಸೂಸಿತ್ತು ಚಿತ್ರಮಯವಾಗಿ, ಕುಸುಮಮಯವಾಗಿ. ಅದರ ಮೇಲೆ ನೋಟ ಹರಿಸಿದ ವೃದ್ಧೆ ಎದೆಯ ತುಂಬ ಸಂತಸವನ್ನು ತುಂಬಿಕೊಂಡು "ಜನರ ಹಾರೈಕೆ, ದೇವರ ಆಶೀರ್ವಾದ ಎರಡೂ ಇರಬೇಕಪ್ಪಾ. ಇಷ್ಟಕ್ಕೂ ಅವಕಾಶ ಕೊಡದಿದ್ದರೆ ಶುಭ ಹಾರೈಕೆ ಲಭಿಸುವುದು ಹೇಗೆ ?"

ರಮೇಶ ಪ್ರಸನ್ನಭಾವದಿಂದ ನುಡಿದ "ಏನಾಗುವುದಿದ್ದರೂ ಆಗಿಯೇ ತೀರುತ್ತೆ ಬಿಡಿ. ವಿಧಿ ಲೀಲೆಯನ್ನು ಶುಭ ಹಾರೈಕೆಗಳು ತಡೆಗಟ್ಟಲಾರವು."

ಅವನ ಭಾವಕೋಶದಿಂದ ಹರಿದ ಬಂದ ವಿಚಾರ ಲಹರಿಯಲ್ಲಿ ಮುಳುಗಿತು ಚಿತ್ತ. ವೃದ್ಧೆ ಮಾತಾಡಲಿಲ್ಲ. ಹೊಳೆಯುವ ಕಣ್ಣುಗಳು ಭಾವಪೂರ್ಣವಾಗಿದ್ದುವು.

೦ ೦ ೦ ೦

ಸತೀಶಬಾಬು ಒಳಬಂದಾಗ ಮಡದಿ ಕಣ್ಣಿಗೆ ಬೀಳಲಿಲ್ಲ. ಒಂದೇಸಮನೆ ಕರೆದ,

"ನಳಿನೀ...ನಳಿನೀ."

ಹಿತ್ತಿಲ ಕಡೆಯಿಂದ ಧ್ವನಿ ಹೊರಬಿತ್ತು 'ಬಂದೇ.'

ಸತೀಶಬಾಬು ಒಳಗಡೆ ಹೋದ. ನಳಿನಿ ಮಾಡುತಿದ್ದ ಕೆಲಸವನ್ನು ಅಲ್ಲೇ ಬಿಟ್ಟು ಒಳಗಡೆ ಬಂದಳು. ತಾನು ಬಯಸಿದ್ದ ಬಟ್ಟೆ ಜೋಡಿಗಳೇ ಬೇರೆ. ಅವಳು ಇಸ್ತ್ರಿ ಮಾಡಿ ಅಣಿಗೊಳಿಸಿದ್ದೇ ಬೇರೆ. ಅಷ್ಟಕ್ಕೇ ಅವನಿಗೆ ಕೋಪ ನೆತ್ತಿಗೇರಿದೆ. ಮಾತು ಮಾತಿಗೂ ಉರಿದು ಬೀಳುವ ಅವನ ಸ್ವಭಾವ

ದಿಂದ ಸೋತು ಹೋಗಿದ್ದಾಳೆ ಅವಳು. ಆಫೀಸಿನ ಯಾವ ಯಾವ ಪರಿತಾಪವೋ ಮಡದಿಯ ಮೇಲೆ ಹರಿಹಾಯುವುದು ದಿನಚರಿ. ಅವನಿಗೆ ಸಮಾಧಾನ-ಶಾಂತಿಗಳ ಪರಿಚಯವೇ ಇಲ್ಲ. ಅಂತಲೇ ಅವನು ಗದ್ದಲ-ಗಲಾಟೆಗಳ ದಾಸಾನುದಾಸ. ಸಿಟ್ಟು ರೋಷಗಳ ಗಣಿ.

ಅವನ ಕೆಂಗಣ್ಣುಗಳ ಕಿಡಿ ನೋಟವನ್ನು ಎದುರಿಸುವುದೇ ಕಷ್ಟ ನಳಿನಿಗೆ.

"ಏನು ಮಾಡಲಿ, ಬೆಳಗಿನ ಮಕ್ಕಳ ಗಲಾಟೆಯಲ್ಲಿ ನಿಮ್ಮನ್ನು ಕೇಳಿಕೊಳ್ಳಲು ಮರೆತುಬಿಟ್ಟೆ. ನೀವೇ ನಿಮಗೆ ಬೇಕಾದುದನ್ನು ಕೊಟ್ಟು ಹೋಗಬಹುದಾಗಿತ್ತು."

"ಇಂದು ಪಾರ್ಟಿ ನಿನಗೆ ತಿಳಿಯದೇ ?"

"ಈಗ ಇಸ್ತ್ರಿ ಮಾಡಿ ಕೊಡುವೆ...."

"ಈಗ....ಹೊತ್ತಿಲ್ಲ."

"ಐದು ನಿಮಿಷಗಳೊಳಗಾಗಿ..."

"ಛೀಃ ! ಛೀಃ !...ಎಲ್ಲಿಯ ಮಾತು?"

ಅವಳು ಮೌನಧಾರಣೆ ಮಾಡಿದಳು...ಮುಖಮುದ್ರೆ ನೀನೇ ಕೊಟ್ಟು ಹೋಗಬೇಕಾಗಿತ್ತು ಎಂಬ ಭಾವ ಸ್ಫುರಿಸುತಿತ್ತು. ಆ ಹೊತ್ತಿಗಾಗಲೇ ಅವನ ಸಹನೆ ಮೀರಿತ್ತು ಮಡದಿಯ ಕೆನ್ನೆಗೊಂದು ಬಿಗಿದು ಅತ್ತ ತಳ್ಳಿ ಹೊರಬಿದ್ದ. ದಿಡು ದಿಡು ಹೆಜ್ಜೆ ತೆಗೆಯುತ್ತಲೇ ಪಚಪಚ ನುಡಿಯುತಿದ್ದುದು ಕಿವಿಗೆ ಬಿತ್ತು ಕರ್ಕಶವಾಗಿ...."ಯಾವಾಗಲೂ ನಿನ್ನ ಹಣೆಬರೆಹ ಇಷ್ಟೆ. ಒಂದು ಜೋಡಿ ಬಟ್ಟೆ ರೆಡಿ ಇಡುವುದೂ ಕಷ್ಟ ನಿನಗೆ ! ನೋಡಿದರೆ ಹಗಲಿರುಳೂ ಮನೆಯಲ್ಲೇ ಬಿದ್ದಿರುವ ಪ್ರಾಣಿ...ಅದೇನು ಕಡಿಯುತ್ತಿರುತ್ತೋ..."

ಅದೇ ವೇಳೆಗೆ ಒಳಬಂದ ತಾಯಿಯೆಂದಳು "ಏನಪ್ಪಾ ಇದು ? ದಿನವೂ ಒಂದಲ್ಲ ಒಂದು ರಗಳೆ ಇದ್ದೇ ಇರುತ್ತೆ. ಎಲ್ಲರ ಮನೆಗಳಲ್ಲೂ ಪ್ರೀತಿ ಸಂತೋಷಗಳು ಉಕ್ಕುತ್ತವೆ. ನಿನ್ನದು ನೋಡಿದರೆ ಹೀಗೆ. ದಾನವ ಜಾತಿ. ಬಾಳು ಅಂದಮೇಲೆ ಸಹಕಾರ ಸಂತೋಷವಿರಕೂಡದೇ ?"

ಸತೀಶ ರೋಷದ ಗಣಿಯಾಗಿ ಗುಡುಗಿದ,

"ಹೌದಮ್ಮಾ...ನಾನು ಏನೆಂದರೂ ನಿಮಗೆ ಸರಿದೋರುವುದಿಲ್ಲ. ರಮೇಶ ಮಾಡಿದ್ದೆಲ್ಲ ಪರಮ ಸತ್ಯ."

ವೃದ್ಧೆ ಪ್ರತಿವಾದ ಹೂಡಲಿಲ್ಲ. ಅದೇ ಕ್ಷಣದಲ್ಲಿ ಅವನು ಹೊರಬಿದ್ದ. ನಡೆದು ಹೋದ ರೀತಿಯೇ ಹೇಳಿತು ಆತನ ಕೋಪದ ವ್ಯಾಪ್ತಿಯನ್ನು. ಅವನು ಆಡಿದ ಮಾತು ಪ್ರಾಸಂಗಿಕ ಎನ್ನುವುದಕ್ಕಿಂತ ಉದ್ದೇಶಪೂರ್ವಕ ವಾಗಿಯೇ ಇದ್ದಂತಿತ್ತು. ಏತಕ್ಕಾಗಿ ಅಂದ ? ಅದರ ಹಿನ್ನೆಲೆಯೇನು ? ಎಂಬ ಯೋಚನೆಯ ಕೀಟ ತಲೆಯನ್ನು ಕೊರೆಯ ಹತ್ತಿತು. ಆದರೂ ಸಹ ಇನ್ನೂ ಹುಡುಗು ಬುದ್ಧಿ, ದುಡುಕುವ ಸ್ವಭಾವ ಎಂದುಕೊಂಡಳು ತಾಯಿ. ಆದರೆ, ಮನಮಂಜರಿಯಲ್ಲಿ ಮೊನಚಾದ ಮುಳ್ಳು ಚುಚ್ಚಿದಂತೆ ನೋವು–ಸಂಕಟ ಅವನ ವಾಗ್ಬಾಣದಿಂದ.

ನಳಿನಿ ಹೊರಬಂದಾಗ ಕಣ್ಣುಗಳು ಊದಿ ಕೆಂಗೆಂಡದಂತೆ ರಂಗೊರೆದಿದ್ದವು, ಕಂಬನಿಗರೆದುದನ್ನು ಸಾರಿ ಹೇಳುವಂತೆ. ಅವಳನ್ನು ನೋಡುತ್ತಲೂ ಕರುಳು ಚುರುಚುರುಗುಟ್ಟಿತು ಭಾರವಾದ ದನಿಯಿಂದ ಕೇಳಿದಳು ಸ್ವಾಮಿನಿ,

"ನಳಿನೀ, ಮುಖ ಬಾಡಿಸಿಕೊಳ್ಳಬೇಡಮ್ಮಾ. ನನಗೆ ಏನು ಮಾಡುವುದಕ್ಕೂ ತೋಚುತ್ತಿಲ್ಲ. ಎಲ್ಲಾ ನಿನ್ನ ಹಣೆಯ ಬರಹ. ನಿನ್ನ ಮಾವ ಹಳೆ ಕಾಲದವರು ಎಂದರೆ ಇವನೇಕೆ ಹೀಗೆ ?"

"ಬೆಳಿಗ್ಗೆ ಇಂಥ ಬಟ್ಟೆ ಬೇಕೆಂದು ಹೇಳಲಿಲ್ಲ...ಸುಮ್ಮನೆ ಈಗ..." ಗಂಟಲು ಬಿಗಿದು ಬಂತು ಮುಂದೆ ಮಾತು ಹೊರಡಲಿಲ್ಲ, ಅವಳಿಗೆ.

"ತುಂಬ ಒರಟು ಹುಡುಗ......ಸಹನೆ ಇಲ್ಲವೇ ಇಲ್ಲ. ಏನು ಮಾಡೋಣ...? ನನಗೂ ತುಂಬ ಕಷ್ಟ. ಇಷ್ಟುದ್ದ ಬೆಳೆಸಬೇಕಾದರೆ ಅದೆಷ್ಟು ಕಂಬನಿ ಕರೆಯಬೇಕಾಯ್ತೊ....ಹಾಳಾದ ಈ ಹೆಣ್ಣು ಜನ್ಮ ಹುಟ್ಟುವುದೇ ಕಂಬನಿ ಕರೆಯುವುದಕ್ಕೆ...ತಂದೆಯೂ ಹಾಗೆಯೇ. ಮಗನೂ ಹೀಗೆ."

ದುಃಖದ ಗದ್ಗದಿತ ದನಿ ಹೊರಬಿದ್ದಾಗ ಮ್ಲಾನವಾಯಿತು ಮುಖ ಮಂಡಲ. ಎದೆಯಾಳದಿಂದ ನಿಟ್ಟುಸಿರನ್ನು ಹೊರಹಾಕಿ ಪುನಃ "ಇವರಿಂದ ನಾನು ಅನುಭವಿಸಿದ ಗೋಳು ಅಷ್ಟಿಷ್ಟಲ್ಲ....ಹೋಗಲಿ, ಬಿಡು. ಅದನ್ನಿಷ್ಟು ಮನಸ್ಸಿಗೆ ಹಚ್ಚಿಕೊಳ್ಳಬೇಡ."

ವಿನಾಕಾರಣ ಸಿಟ್ಟು, ವಿನಾಕಾರಣ ದ್ವೇಷ, ಯಾವುದೋ ತೀರದ ಬಯಕೆ, ಇನ್ನಾವುದೋ ಅಲಸಿಕೆ, ಮತ್ತಾವುದೋ ಈರ್ಷ್ಯೆ. ಸಹಿಸಲಾಗದ ಪರಿತಾಪ, ವಿಚಿತ್ರ ವರ್ತನೆ, ಕುತ್ಸಿತ ಮನೋಭಾವನೆ, ದುರ್ದರ್ಶ ಕಾಮನೆ, ಸಣ್ಣತನ, ಕಟು ಹೃದಯ, ಇಂತಿಂಥಹ ರಜೋಗುಣಗಳಿಂದ ಕೂಡಿದ ಅವನು ತಾನೇತಾನಾಗಿ ಸುಧಾರಿಸಿಕೊಳ್ಳಬೇಕಲ್ಲದೆ ಇನ್ನಾರಿಂದಲೂ ಸುಧಾರಿಸಿಕೊಳ್ಳು ವವನಲ್ಲ, ಎಂಬುದು ಆತ್ಮಗತ. ಪರಿತಾಪದಿಂದ ನರಳಿತು ಹೃದಯ. ಮನಸ್ಸು ಏನನ್ನೋ ಭಾವಿಸುತ್ತದೆ, ಏನೇನೋ ಆಗುತ್ತಿದೆ. ಆದರೆ ಎಲ್ಲವೂ ವ್ಯರ್ಥ ; ನೀರಿನ ಗುಳ್ಳೆಯಂತೆ.

ಎಲ್ಲೋ ಅಲಕ್ಷಿತ ವಿಚಿತ್ರ ಜಡಿಮೆ ಮೈಯನ್ನು ಹೊಕ್ಕು ಹೆಡೆಮುರಿ ಗಟ್ಟಿದಷ್ಟು ಮೈಭಾರ, ನಿಸ್ಸಹಾಯಕತೆ....ಹೇಳಲಾರದೇ ಹೇಳಿದಳು ಸ್ವಾಮಿನಿ,

"ಎಷ್ಟು ಮಾಡಿದರೂ ಇಷ್ಟೆ. ಈ ಜೀವನದಲ್ಲಿ ಸುಖ ಶಾಂತಿಗಳನ್ನು ಪಡೆಯುವುದು ಕಷ್ಟ. ಹೆಣ್ಣು ಜನ್ಮಕ್ಕೆ ಸಮಾಜವೇ ಆಗಲೀ, ಸಂಸಾರವೇ ಆಗಲೀ ಪ್ರಸಾದಿಸುವುದು ಅಶಾಂತಿ ಹೊರತು ಇನ್ನೇನಿಲ್ಲ."

"ನಾನಾದರೂ ಎಷ್ಟೆಂತ ಸಹಿಸಲಿ....? ಈ ಹೊಡೆತ ಬಡಿತ ಸಾಕಾಗಿದೆ." ನುಡಿಯಲಾರದೇ ನುಡಿದಳು ನಳಿನಿ, ಧ್ವನಿ ಗದ್ಗದಪೂರ್ಣವಾಗಿತ್ತು.

"ಬಿಡು ಮಗಳೇ, ಅವನಿಗೆ ರಮೇಶನಿಂದ ಒಂದೆರಡು ಮಾತು ಹೇಳಿಸ ಬಹುದೇನೋ...ಎನಿಸುತ್ತೆ. ಆದರೆ ಬೆಳೆದ ಮಕ್ಕಳಿಗೆ ಹೇಳುವುದಾದರೂ ಏನು ? ಅವನಿಗೆ ಯೋಚಿಸಲಾರದಷ್ಟು ಬುದ್ಧಿ ಕುರುಡೇ ? ಇದೆಲ್ಲಾ ನಮ್ಮ ಪೂರ್ವ ಕರ್ಮವಿಪಾಕ.

ನಳಿನಿ ಮಾತಾಡಲಿಲ್ಲ. ಕಣ್ಣುಗಳಲ್ಲಿ ತುಳುಕಿದ ಕಂಬನಿಯೆ ಉತ್ತರ ನೀಡಿತು.

o o o o

ರಮೇಶಬಾಬು ಅವಿವಾಹಿತ. ಬ್ರಹ್ಮಚರ್ಯದಲ್ಲೇ ವಿಶ್ವಾಸ.

ಅವನ ಹೊತ್ತೆಲ್ಲಾ ಬಹುತೇಕವಾಗಿ ಸಂಶೋಧನೆಯಲ್ಲಿ ಕಳೆಯುತ್ತದೆ. ಮಾನಸಿಕ ಶೈಥಿಲ್ಯದ ಮೇಲೆ ಒಂದಲ್ಲ ಒಂದು ದಿನ ಅದ್ಭುತ ಬೆಳಕು ಬೀರುವ ವರ್ಚಸ್ಸು ಆತನಲ್ಲಿರುವುದರಿಂದ ಅವನ ಸಂಶೋಧನೆಯ ಮೇಲೆ ಇತರ ವಿಜ್ಞಾನಿಗಳ ದೃಷ್ಟಿಕೋನ ಹರಿಯುತ್ತಲೇ ಇರುತ್ತದೆ ಕೌತೂಹಲಿಕವಾಗಿ. ಅವನದ್ದು ಅವಾಸ್ತವ್ಯ ಕಲ್ಪನಾ ಲೋಕವೆಂದು ಬಗೆದು ನಿರ್ಲಕ್ಷ್ಯ ತೋರಿದವರೂ ಉಂಟು. ಮಾನವ ಮಿದುಳಿನ ಅದ್ಭುತ ಶಕ್ತಿ ನಶಿಸಿ ಹುಚ್ಚಾಗಲು ಕಾರಣವೇನು ? ತಟ್ಟನೆ ಕೋಪಗೊಳ್ಳುವ ಅಥವಾ ಉದ್ರೇಕಗೊಳ್ಳುವ ಅಸಹನೀಯ ಕ್ಷಿಪ್ರ ಬದಲಾವಣೆಗಳಿಗೆ ಕಾರಣವೇನು ? ಯಾವ ಅಂತರ್ನಿಹಿತ ಶಕ್ತಿ ಮನುಷ್ಯನ ಮೇಲೆ ಅಧಿಕಾರವನ್ನು ಛಲಾಯಿಸುತ್ತದೆ ? ಎಂಬಿವೇ ಮುಂತಾದ ವಿಚಾರಗಳಿಗೆ ಆತ ಸೂಕ್ಷ್ಮಾತಿಸೂಕ್ಷ್ಮವಾಗಿ ಉತ್ತರವನ್ನು ಹುಡುಕುತಿದ್ದ. ಮಾನಸಿಕ ಪ್ರಕ್ರಿಯೆಯನ್ನು ಕರಗತ ಮಾಡಿಕೊಳ್ಳಬಹುದಾದ ಮಹಾಕಾರ್ಯದಲ್ಲಿ ಮುಳುಗಿಬಿಡುವ.

ಕೆಲವು ವಿಶಿಷ್ಟ ಗಿಡ ಮೂಲಿಕೆಗಳು, ಕೆಲವು ವನಸುಮಗಳು, ಕೆಲವು ಪುಷ್ಪರೇಣುಗಳು, ಕೆಲವು ವಿಶಿಷ್ಟ ಬೀಜಗಳು, ಕೆಲವು ಮರದ ತೊಗಟೆಗಳು ಸಂಗ್ರಹೀತವಾಗಿದ್ದು, ವಿವಿಧ ಜಾಡಿಗಳಲ್ಲಿ ವಿವಿಧ ಭರಣಿಗಳಲ್ಲಿ ಬೇರೆಬೇರೆ ರಾಸಾಯನಿಕ ವಸ್ತುಗಳ ಮಿಶ್ರಣದೊಂದಿಗೆ ಕೂಡಿ ಅವು ಓಷಧ ರೂಪ ತಾಳುತ್ತಲಿವೆ. ಹಗಲೆಲ್ಲಾ ಅವುಗಳಿಂದ ನೂತನ–ವಿನೂತನ ರಸಾಯನಗಳನ್ನು ತಯಾರಿಸಿ ಪ್ರಾಣಿಗಳ ಮೇಲೆ ಪ್ರಯೋಗಿಸಿ ಯಶಸ್ಸಿನ ಕಿರಣಗಳನ್ನು ಕಂಡುಕೊಂಡಿದ್ದ ರಮೇಶ. ಇನ್ನು ಗುರಿ ಮುಟ್ಟುವುದೊಂದು ಬಾಕಿ ಎಂದರೂ ಅವಸರದ ಪ್ರಯೋಗಕ್ಕೆ ಸಿದ್ಧನಿರಲಿಲ್ಲ ಅವನು. ಸಂಶೋಧನಾಲಯದಲ್ಲಿ ತಾಸುಗಟ್ಟಲೆ, ದಿನಗಟ್ಟಲೆ ಏಕಾಂಗಿಯಾಗಿ ಕಳೆಯುತಿದ್ದ. ಸಂಶೋಧನೆಯ ರೀತಿ–ನೀತಿಗಳನ್ನು ಕ್ರಮಶಃ ಬರೆದು ಕಡತಗಳಲ್ಲಿ ಜೋಡಿಸಿ ಬೀರುವಿನಲ್ಲಿ ಭದ್ರ

ಪಡಿಸುತಿದ್ದ. ಎಷ್ಟೋ ವೇಳೆ ಊಟ ನಿದ್ರಾದಿಗಳಿಂದಲೂ ದೂರವಾಗಿ ಸಂಶೋಧನೆಯಲ್ಲಿ ತಲ್ಲೀನನಾಗಿಬಿಡುವ. ರಾತ್ರಿ ಬಹಳ ಹೊತ್ತಾದರೆ ತಟ್ಟೆ ಯಲ್ಲಿ ಊಟವನ್ನು ತಂದಿಟ್ಟು ಹೋಗುತಿದ್ದಳು ತಾಯಿ. ಊಟ ಮುಗಿಸಿ ಸೆಜ್ಜೆಯನ್ನು ಸೇರಿದರೆ ಮನೋರಾಜ್ಯದಲ್ಲಿ ವೈಜ್ಞಾನಿಕ ಬಾವುಟ ಹಾರಾಡು ತ್ತದೆ ಕಣ್ಣಿಗೆ ನಿದ್ದೆ ಹತ್ತುವವರೆಗೂ.

ಕಾಮಾರ್ಥ ಚಿಂತನೆಗೂ, ಸಂಶೋಧನೆಗೂ ಅರ್ಥಾತ್ ಸಾಮರಸ್ಯ ಬರು ವುದಿಲ್ಲ. ಕೈತುಂಬ ಕೆಲಸ ಮಾಡಬೇಕೆಂದರೆ ಮಸ್ತಿಷ್ಕ ನಿರ್ಯೋಚನೆಯಿಂದ ಕೂಡಿದ್ದು ಹಗುರವಾಗಿರಬೇಕು ಎಂಬ ನಿರ್ಧಾರವೇ ಅವನನ್ನು ಎಲ್ಲಾ ಪರಿ ಸ್ಥಿತಿಗೂ ಹೊಂದಿಕೊಳ್ಳುವಂತೆ ಮಾಡುವುದರಿಂದ, ಆಸೆ–ಪ್ರತ್ಯಾಸೆಗಳ ಪ್ರಲೋಭನೆ ಲವಲೇಶವೂ ಇಲ್ಲವೇನೋ ಎಂಬಷ್ಟು ಪ್ರಶಾಂತ ಪ್ರವೃತ್ತಿ.

ಚಾಂದ್ರಮಾನಗಳು ಉರುಳಿದುವು. ತಿಂಗಳ ಮಾನಗಳೂ ಕಳೆದುವು.

ದಿನಮಾನಗಳು ಹೇಗೆ ಬರುತ್ತವೆಯೋ ಹಾಗೆಯೇ ಸಂದು ಹೋಗು ತ್ತವೆ. ಕೆಲಸದ ಜಂಜಡದಲ್ಲಿ ದಿನಗಳು ಗಣನೆಗೆ ಬರುವುದೇ ಇಲ್ಲ.

o o o o

ವಿಜ್ಞಾನಿಗಳ ವಿಶ್ವ ಸಮ್ಮೇಳನ ಕೂಡಲಿತ್ತು ಅಮೆರಿಕೆಯ ಚಿಕಾಗೋ ನಗರದಲ್ಲಿ.

ಹಿರಿಯ ವಿಜ್ಞಾನಿಗಳ ನಲ್ಮೆಯ ಆಹ್ವಾನ ಕೈಗೂಡಿತು ರಮೇಶಬಾಬು ವಿಗೆ. ಔದಾರ್ಯದ ಕೂರೆಯೊಂದಿಗೆ ಅಲ್ಲಿಯೇ ಒಂದೆರಡು ವರ್ಷ ಸಂಶೋ ಧನೆ ನಡೆಸಲು ಅವಕಾಶವನ್ನೂ ನೀಡಿತ್ತು ವಿಜ್ಞಾನ ಕಾಂಗ್ರೆಸ್. ಕಾಗದ ವನ್ನು ಕೈಕೊಂಡು ಮನೆಯ ಜಗಲಿಯನ್ನು ಹತ್ತಿದಾಗ ಸತೀಶಬಾಬುವಿನ ಉಚ್ಚ ಸ್ವರ ಕೇಳಿಸಿತು ಕಿವಿಗಳಿಗೆ ಲತ್ತೆ ಹೊಡೆದಂತೆ.

“ನಿಮ್ಮ ಒಲವೆಲ್ಲಾ ರಮೇಶನ ಕಡೆಗೆ. ನಾನು ಕಸಕ್ಕಿಂತ ಕಡೆ....”

“ಎಲ್ಲಾದರೂ ಉಂಟೇ ಮಗನೇ !”

“ನನಗೆಲ್ಲಾ ಅರ್ಥವಾಗುತ್ತೆ.”

“ಛೀ ! ಛೀ ! ಎಲ್ಲಾ ಅಪಾರ್ಥ.”

ಮಾತುಗಳು ಬಯುಸದಿದ್ದರೂ ಕಿವಿಗಳನ್ನು ಅಪ್ಪಳಿಸಿದುವು ರಪ್ಪನೆ. ರಮೇಶಬಾಬು ಅಭಿಭೂತನಂತೆ ಒಳ ಹೋದ. ಮಾತುಕತೆ ಅಲ್ಲಿಗೇ ಮುಕ್ತಾಯವಾಯಿತು. ಸ್ವಾಮಿನಿ ಒಳಗೆ ಹೋಗುವುದರಲ್ಲಿದ್ದಳು. ಮ್ಲಾನ ಮುಖ ಇಳಿದು ಹೋಗಿತ್ತು. ಅಷ್ಟೇ ಧೂರ್ತ ಗತಿಯಲ್ಲಿ ಸತೀಶಬಾಬು ನಿರ್ಗಮಿಸಿದ. ಮೈಯೆಲ್ಲಾ ರೋಷವಾದಷ್ಟು ಉರಿಗಣ್ಣುಗಳು ಮುಖಬಿಂಬದಲ್ಲಿ. ರಮೇಶಬಾಬು ಕೇಳಿಸದವನಂತೆ ಸುಮ್ಮನೆ ಸಹಜವಾದ ಶೈಲಿಯಲ್ಲಿ ತನ್ನ ಕೊಠಡಿಗೆ ಹೋದ. ಮನಸ್ಸೆಲ್ಲಾ ಮುಜುಗರ. ಇದಕ್ಕೇನು ಪರಿಹಾರ? ಪ್ರಶ್ನೆ ಮನದಲ್ಲಿ ನಿಮಿರಿ ನಿಂತಿತು. ನಾನು ಇಲ್ಲಿಂದ ಹೊರ ಹೋದರೆ...? ತಾಯಿಯಿಂದ ದೂರವಾಗುವುದು...? ಅದನ್ನು ಯೋಚಿಸುವುದೂ ಬೇಡ ಮನಸ್ಸಿಗೆ. ಕಿಟಕಿಯ ಬಳಿ ನಿಂತು ಕಣ್ಣ ನೋಟವನ್ನು ಚೆಲ್ಲಿ ಕೊಟ್ಟ.

ನೀಲಿಯ ನೀಲಾಂಬರದಲ್ಲಿ ಬೆಳ್ಮುಗಿಲಿನ ಕೂಸಾಡುತಿದ್ದುವು ಲೀಲಾಲೋಲುಪ್ತಿಯಲ್ಲಿ.

o o o o

ರಮೇಶಬಾಬುವಿಗೆ ತಮ್ಮನ ಅತಿ ವರ್ತನೆ ಮನಃಪ್ರಾಣಗಳಿಗೆ ಮುಳ್ಳು. ಹೇಳಲಾರ, ಅನುಭವಿಸಲಾರ. ನಿರ್ಯೋಚನೆ-ನಿರ್ಭಾರಗಳಿಂದ ಉಸಿರಾಡಲು ಎಷ್ಟು ಬಯಸುವನೋ ಅಷ್ಟೇ ದುಗುಡದ ಕೋಟಿ ಹೃನ್ಮನಗಳು. ಬಾರಿಬಾರಿಗೂ ತಾಯಿಯ ಮ್ಲಾನ ಮುಖಬಿಂಬ ಸುಳಿಸುಳಿವಳಿಯುವುದು ಚಿತ್ತಬಿತ್ತಿಯಲ್ಲಿ. ಮುಂದೇನು? ಹೇಗೆ ಪರಿಹಾರ? ಇಂಥ ಪ್ರಶ್ನೆಗಳ ದಾಳಿ ಯೋಚನಾಜಗತ್ತಿನಲ್ಲಿ. ವಿಜ್ಞಾನ ಲೋಕದಿಂದ ಕೊಕ್ಕೆಯಂತೆ ಎಳೆದು ಸಂಸಾರ ಕುಂಡದಲ್ಲಿ ಮುಳುಗಿಸಿ ಆಳ ನೋಡುತ್ತದೆ ಕಿನಿಸಿಗೆ-ಕಿರುಕುಳಭರಿತ ಮನಸ್ಸು. ಅವನು ಆಲೋಚನಾ ಶೀಲನಾಗುತ್ತಾನೆ. ಆದರೂ ಸುಲಭ ಪರಿಹಾರ ದೊರೆಯುವುದು ಕಷ್ಟ.

ಬೆಳಗಿನ ಉಪಹಾರ ಮುಗಿಸಿ ಸಂಶೋಧನಾಲಯಕ್ಕೆ ಹೊರಡುವ ಮುನ್ನ ರಮೇಶ ಅಂದ,

"ಅಮ್ಮಾ, ನಾನು ಚಿಕಾಗೋ ನಗರಕ್ಕೆ ಹೋಗುವಾಗ ನನ್ನೊಂದಿಗೆ ಬನ್ನಿ. ಅಲ್ಲಿ ಎರಡು ಮೂರು ವರ್ಷ ಹಾಯಾಗಿದ್ದು, ಅಮೇರಿಕಾ ದೇಶವನ್ನು

ನೋಡಿಕೊಂಡು ನೆಮ್ಮದಿಯಿಂದ ಕಾಲ ಕಳೆದು ಹಿಂದಿರುಗಬಹುದು. ನಿಮಗೆ ತೊಂದರೆ-ಬೇಸರ-ಕಿನಿಸಿಗೆಗಳು ತಾಗದಂತೆ ನೋಡಿಕೊಳ್ಳುವೆ,ಖಂಡಿತ ನನ್ನೊಂದಿಗೆ ಬನ್ನಿ."

ಆ ಮಾತಿಗೆ ವೃದ್ಧೆ ಸ್ವಲ್ಪ ಹೊತ್ತು ಯೋಚಿಸುತಿದ್ದು ಉತ್ತರಿಸಿದಳು,

"ನಾನು ಹೊರಟರೆ ಇಲ್ಲಿ ನಳಿನಿಗೆ ಸಹಾಯಕರು ಇಲ್ಲವಾಗುತ್ತೆ. ಚಿಕ್ಕ ಮಕ್ಕಳು, ತುಂಬಾ ತೊಂದರೆ ಅವಳಿಗೆ..."

"ನೀವೀಗ ಮನಸ್ಸು ಮಾಡದಿದ್ದರೆ ಮುಂದೆ ಇಂತಹ ಸಂದರ್ಭ ಸಿಗುತ್ತೋ ಇಲ್ಲವೋ. ಇನ್ನೂ ಎಷ್ಟು ದಿನ ಸಂಸಾರ ಬಂಧನ....ವಯಸ್ಸಾಯ್ತು. ಇನ್ನು ನಿರಾಳವಾಗಿ ಉಸಿರಾಡಬೇಕು. ಯೋಚಿಸಿ ನೋಡಿ."

"ಬರಬಹುದಾಗಿತ್ತು..." ಮುಂದೆ ಮಾತು ಹೊರಡಲಿಲ್ಲ.

"ಬನ್ನಿ....ಮತ್ತೇಕೆ ಯೋಚನೆ ?"

"ಈಗ ಬೇಡಪ್ಪಾ, ಇನ್ನೆಂದಾದರೂ ನೋಡೋಣ."

"ಏಕಮ್ಮಾ...ಒಬ್ಬರೇ ಆಗುತ್ತೇನೆಂಬ ಚಿಂತೆಯೇ ?"

"ಇಲ್ಲಪ್ಪಾ....ನೋಡೋಣ. ಮುಂದೆಂದಾದರೂ."

ಅವಳ ಅಸಮಾಧಾನ–ಅ ಸಂತೃಪ್ತಿಗಳ ಆಳವನ್ನು ಅಳೆಯುವುದು ಕಷ್ಟ. ಮನದಾಳದಲ್ಲಿ ಯೋಚನೆಯನ್ನು ತುಂಬಿಕೊಂಡು ಮೆಟ್ಟಿಲಿಳಿದ. ಹೆಜ್ಜೆ ಹೆಜ್ಜೆಯೂ ಗಜಗತಿಯಲ್ಲಿ ಮುಂದುವರಿದುವು. ಕೆಲಸವನ್ನು ಮುಗಿಸಿ ಮನೆಗೆ ಮರಳಿದಾಗ ಜ್ವರಪೀಡಿತಳಾಗಿ ಮಲಗಿದ್ದಳು ಸ್ವಾಮಿನಿ. ಜ್ವರದ ತಾಪದಿಂದ ಮುಖಬಿಂಬ ಕೆಂಪು ತಳೆದಿತ್ತು. ಆಯಾಸದಿಂದ ಹಣ್ಣಾಗಿತ್ತು ಜೀವ.

"ಅಮ್ಮಾ , ತುಂಬಾ ಸುಸ್ತಾದಂತೆ ಕಾಣುತ್ತೀರಿ. ಮಾತ್ರೆ ಏನಾದರೂ ತೆಗೆದುಕೊಂಡಿರುವಿರಾ ?"

"ಏನೂ ತೆಗೆದುಕೊಳ್ಳಲಿಲ್ಲ. ಇದೇನು, ಸಾಮಾನ್ಯ ಜ್ವರ. ಸ್ವಲ್ಪ ಹೊತ್ತಿನೊಳಗಾಗಿ ಬಿಡಬಹುದು."

"ನಿಮಗೆ ದೈಹಿಕ ಶ್ರಮ–ಮಾನಸಿಕ ಶ್ರಮ ಎರಡೂ ಇದೆ. ಈ ವಯಸ್ಸಿನಲ್ಲಿ ಯಾವ್ಯಾವ ಚಿಂತೆಯನ್ನೂ ಹಚ್ಚಿಕೊಳ್ಳದೆ ಆರಾಮವಾಗಿರಬೇಕು. ಆದರೆ, ನೀವು ಮನಸ್ಸಿಗೆ ಹಚ್ಚಿಕೊಳ್ಳುವುದೇ ಹೆಚ್ಚು....ಇದರಿಂದ ಅಕಾಲ ಮುಪ್ಪು ಅಂಟಿಕೊಳ್ಳುತ್ತದೆ. ಇದೆಲ್ಲಾ ಖಂಡಿತಾ ಕೂಡದು. ಅದಕ್ಕೇ ಹೇಳಿದ್ದು ನನ್ನೊಂದಿಗೆ ಅಮೆರಿಕೆಗೆ ಬನ್ನಿ ಎಂದು. ಇರಲಿ, ನಾನೀಗ ಡಾಕ್ಟರನ್ನು ಕರೆತರುವೆ."

"ಬರೀ ಜ್ವರ. ಇದಕ್ಕೇಕೆ ಡಾಕ್ಟರು ? ಔಷಧಿ ಕೇಳಿ ತಂದರೆ ಸಾಕು."

"ಛೀ ! ಛೀ ! ಉದಾಸೀನ ಮಾಡಬಾರದು. ನಾನು ಈಗಲೇ ಬಂದು ಬಿಡುವೆ."

ಉತ್ತರಕ್ಕೂ ನಿರೀಕ್ಷಿಸದೆ ಸರಸರನೆ ಹೊರಟು ಹೋದ ರಮೇಶಬಾಬು. ಸ್ವಲ್ಪ ಹೊತ್ತಿನೊಳಗಾಗಿ ಡಾಕ್ಟರನ್ನೊಡಗೂಡಿಯೇ ಹಿಂದಿರುಗಿದ ಮನೆಗೆ. ತಾಯಿಯ ಕಣ್ಣೋಟ ಬಾಗಿಲಿನ ಕಡೆಗೇ ಇತ್ತು. ಡಾಕ್ಟರು ದೇಹ ಪರೀಕ್ಷೆ ಮಾಡಿ ಔಷಧಿಯನ್ನು ಕೊಟ್ಟು ಪಥ್ಯ ಪಾನಾದಿಗಳನ್ನು ಹೇಳಿ ಹೊರಟ ಹೋದ. ಅವನನ್ನು ತಲೆಬಾಗಿಲಿನವರೆಗೂ ಹೋಗಿ ಬೀಳ್ಕೊಟ್ಟು ಬಂದ ರಮೇಶಬಾಬು. ಹಾಸಿಗೆಯ ಬಳಿ ಸ್ವಲ್ಪ ಹೊತ್ತು ಕುಳಿತು ಅವಳ ಊಟೋಪಚಾರಗಳು ಮುಗಿದ ನಂತರ ನೋಡಿದ. ಜ್ವರ ಕಡಿಮೆಯಾಗಿತ್ತು. ಅನಂತರ ಅವಳು ನಿದ್ದೆ ಮಾಡಿದಳು.

o o o o

ಬಾಗಿಲ ಬಳಿ ಪಾದ ಸಪ್ಪಳ ಕೇಳಿಬರುತ್ತಲೂ ಅತ್ತ ದೃಷ್ಟಿ ಹೊರಳಿಸಿದಳು ಸ್ವಾಮಿನಿ. ಹೆಜ್ಜೆಗಳನ್ನೆಳೆದುಕೊಳ್ಳುತ್ತ ಒಳಬಂದಳು ನಳಿನಿ. ಮುಖದಲ್ಲಿ ಗೆಲುವೇ ಇಲ್ಲ.

"ನಳಿನೀ, ಏಕಮ್ಮಾ , ಮುಖವೆಲ್ಲ ಬಾಡಿದೆ ?"

"ನಮ್ಮಂತಹವರಿಗೆ ರೋಗವೇನೂ ಬರುವುದಿಲ್ಲ ಬಿಡಿ."

"ಅದೇನು, ಹಾಗೆಂದರೆ..."

"ಎಷ್ಟೆಂದರೂ ನಾನೊಂದು ಪ್ರಾಣಿ....ಸಂಗ್ರಹಾಲಯದ ಪ್ರಾಣಿ. ಉಹೂ, ಅದಕ್ಕಿಂತ ಕೀಳು. ಆ ಪ್ರಾಣಿಗಳು ಇನ್ನೊಬ್ಬರ ಅಗತ್ಯಕ್ಕೆ ತಮ್ಮ ಜೀವನವನ್ನು ತೇಯುವುದಿಲ್ಲ."

"ಪ್ರತಿಯೊಬ್ಬರಿಗೂ ಅವರವರ ಕರ್ತವ್ಯ ಇದ್ದೇ ಇರುತ್ತೆ. ಯಾವ ವಸ್ತುವೂ ನಾವು ಕುಳಿತಲ್ಲಿಗೆ ತೆವಳಿಕೊಂಡು ಬರುವುದಿಲ್ಲ. ನಾವೇ ಸ್ವತಃ ಪಡೆದುಕೊಳ್ಳಬೇಕು. ಪ್ರಾಣಿ ಜೀವನವೇ ಬೇರೆ. ಜನ ಜೀವನವನ್ನು ಪ್ರಾಣಿ ಜೀವನಕ್ಕೆ ಹೋಲಿಸಿದರೆ ಆಗುತ್ತದೆಯೇ ?"

"ನಿಜ. ಆದರೂ, ಇದು ಮನುಷ್ಯನ ನಿಷ್ಠುರ ನ್ಯಾಯಸ್ಥಾನದಲ್ಲಿನ ಕಾರಸ್ಥಾನ...ವಧಾಸ್ಥಾನ..." ತುಟಿ ಕಚ್ಚಿದಳು ಅವಳು.

ವೃದ್ಧೆ ಮಾತಾಡದೆ ನಿಟ್ಟುಸಿರು ಬಿಟ್ಟಳು.

೦ ೦ ೦ ೦

ನಳಿನಿ ವಿದ್ಯಾವಂತೆ. ಗೃಹಿಣಿಯಾಗಿ ಏಳೆಂಟು ವರ್ಷಗಳು ಸಂದಿವೆ. ಮೂವರು ಮಕ್ಕಳ ತಾಯಿಯೂ ಹೌದು. ಹಿರಿಯ ಮಗಳು ಲೀಲಾ ಆರು ವರ್ಷದ ಮುಗ್ಧೆ. ನಳಿನಿಗೆ ವಿದ್ಯಾ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತ ಮಕ್ಕಳ ಸಂದೋಹದಲ್ಲಿ ಕಾಲಹರಣ ಮಾಡುವ ಇಚ್ಛೆ. ಗೃಹಿಣೀತ್ವವನ್ನು ವಹಿಸಿ ಕೊಂಡಾಗಲೇ ಆಸೆಯ ಕುಡಿ ಮುರುಟಿತು. ಸತೀಶಬಾಬು ಎಲ್ಲಕ್ಕೂ ತದ್ವಿರುದ್ಧ. ಮಡದಿಗೆ ಕಿಂಚಿತ್ ಸ್ವಾತಂತ್ರ್ಯ ನೀಡುವುದು ಸಹಿಸದ ಮನಸ್ಸು. ಕಟು ಮನದ ಕಟ್ಟಾಳು. ಸದಾ ಕಿಡಿಗಣ್ಣು ಕಿಡಿ ಕಾರುತಿದ್ದರೆ ಎಲ್ಲಿಯ ಸ್ವಾತಂತ್ರ್ಯ? ಜೀವನಕ್ಕೊಂದು ಮಹೋದ್ದೇಶವಿಲ್ಲ...ಬಾಳಿಗೊಂದು ಹಿರಿಮೆಯೂ ಇಲ್ಲ...ಎಲ್ಲವೂ ಬಾಲಿಶ...ನಾಗರಿಕತೆಗೆ ವ್ಯತಿರಿಕ್ತ. ಅಂದಮೇಲೆ, ಯಾಂತ್ರಿಕವಾಗಿ ಹಗಲು ಉರುಳಿದರೆ ಶ್ರಾಂತಿಕವಾಗಿ ರಾತ್ರಿ ಉರುಳುತ್ತದೆ. ಎಷ್ಟೋವೇಳೆ ಈ ಸಂಸಾರ ಬಂಧನವನ್ನು ಕಿತ್ತೊಗೆದು ಹೋಗಬಾರದೇಕೆ ಎಂಬ ನೆನೆಗುದಿಯಲ್ಲಿ ಬೇಯುತ್ತಾಳೆ ನಳಿನಿ. ಆದರೆ, ಮೂವರು ಮಕ್ಕಳನ್ನು ಬಿಟ್ಟು ಹೋಗುವುದೇ ? ಕಟ್ಟಿಕೊಂಡು ಹೋದರೆ ಜೀವನ ? ಅದು ತನ್ನ ಮುಂದಿನ ಹಿರಿಯ ಪ್ರಶ್ನೆ. ನಳಿನಿ ಭವಿಷ್ಯದ ವೇದಿಕೆಯ ಮೇಲೆ ತಾನೇ ತಾನಾಗಿ ಅಂಡ

ಲೆದು ಯಾವ ತೀರ್ಮಾನವನ್ನೂ ಕೈಕೊಳ್ಳಲಾಗದೆಯೆ ಬಳಲಿ ಬೆಂಡಾಗು ವಳು.

ರಮೇಶಬಾಬು ಮನೆಯಲ್ಲಿದ್ದಾಗ ಸತೀಶನ ರೀತಿನೀತಿಗಳನ್ನೂ ಮಡದಿಯ ಬವಣೆಯನ್ನೂ ಸೂಕ್ಷ್ಮವಾಗಿ ಗಮನಿಸಿ ತನ್ನ ಅಭಿಪ್ರಾಯವನ್ನು ದೃಢ ಕಂಠದಿಂದ ಮುಂದಿಡುತಿದ್ದ. ಒಮ್ಮೊಮ್ಮೆ ಮಾತಿನ ಚಕಮಕಿಯೂ ನಡೆಯುತಿತ್ತು. ಪ್ರತಿಫಲ ಹಿಡಿಯುತಿದ್ದುದು ವ್ಯರ್ಥದ ಹಾದಿ. ನಳಿನಿ ತೆರೆಯ ಮರೆಯ ಕಂಬನಿಯ ಕಡಲಲ್ಲಿ ಮುಳುಗೇಳುವುದು ದಿನಚರಿ. ಅವಳ ದೀನಾತಿದೀನ ಚರಿತ್ರೆಯಿಂದಾಗಿ ರಮೇಶಬಾಬುವಿಗೆ ಎಲ್ಲಿಲ್ಲದ ಮರುಕ.

ಆದರೆ...

೦ ೦ ೦ ೦

ರಮೇಶಬಾಬು ಮಧ್ಯಾಹ್ನದ ಊಟಕ್ಕೆ ಮನೆಗೆ ಬಂದೇ ಇರಲಿಲ್ಲ. ಅವನು ಖಾನಾವಳಿಯ ಬಳಿಯಲ್ಲಿ ಸುಳಿಯುವವನೂ ಅಲ್ಲ. ಮನೆಯಿಂದ ಕೊಂಡೊಯ್ದ ನೀರು–ಕಾಫಿ ಹಸಿವನ್ನು ಪೂರೈಸುತ್ತವೆ. ಮನೆಗೆ ಮರಳಿದೊಡನೆಯೇ ತಾಯಿ ಕೇಳಿದಳು,

"ಮಧ್ಯಾಹ್ನ ಬರಲೇ ಇಲ್ಲವಲ್ಲಾ ?"

"ಈಗ ಬಂದಿದ್ದೇನಲ್ಲಾ ..."

ಎಲ್ಲವನ್ನೂ ಅಷ್ಟಿಷ್ಟು ಬಡಿಸಿದ ತಟ್ಟೆಯನ್ನು ತಂದು ಮುಂದಿಟ್ಟಳು ನಳಿನಿ.

ರಮೇಶಬಾಬು ತಟ್ಟೆಗೆ ಕೈ ಹಚ್ಚುವ ಮುನ್ನ ಅಂದ,

"ಈ ಕಾಲದಲ್ಲಿ ಮನೆ ಮುಸುರೆಗೇ ಸೀಮಿತವಾಗಬಾರದು ಸ್ತ್ರೀಜೀವನ. ಮಕ್ಕಳು ದೊಡ್ಡವರಾಗುತಿದ್ದಾರೆ. ನಿನ್ನ ಭವಿಷ್ಯವನ್ನು ನಿನ್ನಮನವೊಪ್ಪುವ ರೀತಿಯಲ್ಲಿ ರೂಪಿಸಿಕೊಳ್ಳಬಹುದು ; ಯೋಚಿಸಿ ನೋಡು ನಳಿನೀ."

ಸತೀಶಬಾಬು ಅದೇ ವೇಳೆಗೆ ಅಲ್ಲಿ ಪ್ರತ್ಯಕ್ಷನಾದ. ಮನದಲ್ಲಿ ಕಿನಿಸಿಗೆ. ವೃಥಾಕೋಪ. ಅನ್ಯಥಾ ಅಪಾರ್ಥ ... ತಟ್ಟನೆ ಪ್ರತಿಕ್ರಿಯೆ ವ್ಯಕ್ತಪಡಿಸಿದ,

"ಸರಿ,ಸರಿ. ಅವಳು ದುಡಿಯುವುದಾದರೆ ನಾನೇಕಿರಬೇಕು ?"

"ನೋಡಪ್ಪಾ, ಎಲ್ಲರಿಗೂ ವ್ಯಕ್ತಿ ಸ್ವಾತಂತ್ರ್ಯವಿರಬೇಕು ಅವಳಿಗೆ ಏನಾದರೂ ಸದುದ್ದೇಶವಿದ್ದರೆ ನೀನದನ್ನು ಕಸಿಯಬಾರದು. ಅವಳೂ ಸಹ ನಿನ್ನಂತೆಯೇ ಅಲ್ಲವೇ?"

ಆ ಪ್ರಶ್ನೆಗೆ ಉತ್ತರಿಸಲು ಅಲ್ಲಿರಲಿಲ್ಲ ಅವನು.

ನಳಿನಿ ಭಾರವಾದ ಹೆಜ್ಜೆಗಳನ್ನು ಎಳೆದುಕೊಳ್ಳುತ್ತಾ ಒಳಹೋದಳು. ಮುಖಮಂಡಲ ಪರಿಮ್ಲಾನವಾಯಿತು. ತುಟಿಗಳು ಬಿರಿಯಲಿಲ್ಲ.

ಪಲ್ಲಂಕದ ಮೇಲೆ ಕುಳಿತಿದ್ದ ಸ್ವಾಮಿನಿಯ ನೋಟ ಅತ್ಯಂತ ದೈನ್ಯತೆಯಿಂದ ನಳಿನಿಯತ್ತ ಹರಿಯಿತು. ಚಿಂತೆಯಿಂದ ಭಾರಾಕ್ರಾಂತವಾಯಿತು ಹೃದಯ. ಪ್ರಯತ್ನಿಸಿದರೂ ಮಾತುಗಳು ಹೊರಡಲಿಲ್ಲ ಬಾಯಿಂದ.

ರಮೇಶ ಬರಿದಾದ ತಟ್ಟೆಯನ್ನು ಒಳಗಿಟ್ಟು ಕೈತೊಳೆದ. ಹೊರಬಂದು ವರಾಂಡದಲ್ಲಿ ಕುಳಿತರೆ "ನಮ್ಮಿಬ್ಬರೊಳಗೆ ಏಕೆ ಇಷ್ಟೊಂದು ಅಂತರವಿದೆ?" ಎಂಬ ಪ್ರಶ್ನೆ ಹೆಡೆಯೆತ್ತಿತು ತಲೆಯಲ್ಲಿ.

ಒಂದೇ ಬಸಿರಿನಲ್ಲಿ ಬಂದು, ಒಂದೇ ರಕ್ತದಲ್ಲಿ ಸಂಜನಿಸಿ ಇಷ್ಟೊಂದು ಭಿನ್ನ ಭಾವಗಳೇಕೆ? ಇದೀಗ ತನ್ನ ಮುಂದಿನ ಸಂಶೋಧನೆ... ತರ್ಕವಿತರ್ಕದ ಕತ್ತರಿಯಲ್ಲಿ ಸಿಕ್ಕಿತು ಮನಸ್ಸು.

ಶಾಲೆಯಿಂದ ಬಂದ ಮಕ್ಕಳು ಅಂಗಳದಲ್ಲಿ ಚೆಂಡಾಡುತ್ತಿದ್ದಾರೆ. ಅವರಲ್ಲೂ ಅನುವಂಶಿಕವಾಗಿ ಬಂದ ಗುಣಗಳು ಕಂಡು ಬರುತ್ತಿವೆ. ತಂದೆ ಬಹಳ ಹಿಂದೆಯೇ ಗತಿಸಿದುದರಿಂದ ಆತನ ಗುಣಾವಳಿಗಳು ನೆನಪಿಲ್ಲ. ತಾಯಿಯ ಪ್ರಕಾರ ತಂದೆಯ ಗುಣಗಳನ್ನೇ ಹೊತ್ತಿದ್ದಾನೆ ಸತೀಶ.

ತಲೆಯಲ್ಲಿ ಅದೇ ವಿಚಾರ ಸಾಹಿತ್ಯ ಸಿಕ್ಕಿತು ತರ್ಕವಿತರ್ಕದ ಸುಳಿಗೆ.

o o o o

ತಂದೆಯ ವಂಶಪಟ...ತಾಯಿಯ ವಂಶ ಪಟ.

ಎರಡೂ ಬೇರೆ ಬೇರೆಯಾಗಿಯೇ ನೇತುಬಿದ್ದಿವೆ ಗೋಡೆಯ ಮೇಲೆ. ಶೆಲ್ಫಿನ ಮೇಲೆ ಮುಚ್ಚಿದ ಭರಣಿಗಳ ಜೋಡಣೆ. ವಿವಿಧ ಗಿಡ ಮೂಲಿಕೆಗಳ ಸಂಗ್ರಹ. ಬಗೆಬಗೆಯ ರಾಸಾಯನಿಕಗಳಿಂದ ಸಂಮಿಶ್ರಣಗೊಂಡ ದ್ರವ್ಯಗಳು,

ಬಗೆಬಗೆಯ ಬೀಜಗಳು, ಬಗೆಬಗೆಯ ತೊಗಟೆಗಳು, ಆಲ್ಕೋಹಾಲ್ ಮಿಶ್ರಣ ದಿಂದ ರೂಪುಗೊಂಡ ಔಷಧಗಳು ಕಂಡು ಬರುತ್ತವೆ ಕಪಾಟಿನ ತುಂಬ.

ಉದ್ರೇಕಿತ ಮನಃಬುದ್ಧಿಗಳ ಮೆದುಳಿಗೆ ಸಾಂತ್ವನ ನೀಡಿ ತಲೆಯ ನರ ಕೋಶಿಕೆಗಳನ್ನು ನಿಯಂತ್ರಿಸುವ ಅದ್ಭುತ ಔಷಧ ತಯಾರಿಕೆಯಲ್ಲಿ ತೀವ್ರ ನಿಮಗ್ನನಾಗಿದ್ದ ರಮೇಶ ಬಾಬುವಿಗೆ ತನ್ನ ಪ್ರಯತ್ನದಿಂದ ಉತ್ತಮ ಔಷಧಿ ತಯಾರಾಯ್ತೆಂದು ನಂಬಿಕೆ ಮನದಲ್ಲಿ. ಮೊದಲು ಹುಚ್ಚರಾಸ್ಪತ್ರೆಯ ರೋಗಿ ಗಳ ಮೇಲೆ ಪ್ರಯೋಗಿಸುವ ಯೋಚನೆ. ಅದಕ್ಕೂ ಮುನ್ನ ಪ್ರಾಣಿಗಳ ಮೇಲೆ ಪ್ರಯೋಗಿಸಿ ಜೀವಕ್ಕೆ ಅಪಾಯವೇನಾದರೂ ಇದೆಯೇ ಎಂಬುದನ್ನು ಖಚಿತ ಪಡಿಸಿಕೊಳ್ಳುವ ಅಗತ್ಯವಿತ್ತು.

ಔಷಧಿಗಾಗಿ ಕೆಲವು ವಿಶಿಷ್ಟ ಗಿಡಗಳ ಮೂಲಿಕೆಗಳನ್ನು ಸಂಗ್ರಹಿಸಿ ಕರಗಿಸಿ ತೆಗೆದ ರಸಾಯನದೊಂದಿಗೆ ವಿವಿಧ ದ್ರಾವಕಗಳನ್ನು ಸೇರಿಸಿ ಸಂಸ್ಕರಿಸಿ ಕೆಲವು ವಾಯುಗಳನ್ನು ಹೊರಬಿಟ್ಟು, ಪುನರ್ ಸಂಸ್ಕರಿಸಿ ಸಂಶೋಧನೆ ನಡೆಸಿದ ಬಳಿಕ ಒಂದು ವಿನೂತನ ಔಷದ ಸಿದ್ಧವಾಯಿತು. ಅದರ ಪ್ರಯೋಗ ದಿಂದ ಮಿದುಳಿನ ಕೇಂದ್ರದ ನರ್ವ್‌ಶೆಲ್‌ಗಳಲ್ಲಿ ಚೇತನ ಉಂಟಾಗಬಹುದು ಎಂಬ ನಂಬುಗೆ. ಮಿದುಳಿನ ಸ್ಮೃತಿ ಕೇಂದ್ರಗಳಲ್ಲಿ ವಿಶೇಷ ರಸಾಯನಿಕ ದ್ರವ ಆಗಿಹೋದಲ್ಲಿ ಅಥವಾ ಬತ್ತಿಹೋದಲ್ಲಿ ಮಾನವೀಯ ಗುಣಗಳು ನಶಿಸಿ ಉದ್ರೇಕ ಸ್ಥಿತಿ ಅಥವಾ ಮೃಗವಿಶೇಷ ಕಂಡು ಬರುತ್ತದೆ. ಅದನ್ನು ಸಾಂತ್ವನ ಗೊಳಿಸುವುದೇ ಆದರೆ ತನ್ನ ಪ್ರಯತ್ನ ಸಾಫಲ್ಯ ಹೊಂದುವುದು ಎಂಬುದು ಅವನ ನಂಬುಗೆ. ಅದಕ್ಕಾಗಿ ಹಗಲಿರುಳು ಪ್ರಯತ್ನ ನಡೆಸಿದ್ದ.

ಸಹ ವಿಜ್ಞಾನಿಗಳು "ನಿನ್ನ ಪ್ರಯೋಗ ಖಂಡಿತ ಸಫಲತೆಯ ಹಾದಿ ಹಿಡಿಯುತ್ತದೆ" ಎಂದು ಪ್ರೋತ್ಸಾಹ ನೀಡುತ್ತಲೇ ಇದ್ದಾರೆ. ನಿನಗೆ ನೋಬೆಲ್ ಪ್ರೈಜ್ ಕಟ್ಟಿಟ್ಟ ಬುತ್ತಿ ಎಂದು ಬೆನ್ನು ತಟ್ಟುವುದೂ ಉಂಟು. ಆದರೂ, ತಾಳ್ಮೆಯ ಮನೋಭಾವದಿಂದ ಪ್ರಯೋಗ ಮುಂದುವರಿದು ಕೊಂಡು ಬಂದಿತ್ತು, ಅದುವರೆಗೆ.

ದಿನವೆಲ್ಲಾ ಏಕಾಂಗಿಯಾಗಿ ಸಂಶೋಧನೆಯಲ್ಲಿ ಕಳೆಯುವಾಗ ಸತೀಶ ಬಾಬುವಿನ ಚಿತ್ರ ಪುಟಿದು ನಿಲ್ಲುತ್ತದೆ ಅಕ್ಷಿಪಟಲದ ಮುಂದೆ. ತನಗೂ ಆತನಿಗೂ ಇರಬಹುದಾದ ಪರಿಬೇಧ-ಪರಿಕಲ್ಪನೆಯ ಅಂತರ ಅಗಾಧ. ತಾನು ತಾಯಿಯ ಗರ್ಭಾಶಯದಲ್ಲಿದ್ದಾಗ ತದನಂತರ ಸತೀಶಬಾಬು ಗರ್ಭಾಶಯದಲ್ಲಿದ್ದಾಗ ಅಮ್ಮ ತೆಗೆದುಕೊಂಡಿರಬಹುದಾದ ಆಹಾರಾದಿಗಳ ಗುಣ ವಿಶೇಷವು ಇಬ್ಬರಲ್ಲೂ ವ್ಯತಿರಿಕ್ತ ಭಾವವನ್ನು ಮೂಡಿಸಿರಬಹುದೇ ಎಂಬುದೀಗ ಗಮನಾರ್ಹ. ಆ ದಿಶೆಯಲ್ಲಿ ವಿಜ್ಞಾನಿಯ ಮನಸ್ಸು ನೆಲೆಗೊಂಡಿತು ತೀವ್ರ ಗತಿಯಲ್ಲಿ. ಅದರ ಮೂಲ ಸ್ವರೂಪವನ್ನು ಕಂಡುಕೊಳ್ಳದ ಹೊರತು ತಾನು ಕೃತಕೃತ್ಯತೆ ಪಡೆಯಲಾರೆ ಎಂಬುದು ಮಾನಸಿಕ ಕ್ಷೋಭೆ. ಅದನ್ನು ತಿಳಿಯುವ ಬಗೆ ಹೇಗೆ? ಬಹಳ ಹಿಂದಿನ ವಿಷಯವಾದುದರಿಂದ ಸಂಪೂರ್ಣ ತಿಳಿದು ಬರುವುದು ಕಷ್ಟವೇ.

ಅದೇ ಯೋಚನೆಯಲೆಯಲ್ಲಿ ಮುಳುಗಿದರೆ ಹೊತ್ತು ಉರುಳಿದುದರ ಪರಿವೆಯೇ ಇರುವುದಿಲ್ಲ. ಕುತೂಹಲ ಕೊನರಿದ್ದುದರಿಂದ ವಿಷಯವನ್ನು ಕೂಲಂಕಶವಾಗಿ ಪರಿಶೀಲಿಸುವ ಇಚ್ಛೆ. ರಮೇಶ್‌ಬಾಬು ಆ ದಿಶೆಯಲ್ಲಿ ಮನವಿಟ್ಟ.

ಅಂದು,

ಸಂಶೋಧನಾಲಯವನ್ನು ಬಿಟ್ಟಾಗ ಒಂದು ಗಂಟೆ. ಸುಡುಬಿಸಿಲು ಉರಿಯುತ್ತಿದೆ ನೆತ್ತಿಯ ಮೇಲೆ. ತಲೆತುಂಬ ವೈಜ್ಞಾನಿಕ ಸಂಪತ್ತಿಯನ್ನು ತುಂಬಿಕೊಂಡೇ ಮೆಟ್ಟಿಲಿಳಿದ ರಮೇಶಬಾಬು. ವಿಷಯ ಮಂಥನದಿಂದ ಹಾದಿ ಕಳೆದುದೂ ಗಮನಕ್ಕೆ ಬಂದಿರಲಿಲ್ಲ. ಮನೆಯ ಮೆಟ್ಟಿಲು ಹತ್ತಿದಾಗಲೇ ಇತ್ತ ಗಮನ. ಪ್ರಾಕಾರದ ಬಾಗಿಲು ಮುಚ್ಚಿ ಒಳಬಂದ. ಪ್ರಥಮ ದರ್ಶನ ತಾಯಿಯದೇ ಆಯಿತು. ಪರಸ್ಪರ ದರ್ಶನಲಾಭದಿಂದ ಇಬ್ಬರ ತುಟಿಗಳಲ್ಲೂ ಮಂದಹಾಸ ಅರಳಿತು. ಮಗನನ್ನು ಪ್ರೇಮಪೂರ್ಣಭಾವದಿಂದ ನೋಡುತ್ತ ನುಡಿದಳು,

"ಈವತ್ತಂತೂ ಸಮಯಕ್ಕೆ ಸರಿಯಾಗಿ ಬಂದೆ. ಯಾವ ದೇವರು ನಿನಗೆ ನೆನಪು ಮಾಡಿದನೋ ...."

ಅವನು ಅಷ್ಟೇ ನಿರಾಳವಾಗಿ ನುಡಿದ,

"ಬಿಡುವು ಮಾಡಿಕೊಳ್ಳುವುದೇನೂ ಕಷ್ಟವಲ್ಲ. ಹೋಗೋಣ, ಹೋಗೋಣ ಎನ್ನುತ್ತಲೇ ಹೊತ್ತು ಉರುಳಿ ಹೋಗುತ್ತದೆ."

"ಉದಾಸೀನ ಮಾಡಬೇಡಪ್ಪಾ. ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುತ್ತದೆ."

ಆ ತಾಯಿಯ ಆತಂಕ ಗೊತ್ತು. ಪ್ರೇಮದ ಆಳವನ್ನೂ ಬಲ್ಲ. ಅವಳಿಗಾಗಿ ಭಕ್ತಿ ವಿಶ್ವಾಸಗಳಿಂದ ಸ್ಪಂದಿಸುತ್ತದೆ ಹೃದಯ. ರಮೇಶ ಬಾಬು ಏನೂ ಹೇಳದೆ ಪ್ರಸನ್ನ ಮುಖದಿಂದ ಒಳಹೋದ. ಮುಖಮಜ್ಜನ ಮಾಡಿ ಎಲ್ಲರೊಂದಿಗೇ ಊಟ ಮುಗಿಸಿದ. ನಲ್ಮೆಯ ಮಾತುಕತೆಯ ಮೋಡಿಯಲ್ಲಿ ಊಟ ಬಲೂ ರುಚಿಸಿತು. ಅನಂತರ ಸ್ವಲ್ಪಹೊತ್ತು ಪತ್ರಿಕಾವಲೋಕನ. ರಾಷ್ಟ್ರದಲ್ಲಿ ನಡೆಯುತ್ತಿರುವ ದೊಂಬಿ ಗಲಾಟೆಗಳು ಮನಸ್ಸಿಗೆ ಮುಳ್ಳು ಮುರಿದುವು. ಕಲಿತವರೂ, ರಾಷ್ಟ್ರ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಬಲ್ಲವರೂ ಆಗಿದ್ದ ಜನ ವಾಮ ಮಾರ್ಗ ಹಿಡಿದರೆ ಮಾಡುವುದಾದರೂ ಏನು ? ಎಂತಹ ಜಟಿಲ ಪರಿಸ್ಥಿತಿಯನ್ನು ಉಂಟು ಮಾಡುತಿದ್ದಾರೆ ...? ಮುಂದೇನು ? ಭಾರತ ಮಾತೆಯ ಕೈಕಾಲುಗಳನ್ನು ಮುರಿದು ಕೂರಿಸುವಂತಹ ಪ್ರಸಂಗ ಇದು. ಯೋಚಿಸಿದಷ್ಟೂ ಜಟಿಲವಾಗಿಯೇ ತೋರುತ್ತಿದೆ ಸಮಸ್ಯೆ. ಎಲ್ಲಿ, ಯಾವ ಎಳೆಯನ್ನು ಜಗ್ಗಿದರೂ ಅನಾಹುತವೇ ನಡೆದು ಹೋಗುತ್ತದೆ ದೇಶದಲ್ಲಿ. ಒಮ್ಮನ–ಒಮ್ಮತಗಳಿಲ್ಲದ ರಾಜ್ಯಭಾರ. ಅಂಕೆ–ಸಂಕೆಗಳಿಲ್ಲದೆ ಸೋರಿ ಹೋಗುವ ಹಣ ಬಡತನಕ್ಕೆ ಹೇಳಿಮಾಡಿಸಿದ ಸೂತ್ರ. ಭಾರತದ ಸುಸಂಸ್ಕೃತಿಗೆ ಮಸಿ ಬಳಿದು ಕುಲಗೆಡಿಸಿದ ಚಿತ್ರವೇ ಎಲ್ಲೆಡೆಯಲ್ಲೂ. ರಾಷ್ಟ್ರಕ್ಕೆ ಸ್ವಾತಂತ್ರ್ಯ ಲಭಿಸಿ ಐದನೇ ದಶಕ ಕಳೆಯುತಿದ್ದರೂ ಕುಂಟುತ್ತಿದೆ ಪ್ರಗತಿ... ಲೋಕ ಮೆಚ್ಚುವಂತಹ ಭಾರತ ಸುಸಂಸ್ಕೃತಿ ಮಣ್ಣು ಪಾಲಾದುದು ಯಾವ ಅಪದೇವತೆಯ ಅಭಿಶಾಪವೋ ...

ಪತ್ರಿಕೆಯನ್ನು ಬದಿಗಿಟ್ಟು ಹೊರಡಲಣಿಯಾದಾಗ, ವರಾಂಡದಲ್ಲಿ ಕುಳಿತು ಅದೇ ಗ್ರಂಥಪಠಣದಲ್ಲಿ ಮನವಿಟ್ಟಿದ್ದ ತಾಯಿಯನ್ನು ಕಂಡು ಬಂದ

ಗಳಿಗೆ ನಿಂತ. ಕಿಸೆಯಿಂದ ಕರವಸ್ತ್ರವನ್ನು ತೆಗೆದು ಮುಖವನ್ನು ಒರಿಸಿ ಕೊಳ್ಳುತ್ತ ಕೇಳಿದ,

"ಅಮ್ಮಾ, ನೀವು ಗರ್ಭಿಣಿಯಾಗಿದ್ದಾಗ ಯಾವಯಾವ ಆಹಾರ ತೆಗೆದು ಕೊಳ್ಳುತಿದ್ದಿರಿ ? ಈಗ ಹೇಳ ಬಲ್ಲಿರಾ ?"

"ಆ ವಿಚಾರ ಈಗೇಕೆ ?"

"ಸುಮ್ಮನೆ ... ಮನಸ್ಸಿಗೊಂದು ಮಾಹಿತಿ."

"ಆ ಕಾಲದಲ್ಲಿ ಅಂತಹ ವಿಶೇಷವೇನೂ ಇರಲಿಲ್ಲ. ಅಂದಿನ ದಿನಗಳು ಸುಖಕರವಾಗಿರಲಿಲ್ಲ. ಏನಿತ್ತೋ ಅದರಲ್ಲೇ ಜೀವನ."

"ಆಗಲಿ, ಸ್ವಲ್ಪ ನೆನಪಿಸಿಕೊಳ್ಳಬಲ್ಲಿರಾ ?"

"ಅದೆಲ್ಲಾ ಸಣ್ಣ ವಿಚಾರ. ಬಿಡು ರಮೇಶ್."

"ಎಲ್ಲಾ ವಿಚಾರವೂ ಸಣ್ಣದರಿಂದಲೇ ಆರಂಭವಾಗುವುದು ತಾನೇ ?"

"ಇರಲಪ್ಪಾ, ಇರಲಿ. ಎಂದಾದರೂ ಹೇಳಿದರಾಯಿತು." ಉದಾಸೀನ ತೋರಿದಳು ತಾಯಿ. ರಮೇಶ ಬಾಬು ಮಾತಾಡದೆ ಮುಗುಳು ನಕ್ಕ.

ಆದರೆ, ತಲೆಯಲ್ಲಿ ಅದೇ ಯೋಚನೆಯ ಕೀಟ ಕೊರೆಯುತಿತ್ತು ಅವ್ಯಾಹತವಾಗಿ.

o o o o

ಪ್ರಾಣಿಶಾಸ್ತ್ರದ ಪ್ರೊಫೆಸರ ಒಪ್ಪಿಗೆಯ ಮೇಲೆ ಮಾನವ ಕೂಟಕ್ಕೆ ಸೇರ ಬಹುದಾದ ಗೊರಿಲ್ಲಾ ಜಾತಿಯ ಮಂಗವೊಂದನ್ನು ಪ್ರಯೋಗಕ್ಕೆ ಆರಿಸಿ ಕೊಂಡಿದ್ದ ರಮೇಶಬಾಬು. ಅದು ಅಂದಿಂದಿಗೂ ರೋಷಪೂರ್ಣವಾದ ಗಂಡು ಮಂಗ. ಬಾಳೆ ಹಣ್ಣಿನೊಂದಿಗೆ ಔಷಧಿಯನ್ನು ಕೂಡಿಸಿ ಸ್ವಹಸ್ತದಿಂದ ಅದಕ್ಕೆ ನೀಡಿದ ರಮೇಶಬಾಬು. ಆಹಾರ ಚಪಲತೆಯಿದ್ದ ಅದು ಹಣ್ಣನ್ನು ಪೂರ್ತಿ ತಿಂದು ಸಂತೃಪ್ತಿ ಹೊಂದಿದಂತೆ ಕುಳಿತುಕೊಂಡಿತು ಗೋಡೆಯ ಬದಿಯಲ್ಲಿ. ಅನಂತರ ಅದರ ಪ್ರವೃತ್ತಿಯನ್ನು ಗಮನಿಸುತಿದ್ದ ರಮೇಶನಿಗೆ ಒಂದೆರಡು ಗಂಟೆಯ ಬಳಿಕ ಸ್ವಲ್ಪ ಸುಸ್ತಾದಂತೆ ಕಂಡು ಬಂತು. ಮೆಲ್ಲನೆ ತಿರುಗಾಡುತ್ತ,

ಮಲಗಿ ಏಳುತ್ತ ಕಾಲಹರಣ ಮಾಡಿತು ದಿನವೆಲ್ಲಾ. ಅದರ ಬಾಯಿಯಲ್ಲಿ ಜೊಲ್ಲಿನ ನೊರೆ ವಸರುತ್ತಿತ್ತು ಧಾರೆಧಾರೆಯಾಗಿ, ರಮೇಶಬಾಬು ಅದರ ಬಳಿಯಿಂದ ಎದ್ದೇಳಲಿಲ್ಲ. ಕಾಯುತ್ತಲೇ ಇದ್ದ.

ತದನಂತರ ಅದರ ಚಲನವಲನ ಗಂಭೀರ ಸ್ಥಿತಿಗೆ ಬಂದು ಎಂದಿನಂತೆಯೇ ಸ್ವಸ್ಥಗೊಂಡಿತು. ಕ್ರಮಕ್ರಮೇಣ ಉಗ್ರ ಪ್ರವೃತ್ತಿ ಶಾಂತ ಪ್ರವೃತ್ತಿಗೆ ಅಳವಡುತ್ತಾ ಬಂತು. ರಮೇಶ ಆನಂದ ತುಂದಿಲನಾದ. ಹೃದಯ ಹೂವಿನಂತೆ ಹಗುರವಾಯಿತು. ಸಹ ವಿಜ್ಞಾನಿಗಳೂ ಪ್ರಾಣಿ ಶಾಸ್ತ್ರದ ಪ್ರೊಫೆಸರೂ ಅಭಿನಂದನೆ ಸಲ್ಲಿಸಿದರು ಕೈಕುಲಕಿ.

ಅನಂತರ ಹುಡಿಯ ರೂಪದಲ್ಲಿದ್ದ ಔಷಧಿ ಮಾತ್ರೆಯ ರೂಪತಾಳಿತು.

ರಮೇಶಬಾಬು ಅದಕ್ಕೆ 'ಸ್ಟಿಮುಲೇಟರ್ ಆಫ್ ಬ್ರೈನ್' ಎಂದು ಕರೆದು ಎಸ್.ಬಿ. ಎಂದು ಹೆಸರಿಸಿದ. ಅದನ್ನು ಹುಚ್ಚರಾಸ್ಪತ್ರೆಯ ರೋಗಿಗಳ ಮೇಲೆ ಪ್ರಯೋಗಿಸಲು ಸರಕಾರದ ಮುದ್ರೆಯನ್ನು ಪಡೆದುಕೊಂಡ. ಈ ಪ್ರಯೋಗದಲ್ಲಿ ಯಶಸ್ವಿಯಾದರೆ ಜಗತ್ತಿನ ಹಿರಿಯ ವಿಜ್ಞಾನಿಗಳ ಸಾಲಿನಲ್ಲಿ ಸೇರಿ ಹೋಗುವುದರಲ್ಲಿ ಸಂಶಯವಿಲ್ಲ ಎಂಬುದು ಬಹುತೇಕ ಮಂದಿಯ ಅಭಿಪ್ರಾಯ.

ಅಂದು, ಮನೆಗೆ ಮರಳುವಾಗ ಎಸ್. ಬಿ. ಮಾತ್ರೆಗಳ ಸಹಿತ ಬಂದ. ತನುಮನಗಳು ಉಲ್ಲಾಸದ ಬೀಡಾಗಿದ್ದುವು. ಅದನ್ನು ಪುನರ್ಸಂಸ್ಕರಿಸುವ ವಿಷಯದಲ್ಲಿ ತೀವ್ರ ತನ್ಮಯನಾದಂತೆಯೇ ಪ್ರಾಂಗಣದಲ್ಲಿ ಸ್ವಲ್ಪಹೊತ್ತು ಅಡ್ಡಾಡಿ ಒಳಬಂದ. ಬೂಟು–ಪ್ಯಾಂಟುಗಳನ್ನು ಕಳಚಿ ಪಾಯಿಜಾಮ ಬನೀನುಗಳನ್ನು ತೊಟ್ಟ. ಜೇಬಿನಲ್ಲಿದ್ದ ಎಸ್. ಬಿ. ಔಷಧ, ಕನ್ನಡಕ ಮತ್ತು ಬೀಗದ ಕೈ ಇತ್ಯಾದಿಗಳನ್ನು ತೆಗೆದು ಮೇಜಿನ ಮೇಲಿಟ್ಟ. ವಿಶ್ರಾಂತಿಗಾಗಿ ಹಾಸಿಗೆಯ ಮೇಲೆ ಅಡ್ಡಾದ. ಹಾಗೇ ಕಣ್ಣಿಗೆ ಜೋಂಪು ಹತ್ತಿತು. ಆನಂದ ಸಾಗರದ ಒಂದೇ ಒಂದು ತರಂಗವೆದ್ದು ತನುಮನಗಳನ್ನು ಮುತ್ತಿದಷ್ಟು ಮಧುರ ಭಾವ ಮನದಲ್ಲಿ. ನಿದ್ರಾ ಲೋಕದಲ್ಲಿ ಯಾವುದೋ ಸವಿಗನಸು. ಹುಚ್ಚರಾಸ್ಪತ್ರೆಯಲ್ಲಿ ರೋಗಿಯೊಬ್ಬನಿಗೆ ಔಷಧ ಪ್ರಯೋಗ ನಡೆಸುವ ಹುಮ್ಮಸ್ಸಿನಲ್ಲಿದ್ದಾನೆ

ರಮೇಶಬಾಬು. ಸುತ್ತಮುತ್ತ ಡಾಕ್ಟರುಗಳು ವಾರ್ಡ್‌ಬಾಯ್‌ಗಳು ನರ್ಸ್‌ಗಳು ಕೂಡಿದ್ದ ಸುಂದರ ಚಿತ್ರ...

"ದೊಡ್ಡಪ್ಪಾ! ತಲೆನೋವಿನ ಮಾತ್ರೆ ಎಲ್ಲಿದೆ?"

"ಅ....ಆ...ಆ...."

"ತಲೆ ನೋವಿನ ಮಾತ್ರೆ ಎಲ್ಲಿದೆ?"

"ಮೇಜಿನ ಮೇಲಿದೆ ..."

"ಇದೇ ಏನು?"

"ಆ...ಆ... ಅದೇ ಹೌದು."

ನಿದ್ದೆಯ ಮಂಪರದಲ್ಲೇ ಕಿವಿಗೆ ತಾಗಿದ ಪ್ರಶ್ನೆಗಳಿಗೆ ಉತ್ತರಿಸಿದ್ದ ರಮೇಶಬಾಬು. ಲೀಲಾ ಮೇಜಿನ ಮೇಲಿದ್ದ ಶೀಶೆಯಿಂದ ಒಂದು ಮಾತ್ರೆಯನ್ನು ತೆಗೆದುಕೊಂಡು ಓಡಿದಳು ಕೊಠಡಿಗೆ. ಬಹುಶಃ ಎಚ್ಚರವಾದಾಗ ಹೊತ್ತು ನಾಲ್ಕರ ಅಂಚನ್ನು ದಾಟಿತ್ತು. ಹಗಲು ನಿದ್ದೆಯನ್ನು ಕಂಡು ಎಷ್ಟು ಕಾಲವಾಗಿತ್ತೋ....ಅಂದು ಸುಖನಿದ್ದೆಯಲ್ಲಿ ಸ್ವರ್ಗ ಸೌಖ್ಯವನ್ನೇ ಕಂಡಿದ್ದ ರಮೇಶಬಾಬು. ಕಣ್ಣುಗಳಿಗೆ ಮುತ್ತಿದ ನಿದ್ದೆ ಹರಿಯುವವರೆಗೂ ಕಣ್ದೆರೆಯಲಾಗಲಿಲ್ಲ. ಹಾಗೇ ಮಲಗಿಕೊಂಡು ಕನಸಿನಲ್ಲಿ ಕಂಡ ಎಸ್. ಬಿ.ಯ ಪ್ರಯೋಗವನ್ನು ನೆನೆದು ಪುನಃ ಸ್ಮರಿಸಿಕೊಳ್ಳುತ್ತ ವಿಚಾರ ಶೀಲನಾದ.

ನಿದ್ದೆಯ ಜಾಲದಿಂದ ಬಿಡುಗಡೆ ಹೊಂದಿ ಎದ್ದು ಕುಳಿತಾಗ ಮೇಜಿನ ಮೇಲಿದ್ದ ಮಾತ್ರೆಯ ಭರಣಿ ಸ್ಥಳಾಂತರಿಸಲ್ಪಟ್ಟುದು ಕಂಡುಬಂತು. ಏನಿರಬಹುದೆಂದು ಭರಣಿಯನ್ನು ತೆರೆದು ನೋಡಿದರೆ ಒಂದು ಮಾತ್ರೆ ಮಾಯವಾಗಿತ್ತು...ಎಲ್ಲಾದರೂ ಪ್ರತ್ಯೇಕವಾಗಿ ಇಡಬೇಕಾಗಿತ್ತು, ಇಲ್ಲಿಟ್ಟು ತಪ್ಪು ಮಾಡಿದೆ...ಎನಿಸಿದಾಗಲೇ ಲೀಲಾ ಬಾಗಿಲಲ್ಲಿ ಕಾಣಿಸಿಕೊಂಡಳು.

"ಇದರಿಂದ ಮಾತ್ರೆ ತೆಗೆದೆಯಾ ಲೀಲಾ?"

"ಹೌದು ದೊಡ್ಡಪ್ಪಾ! ಆಗಲೇ ನಾನು ನಿಮ್ಮನ್ನು ಕೇಳಿದೆನಲ್ಲಾ?"

ಆಶ್ಚರ್ಯದ ಮೇಲೆ ಆಶ್ಚರ್ಯ...ಭಯದ ಮೇಲೆ ಭಯ. ಏನು, ಮಾಡುವುದಕ್ಕೂ ತೋಚದಂತಹ ಸನ್ನಿವೇಶ ! ಒಂದು ಗಳಿಗೆ ಮರವಟ್ಟಂತೆ, "ಏಕೆ ತೆಗೆದೆ ? ಯಾರಿಗೆ ಕೊಟ್ಟೆ ?"

"ಅಪ್ಪನಿಗೆ ತುಂಬ ತಲೆನೋವಂತೆ. ನಿಮ್ಮ ಬಳಿ ಮಾತ್ರ ಈಸಿಕೊಂಡು ಬಾ ಎಂದರು...ಅದಕ್ಕೇ ನಿಮ್ಮನ್ನು ನಾನು ಕೇಳಿದ್ದು."

"ನೀನು ಬಂದು ಕೇಳಿದೆಯಾ ?"

"ಹೌದು...ಆಗ ಅದನ್ನೇ ಕೇಳಿದ್ದು."

ರಮೇಶಬಾಬು ದಂಗು ಬಡಿದಂತೆ ಕಲ್ಲಿಗಿಂತ ಕಲ್ಲಾದ. ಹೃದಯ ವ್ಯಾಪ್ತಿಗೆ ಮೀರಿ ಮಿಡಿಯಿತು ದಡದಡನೆ. ತಲೆ ಸಿಡಿದು ಸಹಸ್ರ ಹೋಳಾಗುವಂತೆ ಭಾಸವಾಯಿತು. ಅವಳ ಹಿಂದೆಯೇ ಒಳಹೋದ. ನಿದ್ದೆಯ ಮಬ್ಬಿನಲ್ಲಿ ಅವಳೇನು ಕೇಳಿದಳೋ ತಾನೇನು ಹೇಳಿದೆನೋ ಗೊತ್ತಿಲ್ಲ.

ಸತೀಶಬಾಬು ಅದೇ ತಾನೆ ಎದ್ದು ಹೊರಬರುತಿದ್ದ ಕೊಠಡಿಯಿಂದ.

"ನಿನ್ನ ಮಾತ್ರೆ ತುಂಬಾ ರಿಲೀಫ್ ಕೊಟ್ಟಿದೆ. ಆಗ ತಲೆ ಸಿಡಿಯುವಂತೆ ನೋಯುತಿತ್ತು." ಅಂದ, ಎರಡೂ ಕೈಗಳಿಂದ ತಲೆಯನ್ನು ಒತ್ತಿಕೊಳ್ಳುತ್ತ.

ಅವನು ಹಾಗೆಂದರೂ ಏನಾದರೂ ಹೇಳಬೇಕೆಂದರೆ ನುಡಿಗಳು ಹೊಮ್ಮತ್ತಿಲ್ಲ. ಸುಮ್ಮನೆ ಸಹಜವಾಗಿ "ದೇವರು ದೊಡ್ಡವನು" ಎಂದ.

o o o o

ಪದ್ಮಭೂಷಣ ಪ್ರಶಸ್ತಿ ವಿಜೇತ ರಮೇಶಬಾಬುವನ್ನು ಅಭಿನಂದಿಸಲು ಜನರ ಮೇಳವೇ ನೆರೆಯುತ್ತದೆ ಮನೆಯಲ್ಲಿ. ಸಹ ವಿಜ್ಞಾನಿಗಳೂ, ಅಭಿಮಾನಿಗಳೂ, ಬಂಧುಬಳಗದವರೂ ಅಭಿನಂದಿಸಲು ಬರುತ್ತಲೇ ಇರುತ್ತಾರೆ ಹಣ್ಣು ಹೂವುಗಳ ಸಹಿತ. ಆ ಜನ ಸಂತೆಯನ್ನು ನೋಡುತಿದ್ದರೆ ತನ್ನ ಅಲ್ಪತ್ವ ಅಂಗೈ ನೆಲ್ಲಿ ಕಾಯಿಯಂತೆ ಸುಸ್ಪಷ್ಟ ಸತೀಶ ಬಾಬುವಿಗೆ. ಇನ್ನು ಮುಂದಾದರೂ ತನ್ನ ಚರ್ಯೆಯನ್ನು ಬದಲಿಸಿಕೊಳ್ಳುವ ಸದಿಚ್ಛೆ ಮೂಡಿತು ಮನದಲ್ಲಿ. ಸತೀಶ ಬಾಬು ಅನುಕ್ರಮವಾಗಿ ತನ್ನನ್ನು ತಾನು ಸುಧಾರಿಸಿಕೊಳ್ಳಲು ಸರ್ವ

ಸಾಹಸಾ ಪ್ರಯತ್ನಿಸತೊಡಗಿದ. ಕೋಪ ತಾಪಗಳು ಎಷ್ಟೋ ಹಿಂದಾದುವು. ಪ್ರೀತಿ ವಿಶ್ವಾಸಗಳು ಮೊಳಕೆಯೊಡೆದುವು. ಮಾನವೀಯತೆಯತ್ತ ನಡೆದ. ಕ್ರಮಕ್ರಮೇಣ ಅವನಲ್ಲಿ ಉಂಟಾದ ಬದಲಾವಣೆಗೆ ಕಾರಣ ಅಣ್ಣನ ಜೀವನ ಮಾದರಿ.

ಅನುಭವ ಬಲಿತು ಕಟು ಮನ ಕರಗಿತು ಬಿಸಿಲಟ್ಟಿದ ಮಂಜಿನಂತೆ.

ಈಗೀಗ ಏನೋ ಒಂದು ಬಗೆಯ ಆರೋಗ್ಯಭರಿತ ಸೌಮ್ಯಕಳೆ ಮುಖದ ಮೇಲೆ. ಇನ್ನೇನೋ ಒಂದುಬಗೆಯ ಗೆಲುವು, ಮತ್ತೇನೋ ಒಂದು ಬಗೆಯ ಆತ್ಮ ಶಾಂತಿ ಕಂಡು ಬರುತ್ತದೆ ದಿನಚರಿಯ ಚಲನವಲನಗಳಲ್ಲಿ. ಆದರೆ, ಅದು ಎಸ್. ಬಿ. ಔಷಧಿಯ ಪರಿಣಾಮ ಎಂದೇನೂ ಹೇಳುವಂತಿಲ್ಲ. ಅಂತೂ, ಅದೊಂದು ಮಹತ್ತರ ಘಟ್ಟ.

ರಮೇಶ ಬಾಬುವಿಗೆ ಪ್ರಯೋಗ ಶಾಲೆಗೆ ಹೋಗಲು ಬಿಡುವು ದೊರೆಯ ದಷ್ಟು ಅಭಿಮಾನಿಗಳು ಬರುತಿದ್ದುದರಿಂದ ಎರಡು ಮೂರು ದಿನಗಳು ಮನೆ ಯಲ್ಲೇ ಉಳಿಯಬೇಕಾಯಿತು; ರಮೇಶ ಅಭಿಮಾನಿಗಳನ್ನು ಪ್ರತಿವಂದಿಸಿದ, ವಿನಯ ಪೂರ್ವಕವಾಗಿ. ಅವನು ಒಳಬಂದಾಗ ತಾಯಿಯ ಮುಖದ ಮೇಲೆ ಬೆಳಗಿದ ಅಪೂರ್ವ ಆನಂದ ಒಡಲಿನ ಪ್ರೀತಿ ಪುರಸ್ಕಾರವನ್ನು ಸೂಚಿಸಿತು. ಅವಳು ಎರಡೂ ಕೈಗಳಿಂದ ಮುಖವನ್ನು ನೇವರಿಸಿ "ದೇವರು ದೊಡ್ಡವನು. ಮುಂದೆಯೂ ನಿನ್ನನ್ನು ಹರಸಲಿ." ಎಂದಳು.

"ನೀವೂ ಅಷ್ಟೇ ದೊಡ್ಡವರು."

ರಮೇಶ ಬಾಬು ನಮಸ್ಕರಿಸಿದ.

ತಾಯಿ ಪ್ರಸನ್ನವದನೆಯಾದಳು ಮಾತಾಡಲಿಲ್ಲ.

ಸತೀಶ ಬಾಬು ವರಾಂಡದಲ್ಲಿ ಮೇಜಿನ ಮೇಲೆ ತುಂಬಿದ್ದ ಹಣ್ಣು ಹಾರ ಗಳನ್ನು ತಂದ. ಮಕ್ಕಳು ಹಣ್ಣುಗಳಿಗಾಗಿ ಕೈ ಚಾಚಿದರು ಸಕ್ಕರೆಯ ಅಕ್ಕರೆ ಯಿಂದ. ನಳಿನಿ ಅಭಿಮಾನದಿಂದ ನೋಡಿದಳು. ಮನಃಪ್ರಾಣಗಳಲ್ಲಿ ಉಲ್ಲಾಸದ ಝರಿ ಹರಿದಾಡಿತು ತಾನರಿಯದಂತೆಯೇ.

ರಮೇಶಬಾಬು ಅಂದ,

"ನಾನಂದು ನಿದ್ದೆಯಲ್ಲಿದ್ದಾಗ ಲೀಲಾ ಬಂದು ಮಾತ್ರೆ ಕೇಳಿದ್ದೇ ಗೊತ್ತಿಲ್ಲ. ಅವಳೇನೋ ಕೇಳಿದ್ದಾಳೆ. ನಾನೇನೋ ಹೇಳಿದ್ದೇನೆ. ಅವಳು ಮಾತ್ರೆಯನ್ನು ಒಯ್ದು ನಿನಗೆ ಕೊಟ್ಟಿದ್ದಾಳೆ. ನಾನು ಎಚ್ಚರವಾಗಿ ಶೀಶೆಯ ಸ್ಥಳಾಂತರವನ್ನು ನೋಡಿದಮೇಲೆಯೇ ಗೊತ್ತು, ಅವಳು ಮಾತ್ರೆ ಒಯ್ದ ವಿಷಯ. ಒಮ್ಮೆ ದಿಗ್ಭ್ರಮೆ ಹೊಂದಿದೆ. ನಿನಗೆ ಯಾವ ದುಷ್ಪರಿಣಾಮ ಆಗ ದಿರಲಿ ಎಂದು ಪ್ರಾರ್ಥಿಸಿಕೊಂಡೆ. ನೀನು ತಿಂದು ಎಷ್ಟೋ ಹೊತ್ತಾಗಿತ್ತು. ನಾನೂ ಏನೂ ಮಾಡುವಂತಿರಲಿಲ್ಲ. ಸುಮ್ಮನೆ ಕಾದು ನೋಡುವುದೊಂದೇ ಉಳಿದಿತ್ತು. ದೇವರ ದಯದಿಂದ ಉತ್ತಮ ಫಲಿತಾಂಶ ದೊರೆಯಿತು. ಹುಚ್ಚ ರಾಸ್ಪತ್ರೆಯ ರೋಗಿಗಳಿಗೆ ಪ್ರಯೋಗಿಸಿ ನೋಡಬೇಕೆಂದಿದ್ದೆ. ಅದರ ಮೇಲೆ ಸೂಕ್ತ ಅಂಕಿತ ಹಾಕಿರಲಿಲ್ಲ. ಇನ್ನೂ ರಿಜಿಸ್ಟ್ರೇಷನ್ ಆಗಿರಲಿಲ್ಲ. ಅಂತಹ ಪ್ರಥಮ ಹಂತದಲ್ಲೇ ಮನೆಯವರ ಮೇಲೆ ಪ್ರಯೋಗ ನಡೆದೀತೆಂದು ನಾನು ಕನಸಿನಲ್ಲಿಯೂ ಭಾವಿಸಿರಲಿಲ್ಲ. ಅದರಿಂದೇನಾದರೂ ತೊಂದರೆಯಾಗಿದ್ದಿದ್ದರೆ ನನ್ನ ಕತೆ ಏನಾಗುತಿತ್ತೋ ... ದೇವರಿಗೇ ಗೊತ್ತು. ಇದೊಂದು ಉದಾಹರಣೆ, ಅನುಕೂಲವಾಗಿ ಪರಿಣಮಿಸುವ ಸಂದರ್ಭದಲ್ಲಿ ವಿಷವೂ ಅಮೃತವಾಗುತ್ತದೆ. ಇಲ್ಲದಿದ್ದಲ್ಲಿ ಅಮೃತ ಕುಡಿಸಿದರೂ ಅದು ವಿಷವಾದೀತು ..."

ಸತೀಶ ಮಾತಾಡಲಿಲ್ಲ, ಮುಗುಳು ನಕ್ಕ.

ಸ್ವಾಮಿನಿ ಅಪೂರ್ವ ಸಮಾಧಾನದಿಂದ ನುಡಿದಳು,

"ನಿಮಗ್ಯಾರಿಗೂ ತಿಳಿಯದಿದ್ದ ಒಂದು ಅದ್ಭುತ ರಹಸ್ಯವನ್ನು ಇಂದು ಬಹಿರಂಗ ಪಡಿಸುವೆ. ನಮಗೆ ಮದುವೆಯಾಗಿ ಆರೇಳು ವರ್ಷಗಳ ಕಾಲ ಸಂತತಿ ಪ್ರಾಪ್ತವಾಗಲೇ ಇಲ್ಲ. ಅದಕ್ಕಾಗಿ ಯಾತ್ರೆ, ಪೂಜೆ, ವ್ರತಗಳನ್ನೆಲ್ಲಾ ಮುಗಿಸಿದ್ದೆ. ಆದರೂ ಆಗಲಿಲ್ಲ. ಆಸ್ಪತ್ರೆಯಲ್ಲಿ ತಬ್ಬಲಿ ಮಗು ಇರುವುದು ತಿಳಿಯಿತು. ಆರೇಳು ದಿನದ ಮಗು. ಮಕ್ಕಳಿಲ್ಲದ ನಾನು ಅದನ್ನು ತಂದು ನನ್ನದಾಗಿಸಿಕೊಂಡು 'ರಮೇಶ ಬಾಬು' ಎಂದು ಹೆಸರಿಸಿ ಕಾಪಾಡಿಕೊಂಡೆ. ಅನಂತರ ಎರಡು ಮೂರು ವರ್ಷಗಳ ಒಳಗಾಗಿ ಸತೀಶ ಬಾಬುವನ್ನು ಹೆತ್ತೆ. ರಮೇಶ ರಜಪೂತರ ಮಗು. ಮಗುವಿಗೆ ನಾಲ್ಕಾರು ವರ್ಷ ವಯಸ್ಸಾಗುವ

ವರೆಗೆ ತಂದೆ ಬದುಕಿದ್ದರು. ಮಗುವನ್ನು ನೋಡಲು ಆಗಾಗ ಬಂದು ಹೋಗುತಿದ್ದರು."

ಒಮ್ಮೆಲೇ ಆಶ್ಚರ್ಯದಿಂದ ಡಂಗಾದರು ಎಲ್ಲಾ. ತಮ್ಮ ಕಿವಿಗಳನ್ನೇ ನಂಬಲಾರದಂತಹ ಆಶ್ಚರ್ಯಾತಿಆಶ್ಚರ್ಯ. ಪರಸ್ಪರ ಮುಖ ನೋಡಿ ಕೊಂಡರು. ರಮೇಶ ಬಾಬುವಿಗೆ ಈಗ ತಮ್ಮಿಬ್ಬರಲ್ಲಿರಬಹುದಾದ ಅಂತರದ ಅರಿವಾಯಿತು. ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ "ಹಾಗೇನೂ ?" ಎಂದ ಮುಗುಳ್ನಗೆ ಬೀರಿ. ಶೀತ ದೇಶದ ಶೈತ್ಯದಂತೆ ಶೀತಲವಾಗಿತ್ತು ಧ್ವನಿ.

"ನಿಜವಾಗಿಯೂ ಹೌದಾ ?" ಎಂದ ಸತೀಶ ಬಾಬು ಪುನಃ "ಬೇರೆ ಯಾರೂ ಈ ವಿಷಯ ತಿಳಿಸದಿರುವುದೂ ಸಹ ಆಶ್ಚರ್ಯವೇ."

"ನಿಮ್ಮಿಬ್ಬರಲ್ಲಿರುವ ದೈಹಿಕ ಮತ್ತು ಮಾನಸಿಕ ಅಂತರವೇ ಹೇಳುತ್ತದೆ. ನಾನಿನ್ನೇನು ಹೊಸದಾಗಿ ಹೇಳಬೇಕು ?"

"ನನ್ನ ಸಮಸ್ಯೆಗೆ ಈಗ ಉತ್ತರ ಸಿಕ್ಕಿತು ಅಮ್ಮಾ !"

ತನ್ನ ಒಡಲ ಸಂತಸವನ್ನು ತೋಡಿಕೊಂಡ ರಮೇಶ ಬಾಬು.

ನಳಿನಿ ಆಶ್ಚರ್ಯ ಚಕಿತಳಾದಳು. ಮಾತಾಡಲಿಲ್ಲ.

— ० —

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧) ಜೀವನಗಂಗಾ
೨) ಡಾ|| ಅಘೋರ
೩) ಡಾ|| ಕಮಲೇಶ್
೪) ವಂದೇ ಮಾತರಂ
೫) ಅನಂತಾನಂತದೆಡೆಗೆ
೬) ಮನೋನ್ಮಣಿ
೭) ಸಂತ್ರಾಸಿನಿ
೮) ಆಸೆಯ ಸುಳಿಯಲ್ಲಿ

(ಕಥಾ ಸಂಕಲನ)

೯) ಬಹುರತ್ನಾವಸುಂಧರಾ
೧೦) ರತ್ನಗರ್ಭಾವಸುಂಧರಾ
೧೧) ಸುಧಾಮಣಿ
೧೨) ರಮಣೀಮಣಿ
೧೩) ಲಿಯೋನಾ
೧೪) ಶ್ರೀಮುಖಿ
೧೫) ಶ್ರೀಹರ್ಷಲಾ
೧೬) ವೈಶಾಖೀ ಪರ್ವ
೧೭) ಫಾಲ್ಗುಣೀ ಪರ್ವ
೧೮) ಮಣಿಮೇಖಲಾ
೧೯) ಮಣಿಕರ್ಣಿಕಾ

(ಕವಿತಾ ಸಂಕಲನ)

೨೦) ಪೂಜಾವಸಾನ ಸಮಯೇ....!
೨೧) ಧ್ಯಾನಾವಸಾನ ಸಮಯೇ....!
೨೨) ಗಗನ ಕುಸುಮ
೨೩) ಜೀವನ ಕುಸುಮ
೨೪) ಚಂಪಕ ರಾಜಿ
೨೫) ಬಕುಳ ರಾಜಿ

# ಮಲ್ಲಿಕಾ ಕೃತಿಗಳು

(ಕವಿತಾ ಸಂಕಲನ)

೨೬) ಕಸ್ತೂರಿ ಮಾಲಿಕಾ
೨೭) ಮಂದಾರ ಮಾಲಿಕಾ
೨೮) ವಿಜಯ ಗಾಥಾ
೨೯) ಗಾನ ತೀರ್ಥ
೩೦) ನಾದ ಬಿಂದು
೩೧) ಕಾವ್ಯಾನಂದ ನಂದಿನಿ
೩೨) ಭಾವಾನಂದ ನಂದಿನಿ

(ಸಂಜೀವನ ಕಾವ್ಯ)

೩೩) ಮಂಗಳ ಭಾರತಿ
೩೪) ಕಲ್ಯಾಣ ಭಾರತಿ
೩೫) ಉತ್ತರೋತ್ತರಣಿ
೩೬) ರಾಗಾನುರಾಗಿಣಿ
೩೭) ಪ್ರಫುಲ್ಲ ಭಾರತ

(ಪೌರಾಣಿಕ ನಾಟಕ)

೩೮) ಪುಣ್ಯಪಯೋನಿಧಿ
೩೯) ಪುಣ್ಯಾಭಿಸಾರ

(ಸಾನೆಟ್‌ಗಳು)

೪೦) ತರಂಗಿಣಿ

(ಗದ್ಯ ಕಾವ್ಯ)

೪೧) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೪೨) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೪೩) ದೂರ ದೇಶದಲ್ಲಿ
೪೪) ಬೆಳದಿಂಗಳ ರಾತ್ರಿ
೪೫) ರಂಗನ ಸಾಹಸ
೪೬) ಓಹಿಯೋಜ ಸರೋವರ
೪೭) ಕೌಶಿಕನ ಗೊಂಬೆ
೪೮) ವಿಶೇಷ ಸುದ್ದಿ

---

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು–560 025